# ಶುಭ ಘಳಿಗೆ

ಪದ್ಮಾ ಶ್ರೀಧರ್

ಸೌಮ್ಯ ಎಂ.
ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು
ನಂ. 7/1 'ವೈದೇಹಿ', ಎಂ.ಎನ್. ಕೃಷ್ಣರಾವ್ ಪಾರ್ಕ್ ಎದುರು
ದಿವಾನ್ ಮಾದವರಾವ್ ರಸ್ತೆ, ಬಸವನಗುಡಿ,
ಬೆಂಗಳೂರು - 560 004.

***Shubha Ghalige*** a novel written by Padma Sridhar
Published by Sowmya M. 7/1, Opp M.N. Krishna Rao
Park, Basavanagudi, Bangalore - 04

ಮೊದಲ ಮುದ್ರಣ: 2007

ಪುಟಗಳು: 260 +4 = 264

ಬಳಸಿದ ಕಾಗದ: 70 GSM ಮ್ಯಾಪ್‌ಲಿಥೊ

ಬೆಲೆ: ರೂ. 120=00

ಮುಖಪುಟ : ಆರ್ಟ್ ಫೋಕಸ್

**ಸೌಮ್ಯ ಎಂ.**
ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು
ನಂ. 7/1 'ವೈದೇಹಿ', ಎಂ.ಎನ್. ಕೃಷ್ಣರಾವ್ ಪಾರ್ಕ್ ಎದುರು
ದಿವಾನ್ ಮಾದವರಾವ್ ರಸ್ತೆ, ಬಸವನಗುಡಿ,
ಬೆಂಗಳೂರು - 560004.

ಡಿ.ಟಿ.ಪಿ.:
ಲೆಜರ್ ಲೈನ್ ಗ್ರಾಫಿಕ್ಸ್
ಬೆಂಗಳೂರು-27. ದೂರವಾಣಿ: 22278231.

ಮುದ್ರಣ : ಅಶ್ವಿನಿ ಪ್ರಿಂಟರ್ಸ್
ಕಾಟನ್‌ಪೇಟೆ
ಬೆಂಗಳೂರು–53

## ಲೇಖಕಿಯ ನುಡಿ

ಓದುಗರೇ ನಮಸ್ಕಾರಗಳು. "ಶುಭಘಳಿಗೆ" ನನ್ನ ಇಪ್ಪತ್ತೆರಡನೆಯ ಕಾದಂಬರಿ. ಕೌಟುಂಬಿಕ ಪಾತ್ರಗಳನ್ನೊಳಗೊಂಡ ಅಪ್ಪಟ ಸಾಮಾಜಿಕ ಕಾದಂಬರಿ. ಮಧ್ಯಮ ವರ್ಗದ, ಸಂಪ್ರದಾಯಸ್ಥ ಕುಟುಂಬದವರ ಮನೆಯ ಕತೆಯನ್ನೊಳಗೊಂಡಿದೆ. ಮನೆಯಲ್ಲಿ ನಡೆಯುವ ಘಟನೆಗಳು, ಸಮಾರಂಭಗಳು, ಪಾತ್ರಗಳಾಡುವ ಸಂಭಾಷಣೆಗಳೊಂದಿಗೆ ರಚಿತವಾಗಿದೆ. ಕುಟುಂಬದ ಸದಸ್ಯರ ನಡುವೆ ಬರುವ ಭಿನ್ನಾಭಿಪ್ರಾಯ, ಮನಸ್ತಾಪಗಳು, ಕುಹಕದ ನುಡಿಗಳು, ಚುಚ್ಚುಮಾತುಗಳು, ಹರಟೆಗಳು ಕತೆಯಲ್ಲಿ ವಿಸ್ತಾರಗೊಂಡಿದೆ. ಮನೆಯಲ್ಲಿ ಉದ್ಭವವಾಗುವ ಸಮಸ್ಯೆಗಳು ಪರಿಹಾರಗೊಳ್ಳಲೇಬೇಕಲ್ಲವೇ? ಭಿನ್ನವಾದ ವಿಷಯವನ್ನು ಎತ್ತಿಕೊಂಡು ಕತೆಯನ್ನೂ ಪ್ರಾರಂಭಿಸಿದ್ದೇನೆ. ಅಲ್ಲಿಂದ ಮುಂದುವರೆದ ಕತೆ, ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವಾಗ ಮುಕ್ತಾಯವಾಗುತ್ತದೆ. ಇದು ಕಾದಂಬರಿಯ ಸಾರ.

ಈ ಮೊದಲು ನಾನು ಬರೆದ ಕಾದಂಬರಿಗಳನ್ನು ಅಭಿಮಾನಿ ಓದುಗರು ಮೆಚ್ಚಿದ್ದೀರಿ. ಅಂತೆಯೇ ಈ ಕಾದಂಬರಿಯೂ ನಿಮಗೆಲ್ಲರಿಗೂ ಮೆಚ್ಚುಗೆಯಾಗಲಿ ಎಂಬ ಆಶಯ ನನ್ನದು.

ಈ ಕಾದಂಬರಿಯ ಪ್ರಕಟಣೆಯ ಹೊಣೆಯನ್ನು ಹೊತ್ತಿರುವ ಪ್ರಕಾಶನದ ಸದಸ್ಯರೆಲ್ಲರಿಗೂ ನನ್ನ ಕೃತಜ್ಞತೆಗಳು. ಕಲಾವಿದರಿಗೆ ಧನ್ಯವಾದಗಳು.

ವಂದನೆಗಳೊಂದಿಗೆ,

ಪದ್ಮಾಶ್ರೀಧರ್

# ಶುಭ ಫಳಿಗೆ

ಎರಡು ದಿನಗಳಿಂದ ರಾಧಾಳ ಮನಸ್ಸು ಯಾಕೋ ಸರಿ ಇರಲಿಲ್ಲ. ಏನೋ ಕಳವಳ. ಏನೋ ತಳಮಳ; ಏನೋ ಶಂಕೆ. ಅದೇನೆಂದು ತಿಳಿಯಲಾಗುತ್ತಿರಲಿಲ್ಲ. ಅದಕ್ಕೆ ಕಾರಣ, ಅತ್ತೆಯ ಕಿರಿಕಿರಿಯ ಮಾತುಗಳೋ? ಡೆಲ್ಲಿಗೆ ಹೋಗಿದ್ದ ಪತಿಯಿಂದ ಫೋನು ಬಂದಿರಲಿಲ್ಲವೆಂದೋ... ಅಥವಾ ಮಧುರಳ ಚಿಂತೆಯೋ...

ಮಧುರ ರಾಧಾಳ ಹಿರಿಯ ಮಗಳು. ಹೈಸ್ಕೂಲಿನ ಎರಡನೇ ವರ್ಷದಲ್ಲಿ ಓದುತ್ತಿದ್ದಳು. ಚೆನ್ನಾಗಿ ಬೆಳೆದಿದ್ದಳು. ಅಂಗಾಂಗಗಳಲ್ಲಿ ಯೌವನವು ಇಣುಕಿತ್ತು. ಬೀದಿಯ ಪಡ್ಡೆ ಹುಡುಗರು ಅವಳ ಕಡೆಗೊಮ್ಮೆ ನೋಡಿ ಹೋದರೂ, ರಾಧಾಳ ಎದೆ ಢವಗುಟ್ಟುತ್ತಿತ್ತು. ಪಕ್ಕದ ಮನೆಯ ನಂದಿನಿ ವಾರದ ಕೆಳಗೇ ಎದುರಿಗೆ ಸಿಕ್ಕಾಗ ಕೇಳಿದ್ದಳು.

"ಇದ್ದಕ್ಕಿದ್ದ ಹಾಗೇ ನಿಮ್ಮ ಮಗಳು ಎಷ್ಟು ಬೆಳೆದುಬಿಟ್ಟಿದ್ದಾಳೆ. ನೋಡ್ಡೋರ ಕಣ್ಣು ಬೀಳೋ ಚೆಲುವೆಯಾಗಿ ಬಿಟ್ಟಿದ್ದಾಳೆ. ಇನ್ನು ಏನೂ ಸುದ್ದಿ ಇಲ್ವಾ! ಅಥವಾ ನಿಮ್ಮ ಅತ್ತೆಯ ಮಡಿಗೆ ಹೆದರಿ ಮುಚ್ಚಿಟ್ಟು ಬಿಟ್ಟಿದ್ದೀರೋ...? ಕಿಸಕ್ಕನೆ ನಕ್ಕಿದ್ದಳು ರಾಧಾ ತಬ್ಬಿಬ್ಬಾಗಿದ್ದಳು.

"ಅಂದರೇ! ನಂದಿನಿ ಏನ್ಹೇಳ್ತಿದ್ದೀರಿ ನೀವು?"

"ನಾನ್ಹೇಳ್ತಿದೀನಿ ಅಂತ ತಿಳೀಲಿಲ್ವಾ ರಾಧಮ್ಮಾ. ನೀವೂ ಹೆಂಗಸೇ... ಮಧುರಂದು ಏನೂ ಸುದ್ದಿ ಇಲ್ವಾ ಅಂತ ಕೇಳ್ದೆ. ಒಳ್ಳೇ ರಸ ತೊಟ್ಟಿಕ್ಕುವ ಹಾಗೆ ಬೆಳೆದಿದ್ದಾಳೆ. ಸ್ವಲ್ಪ ಎಚ್ಚರಿಕೆಯಿಂದ ಇರಿ. ವಿಚಾರಿಸ್ತಾ ಇರಿ. ಈಗಿನ ಕಾಲದ ಹುಡುಗೀರು... ಸ್ನೇಹಿತೇರೂ ಏನೇನೋ ಹೇಳಿಕೊಡ್ತಾರೆ... ನಂಗೇನೋ ಅನುಮಾನ.... ನಿಮ್ಮ ಮಗಳ ಹತ್ರ ಮಾತಾಡೋಕೆ ನಿಮಗೆ ಹಿಂಜರಿಕೆ ಆದ್ರೆ ನಂಗ್ಹೇಳಿ. ನಾನು ಅವಳ ಹತ್ರ ಮಾತಾಡ್ತೀನಿ."

"ಹಾಗೆಲ್ಲಾ ಏನಿಲ್ಲ ನಂದಿನಿ. ಬೀದೀಲಿ ಈ ಮಾತೆಲ್ಲಾ ಯಾಕೆ! ಒಳಗೆ ಬನ್ನಿ..."

"ಇಲ್ಲ. ಸ್ವಲ್ಪ ಅರ್ಜೆಂಟು ಕೆಲ್ಸ ಇದೆ. ಸಾಯಂಕಾಲ ಮಧುರ ಸ್ಕೂಲ್ನಿಂದ ಬಂದ್ಮೇಲೆ ಬರ್ತೀನಿ." ನಂದಿನಿ ಹೊರಟುಹೋಗಿದ್ದಳು. ಬಿರುಗಾಳಿ ಬೀಸಿ, ಮನಸ್ಸು, ಚದುರಿ ಹೋಗಿತ್ತು. ಅಬ್ಬಾ ಈ ಹೆಣ್ಮಕ್ಳು ಎಷ್ಟು ಬೇಗ ಬೆಳೆದುಬಿಡ್ತಾರೆ! ತಾನು ಈ ಮನೆಗೆ ಸೊಸೆಯಾಗಿ ಬಂದಾಗ, ತಾನೂ ಯುವತಿಯೇ.... ತನ್ನ ಗಂಡ ಕೇಶವ, ತನ್ನ ಯೌವನದ ಸೊಬಗನ್ನು ಚೆನ್ನಾಗಿಯೇ ಉಪಯೋಗಿಸಿಕೊಂಡಿದ್ದ. ಮದುವೆಯಾದ ಮೂರು ತಿಂಗಳಿಗೇ ತಾನು ಗರ್ಭಿಣಿಯಾಗಿದ್ದೆ. ಆದರೆ ಮೊದಲ ಬಾರಿ ಈ ಮನೆಗೆ ಬಂದ ನಂತರ ತಿಂಗಳ ರಜೆಯಲ್ಲಿ ತಾನು ಅನುಭವಿಸಿದ್ದು?... ಮನಸ್ಸು ಮರಡುಗಟ್ಟಿತು.

ಅತ್ತೆ ಬಹಳ ಮಡಿ ಎಂದು ಮುಂಚೆಯೇ ತಿಳಿದಿತ್ತು. ಆದರೆ ಒಬ್ಬ ಹೆಂಗಸಾಗಿ, ಸೊಸೆಯೂ ಹೆಣ್ಣು. ಅದೂ ಈ ಮನೆಗೆ ಹೊಸದಾಗಿ ಬಂದಿರುವವಳು ಎಂಬುದನ್ನೂ ಮರೆತಂತಿತ್ತು.

ತಾಯಿಯ ಮನೆಯಲ್ಲೂ ಮಡಿ, ಮೈಲಿಗೆಯ ಆಚಾರ ವಿಚಾರಗಳು ಪದ್ಧತಿಯಲ್ಲಿತ್ತು. ಆದರೆ ಅಲ್ಲಿ ಕೆಲವು ರಿಯಾಯಿತಿಗಳಿದ್ದವು. ನಿತ್ಯವೂ ಸ್ನಾನ ಮಾಡಲು ತಾಯಿ ಬಿಸಿನೀರನ್ನು ಬಕೆಟ್ಟಿಗೆ ತೋಡಿಕೊಡುತ್ತಿದ್ದಳು. ಒಗೆದು ಒಣಗಿಸಿದ ಬಟ್ಟೆಗಳನ್ನು ಉಡಲು ಕೊಡುತ್ತಿದ್ದಳು. ಕುಡಿಯಲು ನಾಲ್ಕಾರು ಬಾರಿ ಕಾಫಿ ಸಿಗುತ್ತಿತ್ತು. ಓದಲು ಪುಸ್ತಕಗಳು. ಕಸೂತಿ ಕೆಲಸ... ಚೌಕಾಬಾರ, ಪಗಡೆ ಇತ್ಯಾದಿ ಆಟಗಳು. ಸ್ಕೂಲಿನ ದಿನಗಳಲ್ಲಿ ಸ್ಕೂಲಿಗೂ ಸಹ ಹೋಗಿಬರುತ್ತಿದ್ದರು...

"ಇಲ್ಲಿ ಹಾಗಲ್ಲ. ಅತ್ತಗೆ ವಿಷಯ ತಿಳಿದೊಡನೆ, ಮಾರುದ್ದ ಹಿಂದಕ್ಕೆ ಹಾರಿದ್ದಳು. "ಇಲ್ಲೀ ತನಕ ಯಾಕೇ ಬಂದಿದೀಯಾ? ಸೀರೆ ಸೆರಗು ತಗುಲ್ತೋ ಏನೋ? ಅಲ್ಲಿಂದ್ಲೇ ಹೇಳ್ಬಾರ್ದಾಗಿತ್ತಾ?.... ತಡೀ ಪಕ್ಕದ್ಮನೆ ಪಂಕಜಮ್ಮನ್ನ ಕರೀತೀನಿ. ನಿಂಗೇನು ಬೇಕೋ ಕೇಳಿ ಇಸ್ಕೋ."

"ನಂಗೇನೂ ಬೇಡ" ರಾಧಾಂಗೆ ಅಳು ಬರುವಂತಾಗಿತ್ತು. ಕೋಪವೂ ಬಂದಿತ್ತು. ಮುಂದಿನ ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡು ಮನಸಾರೆ ಅತ್ತಳು. ತವರು ಮನೆಯನ್ನು ಬಿಟ್ಟುಬಂದಿದ್ದ ದುಗುಡವೆಲ್ಲವೂ ಕಣ್ಣೀರಿನಲ್ಲಿ ಹರಿದು ಹೋಗುವಂತೆ ಅತ್ತಿದ್ದಳು.

ಊಟದ ಸಮಯಕ್ಕೆ ಬಂದ ಕೇಶವ ಹೆಂಡತಿಯನ್ನು ಕಾಣದೇ ತಾಯಿಯನ್ನು ಕೇಳಿದ ಅಡಿಗೆ ಬೇಯಿಸುತ್ತಿದ್ದ ತಾಯಿ ಉದಾಸೀನದಿಂದ ಉತ್ತರಿಸಿದ್ದಳು.

"ನಿನ್ಹೆಂಡ್ತಿ ಮುಟ್ಟು. ಇನ್ನು ಮೂರು ದಿನ ಕಳೀವರ್ಗೂ ಅವಳು ಒಳಗೆ ಬರುಲ್ಲ.... ನಿಂಗೇನಾದ್ರೂ ಬೇಕಾಗಿದ್ರೆ ನನ್ನನ್ನೇ ಕೇಳ್ಬೇಕು."

ಕೇಶವ ಪೆಚ್ಚಾದ. ಅವನಿಗೆ ತಿಳಿದಂತೆ,ತಾಯಿ, ಅಕ್ಕಂದಿರು, ಹತ್ತಿರದ ಸಂಬಂಧಿ ಹೆಣ್ಣು ಮಕ್ಕಳು ಮುಟ್ಟು ಅಂತ ಮೂರು ದಿನ ದೂರವಿರುತ್ತಿದ್ದುದು ಅಪರೂಪವೇನಲ್ಲ. ಆದರೆ ಈಗ ಮಡದಿ ಮುಟ್ಟಾಗಿದ್ದಾಳೆ.... ಅವಳಿಂದ ದೂರವಿರುವುದು ಹೇಗೆ? ಮಾತಾಡಿದರೆ ಮೈಲಿಗೆ ಏನೂ ಅಂಟುವುದಿಲ್ಲ ಎನ್ನುವುದನ್ನು ಬಲ್ಲ. ರೂಮಿನ ಬಾಗಿಲನ್ನು ಕೈ ಬೆರಳಿನಿಂದ ಮೆಲ್ಲನೆ ಬಡಿದ.

"ರಾಧಾ ಬಾಗಿಲು ತೆಗಿ..." ಅವಳು ತೆಗೆಯಲಿಲ್ಲ. ಒಂದು ಗಳಿಗೆ ಅಲ್ಲೇ ನಿಂತ ಮತ್ತೆ ಮತ್ತೆ ಬಾಗಿಲನ್ನು ಬಡಿಯಲು ನಾಚಿಕೆ ಎನಿಸಿತ್ತು. ಅಷ್ಟರಲ್ಲಿ ಪಕ್ಕದ್ಮನೆ ಪಂಕಜಮ್ಮ ಬಂದರು. ಇವನು ಹಾಲಿನಲ್ಲಿ ಹೋಗಿ ಕುಳಿತ.

ಆಕೆ ಇವನ ಕಡೆ ವಿಚಿತ್ರವಾಗಿ ನೋಡಿ ನಕ್ಕಳು. ಇವನಿಗೆ ಅಸಹ್ಯವೆನಿಸಿತ್ತು. ಆಕೆ ಅಡಿಗೆ ಮನೆ ಕಡೆಗೆ ನಡೆದಳು.

"ಗೌರಮ್ನೋರೆ ಇನ್ನೂ ಅಡ್ಗೆ ಆಗಿಲ್ವಾ!" ಆಕೆ ಕೇಳಿದ್ದು ಕೇಳಿಸಿತ್ತು.

"ಹೂಂ. ಆದ ಹಾಗೇ... ನಂಗೆ ಅಂತ ಎಲ್ಲಾ ತೆಗೆದಿಟ್ಟುಕೊಂಡಿದೀನಿ. ನಾನು ಊಟಕ್ಕೆ ಕೂತ್ಕೋತೀನಿ. ನೀವು ಕೇಶವಂಗೆ, ಬಡಿಸ್ತೀರಾ?"

"ಓ... ಅದಕ್ಕೇನಂತೆ" ಎನ್ನುತ್ತಾ ಪಂಕಜಮ್ಮ ತಟ್ಟೆ ಹಾಕಿ, ನೀರಿನ ಬಟ್ಟಲನ್ನಿಟ್ಟು ಕೇಶವನನ್ನು ಕರೆದಳು.

"ನೀವು ಬನ್ನಿ. ನಾನು ಬಡಿಸ್ತೀನಿ. ನಿಮ್ಮ ತಾಯಿ ಊಟ ಮಾಡ್ತಿದಾರೆ"

"ಪರವಾಗಿಲ್ಲ ನೀವು ಹೋಗಿ ನಾನೇ ಬಡಿಸಿಕೊಳ್ತೀನಿ..." ಅಥವಾ ಅಮ್ಮ ಆಮೇಲೆ ಬಡಿಸ್ತಾಳೆ."

"ನೀವು ಬೇಗ ಊಟ ಮಾಡಿದರೆ, ನಿಮ್ಮ ಹೆಂಡ್ತಿಗೂ ಬಡಿಸಬಹುದು. ಪಾಪ ಬೆಳಗ್ನಿಂದ ರೂಮ್ನಲ್ಲೇ ಇದೆ ಆ ಹುಡ್ಗಿ.... ತಿಂಡೀನಾದ್ರೂ ತಿಂದಿದಾಳೋ ಇಲ್ವೋ... ಕರೆದೆ. ಬಾಗಿಲ್ನ ತೆಗೀಲಿಲ್ಲ. ಮಲಗಿಬಿಟ್ಟಿದ್ದಾಳೋ ಏನೋ.?

ಕೇಶವ ಪೆಚ್ಚಾದ. ಹೊಸದಾಗಿ ಮದುವೆ ಆದವಳು. ಇನ್ನೂ ಅವಳ ಬಗ್ಗೆ ಎಷ್ಟೋ ವಿಷಯ ತನಗೆ ತಿಳಿಯದು. ತಿಂಡಿಯನ್ನೂ ತಿನ್ನದೇ ಮಲಗಿರುವವಳನ್ನು ಎಬ್ಬಿಸುವುದು ಹೇಗೆ? ಆಕೆಯ ಎದುರಿನಲ್ಲಿ ಮತ್ತೆ ಬಾಗಿಲನ್ನು ಬಡಿದು ಕರೆಯಲು ಸಂಕೋಚವೆನಿಸಿತು.

"ನೀವು ಅವಳನ್ನು ಕರೀರಿ. ಇಬ್ರೂ ಇಲ್ಲೇ ಊಟಕ್ಕೆ ಕೂತ್ಕೋತೀನಿ. ಇಬ್ರಿಗೂ ಒಟ್ಗೇ ಬಡಿಸೋರಂತೆ..."

"ಛೆ. ಛೆ. ಎಲ್ಲಾದ್ರೂ ಉಂಟೆ! ನಿಮ್ಮ ತಾಯಿಯ ಊಟ ಇನ್ನೂ ಆಗಿಲ್ಲ. ಅವರ ಊಟ ಆಗ್ದೇ ಮುಟ್ಟಾದೋರ್ಗೆ ಬಡಿಸಬಾರದು. ಅವರ ಮಡಿ ಕೆಡುತ್ತೆ."

"ಅವಳೂ ಈ ಮನೆಗೆ ಹೊಸಬ್ಳು. ಈ ಮನೆಯ ರೀತಿ ನೀತಿ ಏನು ಗೊತ್ತಿರುತ್ತೆ?... ಅಮ್ಮನ ಊಟ ಆಗಲಿ ನಾನು ಕಾಯ್ತೀನಿ. ಆಮೇಲೆ ನಾನು ಅವಳಿಗೆ ಬಡಿಸಿ, ನಾನು ಊಟ ಮಾಡ್ತೀನಿ..."

ಪಂಕಜಮ್ಮ ಕೆಟ್ಟದಾಗಿ ನಕ್ಕಳು. "ಪರವಾಗಿಲ್ಲ, ನೀವೂನೂ... ಹೆಂಡ್ತಿ ಚಿಂತೆ ಹೆಚ್ಚಾಗಿರುವ ಹಾಗೇ ಇದೆ... ಇರಲಿ. ಇರಲಿ ಒಳ್ಳೇದೇ.... ನಾನು ಮುಂದಿನ ತಿಂಗಳು ಮಗಳ ಮನೆಗೆ ಹೋಗ್ತಾ ಇದೀನಿ... ಈ ಸಾರಿ ಒಂದು ಸಹಾಯ ಮಾಡುವ ಅವಕಾಶ ಸಿಕ್ಕಿದೆ... ನೋಡ್ತೀನಿ. ನಿಮ್ಮ ತಾಯಿ ಊಟ ಆಗಿದ್ರೆ ನಿಮ್ಮಿಬ್ರಿಗೂ ಬಡಿಸ್ಬಿಟ್ಟೇ ಹೋಗ್ತೀನಿ."

"ಅಮ್ಮ ಬಡಿಸ್ತಾಳೆ. ನೀವು ಹೋಗಿ ಪರವಾಗಿಲ್ಲ."

"ನಿಮ್ಮಮ್ಮನಾ! ಇನ್ನೂ ರಾತ್ರೀ ತನಕ ನಿನ್ನ ಹೆಂಡ್ತಿ ಮುಖ ನೋಡುಲ್ಲ. ಅವಳ ಧ್ವನಿ ಕಿವಿಗೆ ಬೀಳ್ಬಾರ್ದು ಅಂತ, ಅಡಿಗೆ ಮನೆಯಿಂದ ಹೊರಕ್ಕೇ ಬರುಲ್ಲ. ಒಂದ್ವೇಳೆ ಬಂದ್ರೂ ಮತ್ತೆ ಸ್ನಾನ ಮಾಡ್ಬೇಕಾಗುತ್ತೆ... ರಾತ್ರಿ ಫಲಾಹಾರ ತಿನ್ನಬೇಕಲ್ಲ."

ಕೇಶವನ ತಲೆ ಕೆಟ್ಟು ಹೋದಂತಾಗಿತ್ತು. ಅಮ್ಮನ ಮಡಿ ಇಷ್ಟು ಹೆಚ್ಚು ಎಂದು ಅವನಿಗೆ ತಿಳಿದಿರಲಿಲ್ಲ. ಈ ಹಿಂದೆ ಎಂದೂ ಈ ಪರಿಸ್ಥಿತಿ ಬಂದಿರಲಿಲ್ಲ. ಬೇಸರದಿಂದ ಮುಖಕ್ಕೆ ಪೇಪರನ್ನು ಹಿಡಿದು ಕುಳಿತ. ಗೋಡೆಯ ಮೇಲಿನ ಗಡಿಯಾರ ಎರಡು ಗಂಟೆಯನ್ನು ಹೊಡೆದಿತ್ತು. ದಢಕ್ಕನೆ ಎದ್ದ.

"ನಂಗೆ ಹೊತ್ತಾಯ್ತು. ನಾನು ಹೊರಡ್ತೀನಿ. ಅವಳು ಎದ್ದು ಬಂದರೆ ಅವಳಿಗೆ ಊಟ ಹಾಕಿ" ಎಂದು ಹೇಳಿ ಸೈಕಲನ್ನೇರಿದ. ಪಂಕಜಮ್ಮ ಪೆಚ್ಚಾದಳು. ನಿಧಾನವಾಗಿ ಊಟ ಮಾಡಿ ಎದ್ದ ಗೌರಮ್ಮ ಮೊದಲು ಕೈ ತೊಳೆದು, ನಂತರ ತಾನು ಊಟ ಮಾಡಿದ ಎಲೆಯನ್ನು ಎತ್ತಿ ಆಚೆ ಎಸೆದು, ಸೆಗಣಿ ಹಾಕಿ, ನೆಲವನ್ನು ಸಾರಿಸಿ ಗೋಮಯ ಹಾಕಿ, ಬಟ್ಟೆಯಿಂದ ಒರೆಸಿ, ಉಳಿದ ಅಡಿಗೆ ಪದಾರ್ಥಗಳನ್ನು ಹೊರಕ್ಕೆ ತಂದಿಟ್ಟಳು. ಮುಂದಿನ ಹಾಲಿಗೆ ಬಂದಳು.

"ಯಾಕೋ ಕೇಶವಾ, ಇನ್ನೂ ಊಟಕ್ಕೆ ಏಳಲಿಲ್ವಾ!... ಅಲ್ಲ ಪಂಕಜಮ್ಮ ಅವನೆಲ್ಲಿಗೆ ಹೋದ?...."

"ನಿಮ್ಮ ಮಗ ಹೊತ್ತಾಯ್ತು ಅಂತ ಆಫೀಸ್ಗೆ ಹೊರಟುಹೋದ್ರು."

"ಹೌದಾ!... ಹೋಗ್ಲಿ ಬಿಡಿ. ಸಂಜೆ ಬಂದಾಗ ತಿಂಡಿ ಮಾಡಿಕೊಡ್ತೀನಿ."

"ಅಲ್ಲಾ ಗೌರಮ್ಮ.... ನಿಮ್ಮ ಸೊಸೆಯಾದ್ರೂ ಎದ್ದು ಬಂದಿದ್ರೆ ಬಡಿಸ್ಬಿಟ್ಟು ಹೋಗ್ತಿದ್ದೆ. ಒಂದ್ರಾಶಿ ಕೆಲ್ಸ ಬಿದ್ದಿದೆ ಮನೇಲಿ..."

"ನೀವು ಹೋಗಿ. ಆ ಪಾತ್ರೆಗಳ ಮೇಲೆ ಮುಚ್ಚಳ ಮುಚ್ಚಿಬಿಡಿ.... ಅವಳು ಎದ್ದು ಬಂದ್ರೆ, ನಾನು ನಿಮ್ಮನ್ನು ಕರೀತೀನಿ.... ಮನೆ ಮಗನೇ ಉಪವಾಸ ಇದಾನಂತೆ... ಇವಳದ್ದೇನು! ಬೆಳಿಗ್ಗೆ ತಿಂಡಿ ತಿಂದಿದ್ಲು. ಅಲ್ಲಾ ರೂಮು ಬಾಗಿಲ್ನ ಯಾಕೆ ಹಾಕ್ಕೋಬೇಕು! ಗಂಡ ಬಂದಾಗ್ಲಾದ್ರೂ ತೆಗೀಬೇಡ್ವೇ... ಹೆಣ್ಣು ಮಕ್ಕಳಿಗೆ ಇಷ್ಟು ದುರಹಂಕಾರ ಇರಬಾರ್ದು."

"ಏನೋ ಹೊಸ್ದು... ಹೊಸ ಜಾಗ.... ನಾಚ್ಕೆ ಆಗುಲ್ವೆ!"

"ಏನು ನಾಚ್ಕೆ? ಗಂಡ ಆಗ್ಲೇ ಹಳಬನಾಗಿದಾನೆ... ಉದಾಸೀನ... ನಾವೆಲ್ಲಾ ಹಿತ್ತಲ್ನಲ್ಲಿ ಎಲ್ಲೋ ಮರದ ಕೆಳಗೋ, ಕೊಟ್ಟಿಗೇಲೋ ಕೂತಿರ್ತಿದ್ವು. ಎಲ್ಲರ ಊಟ ಆದ್ಮೇಲೆ ಯಾರೋ ಕರೆದು ಒಂದು ಮೂಲೇಲಿ ಕೂರ್ಸಿ ಊಟ ಹಾಕ್ತಿದ್ರು.... ಈಗಿನ ಹಾಗೆ ರೂಮು ಎಲ್ಲಿತ್ತು?"

"ಅದೂ ಏನು ಚೆನ್ನಲ್ಲ ಗೌರಮ್ಮ. ಹೆಂಗಸ್ಗೇ ಯಾಕೆ ಇಂಥಾ ಕಷ್ಟ!"

"ಏನೋಮ್ಮ... ಆ ಬ್ರಹ್ಮನ್ನೇ ಕೇಳ್ಬೇಕು... ನಮ್ಗೇನ್ಗೊತ್ತು?"

ಒಳಗೆ ಸುಮ್ಮನೆ ಹಾಗೇ ಚಾಪೆಯ ಮೇಲೆ ಮಲಗಿದ್ದ ರಾಧಾಳಿಗೆ ಎಲ್ಲಾ ಮಾತುಗಳು ಕೇಳಿಸಿದ್ದವು. ಗಂಡ ಉಪವಾಸ ಹಾಗೆ ಹೊರಟುಹೋದದ್ದು ಕಸಿವಿಸಿ ಆಗಿತ್ತು. ತನ್ನದೇ ತಪ್ಪಿರಬಹುದೆಂದೆನಿಸಿತ್ತು. ಆದರೆ ಈಗ ತಾನು ಎದ್ದು ಬಂದು ಊಟ ಮಾಡಲು ಮನಸ್ಸಾಗಲಿಲ್ಲ. ಈ ಅತ್ತೆ ಇಷ್ಟು ಮಡಿ ಅಂತ ಗೊತ್ತಿದಿದ್ರೆ, ಈ ಮನೆಗೆ ಸೊಸೆಯಾಗಿ ಬರುತ್ತಿರಲಿಲ್ಲವೆಂದುಕೊಂಡಳು. ಮುಂದಿನ ತಿಂಗಳು ತಾನು ತಾಯಿಯ ಮನೆಗೆ ಹೋಗಿ, ಮೂರು ದಿನಗಳು ಕಳೆದ ನಂತರ ಬರಬೇಕೆಂದುಕೊಂಡಳು.

"ಮುಟ್ಟಾದ ಹುಡುಗಿ ಬಾಯಿ ಒಣಗಿಸ್ಕೊಂಡು ಕೂತಿರುತ್ತೆ. ಕಾಫೀನಾದ್ರೂ ಕೊಡಬಹುದಾಗಿತ್ತು ತಂದುಕೊಡ್ತೀನಿ." ಪಂಕಜಮ್ಮ ತನ್ನ

ಮನೆಗೆ ಹೋದಳು. ಆಮೇಲೆ ಆಕೆ ಮತ್ತೆ ಬರಲೇ ಇಲ್ಲ. ಹಸಿದ ಹೊಟ್ಟೆ ಹಾಗೇ ತಣಿದಿತ್ತು. ಸುಸ್ತಾಗಿ ನಿದ್ದೆ ಬಂದಿತ್ತು...

"ರಾಧಾ... ರಾಧಾ..." ಕಿಟಕಿಯ ಬಳಿ ನಿಂತು ಕೇಶವ ಪಿಸುದನಿಯಲ್ಲಿ ಕರೆದಾಗ ಅವಳಿಗೆ ಎಚ್ಚರವಾಗಿತ್ತು. ಗಂಡ ಆಫೀಸ್ನಿಂದ ವಾಪಸ್ಸಾಗಿದ್ದಾನೆ ಇನ್ನು ಪರವಾಗಿಲ್ಲ ಎಂದುಕೊಂಡು ಕಿಟಕಿಯನ್ನು ತೆರೆದಳು. ಅವನು ಅವಳನ್ನು ಹೊಸಬಳನ್ನು ನೋಡುವಂತೆ ನೋಡಿದಾಗ, ಅವಳು ನಾಚಿದಳು. ಕೆನ್ನೆಗಳು ಕೆಂಪಾದವು. ತಲೆ ತಗ್ಗಿಸಿದಳು.

"ಇದ್ರಲ್ಲಿ ಇಡ್ಲಿ ಚಟ್ನಿ ಇದೆ. ಹೋಟೆಲ್ನಿಂದು... ಈಗ ತಿಂದಿರು. ನಾನು ಇನ್ನೊಂದು ಗಂಟೆ ಬಿಟ್ಟು ಮತ್ತೆ ಬರ್ತೀನಿ.... ನೀರು ಬೇಕಾ?"

"ನೀರೇನೂ ಬೇಡ.. ಕುಡಿಯೋ ನೀರಿನ ಚೊಂಬು ಇಲ್ಲೇ ಇದೆ... ಇದನ್ಯಾಕೆ ತಂದ್ರಿ! ನಿಮ್ಮಮ್ಮ ಏನಂದುಕೊಳ್ತಾರೆ!"

"ಅವಳು ಏನಾದ್ರೂ ಅಂದ್ಕೊಳ್ಳಲಿ. ನಾನು ಎಷ್ಟೋ ಸಾರಿ ಅಕ್ಕಂದಿರಿಗೆ ತಂದು ಕೊಟ್ಟಿದೀನಿ.... ಅದಿರ್ಲಿ... ಇನ್ನೇನಾದ್ರೂ ಬೇಕಾ?"

"ಯಾವ್ದಾದ್ರೂ ಕತೆ ಪುಸ್ತಕ ಇದ್ರೆ ಕೊಡಿ.... ನಿಮ್ಮಮ್ಮ ಇಲ್ವಾ?"

"ಇರಬಹುದು. ನಾನು ಒಳಗೆ ಹೋಗಿ ನೋಡ್ಲಿಲ್ಲಾ.... ನಾನು ಈಗ ಬರ್ತೀನಿ. ಬರ್ಲಾ!" ಅವನು ಮತ್ತೆ ಮತ್ತೆ ಕೇಳಿ ಅವಳನ್ನೇ ನೋಡುತ್ತಾ ಕಿಟಕಿಯಿಂದ ಅತ್ತಸರಿದ. ಅವಳು ಮತ್ತೆ ಕಿಟಕಿಯನ್ನು ಮುಚ್ಚಿಕೊಂಡಳು.

ಮಗ ಮನೆಗೆ ಬರುವುದನ್ನೇ ಕಾದಿದ್ದ ಗೌರಮ್ಮ ಅವನು ಒಳಕ್ಕೆ ಕಾಲಿಡುತ್ತಿದ್ದಂತೆಯೇ ಕೈಯಲ್ಲಿ ಶಾಲು ಹಿಡಿದು ಹೊರಟಳು.

"ಶಂಕರ ಮಠದಲ್ಲಿ ಉಪನ್ಯಾಸ ಇದೆ. ನಾನು ಹೋಗ್ತಿದೀನಿ. ಕಾಫಿ ಮಾಡಿಟ್ಟಿದ್ದೀನಿ. "ಕೇಶವ ತಾಯಿಯನ್ನೇ ತೀಕ್ಷ್ಣವಾಗಿ ನೋಡಿದ ಮಾತಾಡಲಿಲ್ಲ. ಮಾತಾಡಿದರೆ ಬರೀ ವಾಗ್ವಾದ ಎಂದು ಅವನಿಗೆ ತಿಳಿದದ್ದೇ. ತಲೆಯಾಡಿಸಿದ.

ಆಕೆ ಗೇಟು ದಾಟಿದ ನಂತರ ರಾಧಾ, ರೂಮಿನ ಬಾಗಿಲನ್ನು ತೆರೆದು ಹೊರಬಂದಳು.

"ನಾನೇ ಹೇಳೋಣ ಅಂತಿದ್ದೆ. ನೀನೇ ಬಂದ್ಯಲ್ಲಾ. ಕಾಫೀ ಕುಡೀತೀಯಾ?" ಹಲ್ಲು ಕಿರಿಯುತ್ತಾ ಕೇಳಿದ.

"ಹುಂ. ಕೊಡಿ. ಹೊಟ್ಟೆ ಹಸಿದು ಹೋಗ್ತಿದೆ." ಎನ್ನುತ್ತಾ ಮುಂಬಾಗಿಲಿನಿಂದ ಹಿತ್ತಲಿನ ಕಡೆಗೆ ಬಂದಳು. ಕೈಕಾಲು ಮುಖ ತೊಳೆದು,

ಸೀರೆಯ ಸೆರಗಿನಲ್ಲೇ ಮುಖವನ್ನು ಒರೆಸಿ ಮತ್ತೆ ಒಳಕ್ಕೆ ಬಂದಳು. ಅಷ್ಟರೊಳಗೆ ಕೇಶವ ಕಾಫಿಯನ್ನು ಬಿಸಿ ಮಾಡಿ ತಂದಿದ್ದ.

"ಕೂತ್ಕೋ..." ಅಲ್ಲಿಯೇ ಇದ್ದ ಮರದ ಕುರ್ಚಿಯ ಕಡೆ ಕೈ ಮಾಡಿ ತೋರಿ ಉಪಚರಿಸಿದ. ನೆಲದ ಮೇಲಿದ್ದ ಕಾಫಿಯ ಬಟ್ಟಲನ್ನು ಕೈಗೆತ್ತಿಕೊಂಡು, ಕುಳಿತು ಕಾಫಿಯನ್ನು ಹೀರತೊಡಗಿದಳು.

"ಸ್ವಲ್ಪ ಸಿಹಿ ಜಾಸ್ತಿ ಅಲ್ವಾ?" ಅವನು ಕೇಳಿದ.

"ಏನಾದ್ರೂ ತಿನ್ನೋಕೆ ಇದೆಯಾ?"

"ಏನಿದೆಯೋ ನಂಗೊತ್ತಿಲ್ವಲ್ಲಾ... ಊಟ ಮಾಡ್ತೀಯಾ ಬಡಿಸ್ತೀನಿ."

"ಮಧ್ಯಾಹ್ನ ನೀವೇನು ತಿಂದ್ರಿ?"

"ನಾನೂ ಇಡ್ಲಿ ತಿಂದೆ... ನಂದೂ ಊಟ ಆಗಿಲ್ಲ..."

"ಮುಂದಿನ್ಸಾರಿ ನಾನು ಇಲ್ಲಿರುಲ್ಲ. ಒಂದಿನ ಮುಂಚಿತವಾಗಿಯೇ ಊರಿಗೆ ಹೋಗ್ತೀನಿ.... ಆಗ ಯಾರಿಗೂ ಕಷ್ಟವಾಗುಲ್ಲ."

"ಸರಿ. ಇಷ್ಟಕ್ಕೆಲ್ಲಾ ಅಮ್ಮನ ಮನೆಗೆ ಹೋಗ್ತಾರಾ? ಏನೂ ಬೇಡ. ಇದೂ ಮನೆಯೇ. ನಾನು ರಜ ಹಾಕ್ತೀನಿ. ಯಾರ್ಗೂ ಕಷ್ಟ ಆಗುಲ್ಲ."

"ಪ್ರತಿ ತಿಂಗಳೂ ರಜ ಹಾಕುಕ್ಕೆ ಆಗುತ್ತಾ! ಆಫೀಸ್ನಲ್ಲಿ ಕಾರಣ ಏನು ಹೇಳ್ತೀರಿ?" ಅವನ ಕಡೆ ಕಿರುನೋಟ ಬೀರಿ ಸವಾಲೆಸೆದಳು. ಅವನೂ ಪೆಚ್ಚಾಗಿ ನಕ್ಕ.

"ಸರಿ ಹೇಗೋ ಆಗುತ್ತೆ. ಮೂರು ದಿನದ ಮಾತು ತಾನೇ..."

"ಇನ್ನು ಎರಡು ದಿನ ಹೇಗ್ರೀ ಕಳೆಯೋದು?" ಕಠಿಣ ಎಂಬಂತೆ ಪ್ರಶ್ನಿಸಿದಳು. ತಾನೇ ಉತ್ತರವನ್ನು ಸೂಚಿಸಿದಳು. ನೀವು ಬೆಳಿಗ್ಗೆ ಆಫೀಸಿಗೆ ಹೋಗೋ ಮೊದಲು ತಿಂಡಿ ಕಾಫಿ ಎಲ್ಲಾ ಕೊಟ್ಟುಬಿಡಿ. ತಿಂದು ಮಲಗಿರ್ತೀನಿ. ನೀವು ಸಾಯಂಕಾಲ ಬರೋವರ್ಗ್ಗಾ ನಾನು ಹೊರಕ್ಕೆ ಬರುಲ್ಲ."

"ಅಮ್ಮ ಏನಂತಾಳೋ...."

"ಏನೂ ಅನ್ನುಲ್ಲ. ಮಾತಾಡಿದ್ರೆ ಮೈಲಿಗೆ ಆಗುತ್ತಲ್ಲಾ..."

"ಸರಿ ನೋಡೋಣ. ಹುಳಿ, ಸಾರು ಏನಿದೆಯೋ ಅದನ್ನು ಬಿಸಿ ಮಾಡ್ತೀನಿ. ಇಬ್ರೂ ಊಟ ಮಾಡೋಣ." ಅವನು ಎದ್ದು ನಿಂತಾಗ, ಅವಳು

ಎದ್ದು ಕಿಟಕಿಯ ಬಳಿ ನಿಂತಳು. "ನಿಮಗೆ ತೊಂದ್ರೆ ಆಯ್ತಲ್ಲಾ... ಬೇಜಾರಾಗೋಲ್ವಾ!"

"ಬೇಜಾರು ಮಾಡ್ಕೊಂಡ್ರೆ ಆಗುತ್ತಾ? ನಿನ್ನನ್ನ ಚೆನ್ನಾಗಿ ನೋಡ್ಕೊಳ್ಳೋದು ನನ್ನ ಕೆಲಸ. ಹಾಗಂತ, ಅಗ್ನಿ ಸಾಕ್ಷಿಯಾಗಿ ಕೈಹಿಡಿದು ಹೇಳಿದೀನಲ್ಲ."

"ನಿಮ್ಮದು ಸಂಧ್ಯಾವಂದನೇನೇ ಆಗಿಲ್ವಲ್ಲಾ...."

"ಮೂರು ಆಚಮನ ಮಾಡ್ತೀನಿ. ಅದೆಷ್ಟು ಹೊತ್ತಾಗುತ್ತೆ?" ಎನ್ನುತ್ತಾ ಅವಳ ಕೆನ್ನೆಗೆ ಬೆರಳನ್ನು ತಾಕಿಸುವವನಂತೆ ಹತ್ತಿರಕ್ಕೆ ಬಂದ.

"ರೀ ಮುಟ್ಟಬೇಡ್ರೀ..." ಅವಳು ಸಣ್ಣದಾಗಿ ಕಿರುಚಿ ಹಿಂದಕ್ಕೆ ಹಾರಿದಳು. ಅವನು ಬೆಚ್ಚಿ ಹಿಂದೆ ಸರಿದು ನಕ್ಕು ಅಲ್ಲಿಂದ ಸರಿದ.

* * * *

ಹದಿನೈದು ವರ್ಷಗಳ ಹಿಂದಿನ ಆ ದಿನಗಳ ನೆನಪು ಮರುಕಳಿಸಿ ರಾಧಾಳ ತುಟಿಯಂಚಿನಲ್ಲಿ ಕಿರುನಗೆ ಮೂಡಿತ್ತು. ಅಬ್ಬಾ ಎಂಥಾ ದಿನಗಳು! ಮಡಿ ಮೈಲಿಗೆ, ಪ್ರೀತಿ, ಸಲುಗೆ.... ದಿನಗಳು ಸರಿದಿದ್ದವು. ಆನಂರ ಮೂರನೆ ತಿಂಗಳು ರಾಧಾ ಹೊರಗಾಗಲೇ ಇಲ್ಲ. ಗರ್ಭಿಣಿಯಾಗಿದ್ದಳು. ತಾರೀಖು ಮುಂದೆ ಮುಂದೆ ಹೋದಂತೆ ಹೊಸ ಆತಂಕ ಪ್ರಾರಂಭವಾಗಿತ್ತು. ಗಂಡನಿಗೆ ತಿಳಿಸಲು ನಾಚಿಕೆ... ತಿಳಿಸದೇ ಇರಲು ಮನಸ್ಸಿಲ್ಲ. ಆದರೆ ಮೊದಲು ಅನುಮಾನ ಬಂದದ್ದು ಅತ್ತೆಗೇ. ಪಕ್ಕದ ಮನೆ ಪಂಕಜಮ್ಮನೊಡನೆ ಹೇಳಿದ್ದು ಕೇಳಿಸಿತ್ತು.

"ನೀವಾದ್ರೂ ಸ್ವಲ್ಪ ಕೇಳಿ ಪಂಕಜಮ್ಮ. ಇನ್ನು ಹುಡುಗು ಬುದ್ಧಿ. ಏನು ತಿಳುವಳಿಕೆ ಇರುತ್ತೆ?. ತಿಂಗಳ ಮೇಲೆ ಹತ್ತು ದಿನ ಆಯ್ತು. ನಂಗೇನೋ ಇದೇ ವಿಷಯ ಅಂತ ಅನ್ನಿಸುತ್ತೆ."

"ಹಾಗಿದ್ರೆ ತಿಳೀದೇ ಇರುತ್ಯೆ ಗೌರಮ್ಮಾ? ನಿಮಗಂತೂ ಬಹಳ ಆತುರ. ನಾಲ್ಕು ದಿನ ಕಾದು ನೋಡಿ... ವಾಂತಿ ವಾಕರಿಕೆ ಇಲ್ಲದೇ ಯಾರಾದ್ರೂ ಮಕ್ಕಳನ್ನ ಹೆತ್ತಿದಾರಾ?"

"ಹಾಗಲ್ಲ ಪಂಕಜಮ್ಮ. ಲಕ್ಷಣವಾಗಿ ಮುತ್ತೈದೆ ಸಾವಿತ್ರಿ.... ನೀವು ಕೇಳಿ ತಿಳಿದುಕೊಳ್ಳಿ. ನೀವೂ ತಾಯೀ ಸಮಾನ. ನಾನು ಎಷ್ಟಾಗಲೀ ಅತ್ತೆ... ಅಲ್ಲದೇ..."

"ಅದೆಲ್ಲಾ ಏನೂ ಇಲ್ಲ ಗೌರಮ್ಮ. ನೀವಂತೂ ಏನೇನೋ ಆಡಿಬಿಡ್ತೀರಿ. ಕೇಶವ ನಿಮ್ಮ ಮಗ. ಅವನ ಹೆಂಡ್ತಿ ತಾಯಿಯಾದರೆ ಅಜ್ಜಿ ಆಗೋರು ನೀವು. ಈ ಹಕ್ಕು ನಿಮ್ಮದ್ದೇ... ಮನಸ್ಸಿಗೆ ಮುಜುಗರ ಪಟ್ಕೊಂಡ್ರೆ ಹೇಗೆ? ಅವರಿಬ್ರೂ ಚಿಕ್ಕೋರು. ಅವರೇ ಹೇಗೆ ಹೇಳ್ತಾರೆ.! ನೀವೇ ಸೂಕ್ಷ್ಮವಾಗಿ, ಡಾಕ್ಟರ ಹತ್ರ ಹೋಗಿ ಬಾ ಅಂತ ಹೇಳಿ. ಅವರಿಗೂ ಅರ್ಥವಾಗುತ್ತೆ."

"ನಂಗೊಂಥರಾ ಆಗುತ್ತೆ ಪಂಕಜಮ್ಮ." ಗೌರಮ್ಮ ಮೈಯನ್ನೆಲ್ಲಾ ಮುದುರಿಕೊಂಡು ನಾಚಿಕೆಯನ್ನು ಪ್ರಕಟಿಸಿದಾಗ ಪಂಕಜಮ್ಮ ನಕ್ಕಳು.

"ಹಾಗಾದ್ರೆ ಸುಮ್ಮನಿದ್ದುಬಿಡಿ. ನಾನು ಹೇಗೂ ವಾಪಸ್ಸು ಬಂದಿದೀನಲ್ಲ. ಒಂದಲ್ಲ ಒಂದು ದಿನ ತಿಳಿದೇ ತಿಳಿಯುತ್ತೆ. ನೀವೂ ಸ್ವಲ್ಪ ಚೆನ್ನಾಗಿ ನೋಡ್ಕೊಳ್ಳಿ. ಮಡಿ ಮಡಿ ಅಂತ ದೂರ ದೂರ ಹಾರ್ಬೇಡಿ."

"ಏನ್ಮಾಡೋದು? ನನ್ನ ಕರ್ಮ... ಮಡಿ ಮಾಡ್ದೇ ಇದ್ರೆ, ಪಾಪ ಕರ್ಮಗಳು ಸುತ್ತಿಕೊಳ್ಳುತ್ತವಲ್ಲ. ನನ್ನಿಂದ ಸತ್ತು ಸ್ವರ್ಗದಲ್ಲಿರೋರೆಲ್ಲಾ ಮತ್ತೆ ನರಕಕ್ಕೆ ಬಂದು ನರಳುವಂತಾಗಬಾರದು."

"ಹಾಗೇನೂ ಆಗುಲ್ಲ ಬಿಡಿ. ನರಕಾನ, ಸ್ವರ್ಗಾನ ಕಂಡಿರೋರು ಯಾರು?.... ಅಲ್ಲದೇ ಅವರವರು ಮಾಡಿದ ಪಾಪಕ್ಕೆ ತಕ್ಕಂತೆ ಸ್ವರ್ಗವೋ ನರಕವೋ... ಅದು ತಿಳಿದೋರು ಯಾರು? ನೀವು ಹೀಗೆಲ್ಲಾ ಮಾತಾಡ್ಬೇಡಿ."

ಮರೆಯಲ್ಲಿ ನಿಂತು ಇವರಿಬ್ಬರ ಸಂಭಾಷಣೆಗಳನ್ನು ಕೇಳಿಸಿಕೊಂಡಿದ್ದ ರಾಧಾಳ ಮೈ ಪುಳಕಗೊಂಡಿತು. ತಾನು ಗರ್ಭಿಣಿ. ತನ್ನ ಬಗ್ಗೆಯೇ ಚರ್ಚೆ ನಡೆಯುತ್ತಿದೆ. ಅವಳಿಗರಿವಿಲ್ಲದೇ, ಅವಳ ಬಲಗೈ ಅವಳ ಹೊಟ್ಟೆಯ ಮೇಲೆ ಹರಿದಾಡಿತು. ತನ್ನ ಒಡಲೊಳಗೆ ಪುಟ್ಟ ಕಂದ. ಹೇಗಿರಬಹುದು? ಎಷ್ಟಿರಬಹುದು? ಕನ್ನಡಿಯ ಮುಂದೆ ನಿಂತು ತನ್ನನ್ನು ತಾನು ಮೇಲಿನಿಂದ ಕೆಳಗಿನ ತನಕ ನೋಡಿಕೊಂಡಳು. ತನ್ನ ದೇಹ ಏನೇನೂ ದಪ್ಪವಾಗಿಲ್ಲ. ಮೊದಲಿನಂತೆಯೇ ತೆಳ್ಳಗಿದ್ದೇನೆ.... ಈಗಿನ್ನು ಕೇವಲ ಒಂದು ತಿಂಗಳಿರಬಹುದು. ದಿನ ಕಳೆದಂತೆ... ಮಗು ಹೊಟ್ಟೆಯೊಳಗೆ ಬೆಳೆದಂತೆ... ತನ್ನ ಬಸಿರೂ ದೊಡ್ಡದಾಗಬಹುದು.... ನಾಚಿಕೆಯಿಂದ, ಹಿತವಾದ ನಲಿವಿನಿಂದ ಮೈ ಅದುರಿತು. ಇನ್ನೂ ಒಂಭತ್ತು ತಿಂಗಳು ಕಾಯಬೇಕು... ಕಾಯಲೇಬೇಕು. ಸದ್ಯ, ಸದ್ಯಕ್ಕೆ ತಿಂಗಳು ತಿಂಗಳಿಗೆ ಹೊರಗೆ ಕೂರುವ ಕಾಟ ತಪ್ಪಿತು. ಆರಾಮವಾಗಿ ಓಡಾಡಿಕೊಂಡಿರಬಹುದು.... ನನ್ನ ಗಂಡ ಆಫೀಸಿಗೆ

ರಜ ಹಾಕ್ತೀನಿ ಅಂತ ಅಂದಿದ್ದನಲ್ಲವೆ?.... ಎಲ್ಲಾದರೂ ತಿರುಗಾಡಿಕೊಂಡು ಬರಬಹುದು.

ಮನೆಯ ಮುಂದೆ ಆಟೋರಿಕ್ಷಾ ನಿಂತ ಸದ್ದಾಯಿತು. ಅವಳ ನೆನಪಿನ ಸರಣಿಗೆ ಅಡ್ಡ ಬಂತು. ಗೇಟು ತೆರೆದ ಸದ್ದು.... ಮುಂಬಾಗಿಲ ಕರೆಗಂಟೆಯ ಸದ್ದು. ಕೂತಿದ್ದವಳು ಎದ್ದು ಬರಲೇಬೇಕಾಯ್ತು. ಅಡಿಗೆ ಮನೆಯಲ್ಲಿ ಮಡಿಯಲ್ಲಿ ಅಡಿಗೆ ಕೆಲಸ ಮಾಡುತ್ತಿರುವ ಅತ್ತೆಯಂತೂ, ಊಟ ಮುಗಿಯುವವರೆಗೂ ಎದ್ದು ಬರುವುದಿಲ್ಲ. ಬಾಗಿಲನ್ನು ತೆರೆದಳು... ಸರ್‍ರನೇ ಅವಳನ್ನು ತಳ್ಳಿಕೊಂಡು, ಒಳಬಂದ ಮಧುರ ರೂಮಿಗೆ ಹೋಗಿ ಬಾಗಿಲನ್ನು ಹಾಕಿಕೊಂಡಳು.

"ಅರೇ!.... ಮಧು... ಏನಾಯ್ತೇ.... ಅವಳೆಡೆ ತಿರುಗುವಷ್ಟರಲ್ಲಿ ಅವಳ ಜೊತೆಯಲ್ಲಿ ಬಂದಿದ್ದ ಸ್ಕೂಲಿನ ಆಯಾ, ಸುದ್ದಿಯನ್ನು ಅರುಹಿದಳು.

"ನಿಮ್ಮುಡ್ಗಿ ದೊಡ್ಡಾಗ್ಯೆತೆ.. ಮನೀಗೆ ಬಿಟ್ಬಾ ಅಂತಂದ್ರು... ಆಟೋ ದುಡ್ಡು ಕೊಡ್ತೀರಾ? ನಾನು ಓಗ್ತೀನಿ."

"ಆಂ.... ಏನಂದೆ..? ಯಾವಾಗ? ಯಾರು ಹೇಳಿದ್ರು?" ಅವಳ ಎದೆಯ ಬಡಿತ ತೀವ್ರವಾಗಿತ್ತು. ಎದೆಯ ಮೇಲೆ ಕೈಯನ್ನಿಟ್ಟುಕೊಂಡಳು.

"ಯಾಕ್ರವ್ವಾ ಇಂಗೆ ಗಾಬ್ರಿ ಆಗ್ತೀರಿ? ಮಗ್ಳು ಬೆಳೆದು ನಿಂತವ್ಳೇ.... ಇಂಗಿರಬೈಯ್ದು ಇಸ್ಯ ಅಂತ ತಿಳೀಲಿಲ್ವಾ?".....

"ಇನ್ನು ನೀನು ಹೋಗು.... ನಾನು ವಿಚಾರಿಸ್ತೀನಿ."

"ಸುಮ್ಕೇ ಮಗೀಗೆ ತ್ಯಲೆ ಕ್ಯಡಿಸ್ಬೇಡಿ.... ಅದ್ಕೂ ಗಾಬ್ರಿ. ಅಲ್ದೇ ನಮ್ಕಡೆ ಒಂದು ಸಾಸ್ತ್ರ ಐತೆ.... ನೀವು ನೋಡಿ ಮಾತಾಡ್ಬೇಡಿ. ಪಕ್ಕದ್ಮನೆಯೋರ್ನ ಅಂಗೇ ಕರೀರಿ.... ನಾನಿನ್ನು ಬರ್ಲಾ.... ನಂಗೆ ಇನಾಮು. ಅಂಗೇ ಆಟೋ ಛಾರ್ಜು..."

"ತಡೀ ಈಗ್ಬಂದೆ..." ಎಂದು ಒಳಗೆ ಹೋಗಿ ಹತ್ತು ರುಪಾಯಿನ ನೋಟನ್ನು ಅವಳ ಕೈಗೆ ಹಾಕಿದಳು."

"ಇಷ್ಟೇನ್ರಾ?.... ಒಂದು ಸೀರೆ." ಕೆಂಪನೆಯ ಹಲ್ಲನ್ನು ತೋರಿದಳು.

"ಈಗ ಹೋಗಮ್ಮ.... ಆಮೇಲೆ ಬಾ.... ನಂಗೊಂದೂ ತೋಚ್ತಾ ಇಲ್ಲ."ಸಿಡುಕಿದಳು.

"ನೀವೇ ಇಂಗೆ ಎದ್ರಿದ್ರೆ ಎಂಗೆ.... ನಾನೇ ಆಯಮ್ಮನ್ನ ಕರ್ಕೊಂಡು ಬರ್ತಿನಿ" ಆಯಾ ಪಕ್ಕದ ಮನೆಯ ಕಡೆಗೆ ನಡೆದರೂ ರಾಧಾ ಹಾಗೇ ನಿಂತಿದ್ದಳು. ಆಯಾಳ ಜೊತೆ ಒಳಬಂದ ನಂದಿನಿ ರಾಧಾಳ ರಟ್ಟೆ ಹಿಡಿದಳು.

"ಏನಾಯ್ತು ಅಂತಹೀಗೆ ಗರಬಡಿದವರಂತೆ ನಿಂತಿದೀರಿ ರಾಧಮ್ಮಾ.... ನಾನು ಅವತ್ತೇ ನಿಮಗೆ ಹೇಳಿದ್ದೆ.... ಮಧು ಎಲ್ಲಿ?" ರಾಧಾ ಉತ್ತರಿಸಲಿಲ್ಲ.

"ನೀನು ಹೋಗಮ್ಮ..." ಅಲ್ಲಿಯೇ ನಿಂತಿದ್ದ ಆಯಾಳ ಕಡೆ ನೋಡಿ, ಅವಳನ್ನು ಕಳುಹಿಸಿ, ಮುಂಬಾಗಿಲನ್ನು ಹಾಕಿಕೊಂಡು ಒಳಬಂದಳು. ರಾಧಾ ತೋಳನ್ನು ಹಿಡಿದು ಎಳೆತಂದು ಕುರ್ಚಿಯ ಮೇಲೆ ಕೂರಿಸಿದಳು.

"ರಾಧಮ್ಮಾ.... ನಿಮಗೇನಾಯ್ತು?" ಅವಳನ್ನು ಅಲುಗಾಡಿಸಿದಳು.

"ನಂದಿನಿ.... ನಂಗೆ ದಿಕ್ಕು ತೋಚದ್ದಾಗೆ ಆಗಿದೆ... ಎರಡ್ದಿನದಿಂದ ನನ್ನ ಎದೆ ತವಕದಿಂದ ಹೊಡೆದುಕೊಳ್ತಿತ್ತು. ಇದಕ್ಕೇಯೋ ಏನೋ..."

"ಇದು ಹೆಣ್ಣು ಮಕ್ಕಳನ್ನು ಹೆತ್ತೋರಿಗೆ, ಒಂದಲ್ಲ ಒಂದು ದಿನ ಎದುರಿಸ್ಲೇ ಬೇಕಾದ ವಿಷಯ.... ಇದಕ್ಯಾಕೆ ಇಷ್ಟು ಗಾಬ್ರಿ ಆಗಿದೀರಿ?.... ಏಳಿ, ಮಧುನ ಮಾತಾಡ್ಸಿ... ಹಾಲನ್ನೋ ಕಾಫೀನೋ ಕುಡಿಯೋಕೆ ಕೊಡಿ. ನಿಮ್ಗೇ ಇಷ್ಟು ಗಾಬ್ರಿ.... ಇನ್ನು ಆ ಹುಡ್ಗೀಗೆ ಹೇಗಿರ್ಬೇಡ..."

"ನೀವು ಮೊದ್ಲು ಮಾತಾಡ್ಸಿ ನಂದಿನಿ.... ನಂಗೆ ಮಾತೇ ಹೊರಡ್ತಿಲ್ಲ."

"ಸರಿ..." ಎನ್ನುತ್ತಾ ನಂದಿನಿ ರೂಮಿನ ಬಾಗಿಲನ್ನು ತಟ್ಟಿದಳು. ಒಳಗ್ನಿಂದ ಉತ್ತರವಿಲ್ಲ. "ಮಧು... ಮಧು ಬಾಗಿಲು ತೆಗೆಯಮ್ಮಾ..." ಮತ್ತೆರಡು ಬಾರಿ ಬಾಗಿಲನ್ನು ತಟ್ಟಿದ ಮೇಲೆ ಮಧು ಬಾಗಿಲನ್ನು ತೆರೆದಳು.

"ಏನಂಟಿ? ಏನ್ಬೇಕಾಗಿತ್ತು?" ನಂದಿನಿಯನ್ನು ನೋಡಿ ಕೇಳಿದಳು.

"ಏನ್ಮಾಡ್ತಿದೀಯ..." ಅವಳ ಬಾಯನ್ನೇ ಗಮನಿಸುತ್ತಾ ಕೇಳಿದಳು.

"ತಿಂಡಿ ತಿಂತಿದ್ದೆ. ಹೊಟ್ಟೆ ಹಸೀತಿತ್ತು." ಬಾಯಿ ಚಲಿಸುತ್ತಿತ್ತು.

"ಓ.... ಹೌದಾ?" ಅವಳ ಹಿಂದೆ ರಾಧಾ ಬಂದು ನಿಂತಿದ್ದಳು.

"ಅಮ್ಮಾ.... ಏನಮ್ಮಾ... ಏನ್ಬೇಕಾಗಿತ್ತು! ಮಧುರ ರೇಗಿದಳು.

"ಆಯಾ ಏನೋ ಹೇಳಿದ್ಲು.... ನಿಜಾನೇನೇ...?""

"ಹುಂ. ಯಾಕೆ ಅನುಮಾನಾನಾ?"

"ಇಲ್ಲ... ಹೌದು... ಬಾಗಿಲನ್ನು ಯಾಕೇ ಹಾಕ್ಕೊಂಡೆ..."

"ಡ್ರೆಸ್ ಬದ್ಲಾಯಿಸ್ದೆ... ಹೊಟ್ಟೆ ಹಸೀತಿತ್ತು ತಿಂಡಿ ತಿಂದೆ.... ನಾಡಿದ್ದು ಪರೀಕ್ಷೆ ಇದೆ. ಓದ್ಕೋಬೇಕು..."

"ಅಲ್ಲ ಮಧು..."

"ನಂಗೆಲ್ಲ ಗೊತ್ತಮ್ಮ.... ನೀನು ಏನೂ ಹೇಳ್ಬೇಡ." ಬಾಗಿಲನ್ನು ಮುಚ್ಚಲು ನೋಡಿದಳು. ರಾಧಾ ಬಾಗಿಲನ್ನು ಭದ್ರವಾಗಿ ಹಿಡಿದು ಒಳಗೆ ಬಂದಳು. "ಅಮ್ಮಾ ಪ್ಲೀಸ್. ನನ್ನ ಪಾಡಿಗೆ ನನ್ನ ಬಿಟ್ಟುಬಿಡು..... ನಾನೇನು ಹೆದರಿಲ್ಲ. ಚಿಕ್ಕ ಮಗುವಲ್ಲ. ಸ್ಕೂಲ್ನಲ್ಲಿ ನನ್ನ ವಯಸ್ಸಿನ ಎಷ್ಟೋ ಜನ ಹುಡುಗಿಯರಿದ್ದಾರೆ. ನನಗೆ ಎಲ್ಲಾ ಗೊತ್ತಿದೆ. ನೀನೀಗ ಆಚೆ ಹೋಗು. ಹಾಗೇ ಆಂಟೀನೂ ಕರ್ಕೊಂಡು ಹೋಗು. ನಂಗೆ ಇದೆಲ್ಲ ಇಷ್ಟವಾಗುಲ್ಲ. ಅಜ್ಜಿಗೆ ಈಗ್ಲೇ ಹೇಳ್ಬೇಡ.... ಅವ್ರಿಗೆ ಗೊತ್ತಾಗ್ದೇ ಇದ್ರೇ ವಾಸಿ." ರಾಧಾ ವಿಸ್ಮಯದಿಂದ ಮಗಳ ಕಡೆ ನೋಡಿ, ನಂದಿನಿಯ ಕಡೆ ನೋಡಿದಳು. ನಂದಿನಿ ಪೆಚ್ಚಾಗಿದ್ದಳು.

"ಇತ್ಲಾಗೆ ಬನ್ನಿ ರಾಧಮ್ಮ. ಅವ್ಳಿಗೇ ಎಲ್ಲಾ ತಿಳಿದಿದೆ ಅಂದ್ಮೇಲೆ ಭಯ ಯಾಕೆ? ಈ ಕಾಲದ ಹುಡ್ಗೀರ್ಗೆ ಏನೂ ಹೇಳ್ಕೊಡಬೇಕಾಗಿಲ್ಲ."

"ಹೌದು. ಆಂಟೀ.... ನನಗೆ ತಿಳುವಳಿಕೆ ಬಂದಾಗ್ಲಿಂದ, ಅಮ್ಮ ಮೂರು ಮೂರು ದಿನ ಅಜ್ಜಿಯ ಹತ್ರ ಸೇವೆ ಮಾಡಿಸ್ಕೊಳ್ತಿದುದನ್ನು ಕಂಡಿದೀನಿ. ನನಗೆ ಅದೆಲ್ಲಾ ಇಷ್ಟವಿಲ್ಲ."

"ಹಾಗಲ್ವೇ ಮಧು.... ಅಜ್ಜಿ ಮಡಿ ಅಂತ ಗೊತ್ತಿದ್ದೂ... ಹೀಗಾಡ್ತೀಯಲ್ಲ."

"ನಾನು ಮೈಲಿಗೆ ಬೆರಸುಲ್ಲಮ್ಮ.... ಅಜ್ಜಿಯ ಮಡೀನ ಕೆಡಿಸುಲ್ಲ.... ಆದ್ರೆ ಅಜ್ಜಿ ತರಹ ನೀನು ಮಾತ್ರ ಮಾಡಿ ಮಾಡ್ಬೇಡ."

"ಇಲ್ಲ ಕಣೇ ಮಧು. ನಾನು ನಿನ್ನ ತಾಯಿ ಕಣೇ. ನಾನು ಹಾಗೆ ಮಡಿ ಮಾಡುಕ್ಕೇ ಆಗುತ್ತಾ! ನೋಡ್ತಿರು ನಿಂಗೆ ಏನೂ ತೊಂದ್ರೆ ಆಗದ ಹಾಗೆ ನಾನು ನೋಡಿಕೊಳ್ತೀನಿ." ರಾಧಾ ಆಶ್ವಾಸನೆ ಕೊಟ್ಟಳು.

"ಹಾಗಾದ್ರೆ ಒಳಗೆ ಬಾ.... ನಾನು ನಿನ್ನ ತೊಡೆಯ ಮೇಲೆ ತಲೆ ಇಟ್ಟು ಮಲಗ್ಬೇಕು." ಚುಡಾಯಿಸುವವಳಂತೆ ನಗುತ್ತಾ ಹೇಳಿದಳು.

"ನಂದಿನ್ನೂ ಊಟ ಆಗಿಲ್ಲ ಕಣೇ ಮಧು"

"ಸರಿ ಊಟ ಮಾಡ್ಕೊಂಡೇ ಬಾ.... ಅಲ್ಲೀವರ್ಗೂ ನಾನು ಓದ್ಕೊಳ್ತಾ ಇರ್ತೀನಿ" ಬಾಗಿಲನ್ನು ಮೆಲ್ಲನೆ ಮುಚ್ಚಿದಳು. ರಾಧ ನಂದಿನಿಯ ಕಡೆ ನೋಡಿ ಪೆಚ್ಚುನಗೆ ನಕ್ಕಳು. ಈಗೇನ್ಮಾಡ್ತೀರಿ ಎನ್ನುವಂತೆ ನಂದಿನಿ ನೋಡಿದಳು. ರಾಧಾ ಸುಸ್ತಾದವಳಂತೆ ಕುರ್ಚಿಯ ಮೇಲೆ ಕೂತಳು.

"ಈಗೇನ್ಮಾಡೋದು ನಂದಿನಿ.... ನಮ್ಮ ಅತ್ತೆಗೆ ತಿಳಿಸ್ದೇ ಇರುಕ್ಕಾಗುತ್ತಾ? ಅವರಿಗೆ ತಿಳಿದ್ರೆ ನನ್ನನ್ನ ಸುಮ್ನೆ ಬಿಡ್ತಾರಾ?.... ಅತ್ತೆ ಹಳೇ ಕಾಲದವರು, ಈ

ಮಕ್ಕಳು ಈ ಕಾಲದವರು.... ಇಬ್ಬರ ಮಧ್ಯೆ ನನ್ನ ಸ್ಥಿತಿ ನೋಡಿ" ಅಳುವ ಧ್ವನಿ ಬಂದಿತ್ತು.

"ನೀವು ಚಿಂತಿಸ್ಬೇಡಿ ರಾಧಮ್ಮ.. ಅವರೆಲ್ಲಾ ಎಷ್ಟಾಗ್ಲೀ ಒಂದೇ ರಕ್ತ.... ನೀವೇ ಹೊರಗ್ನೋರು. ಅಜ್ಜಿ ಮೊಮ್ಮಕ್ಳು ಒಂದಾಗೇ ಇರ್ತಾರೆ."

"ನಮ್ಮ ಅತ್ತೆ ವಿಷಯ ನಿಮಗೆ ಗೊತ್ತಿಲ್ವಾ ನಂದಿನಿ. ಮನೆ ವಿಷಯ ಅಂತ ಮುಚ್ಚಿಡೋಲ್ಲ. ಊರು ಹೊಲಗೇರಿ ಬಂದು ಮಾಡಿಬಿಡ್ತಾರೆ. ನಾನು ಯಾರ ಮಾತನ್ನ ಕೇಳ್ಲೀ? ಯಾರ ಮಾತನ್ನು ಬಿಡಲಿ?"

"ಈಗ ಸದ್ಯಕ್ಕೆ ಯಾರ ಮಾತಿಗೂ ತಲೆ ಕೆಡಿಸ್ಕೋಬೇಡಿ. ನಿಮ್ಮ ಮುಖ ಒಳ್ಳೆ ಖಾಯಿಲೆಯಿಂದ ಎದ್ದವರ ಮುಖದ ಥರ ಇದೆ. ನಿಮ್ಮ ಯಜಮಾನ್ರು ಊರ್ನಿಂದ ಯಾವಾಗ ಬರ್ತಾರೆ!"

"ನನಗೆ ಅದೂ ಚಿಂತೆ ಆಗಿದೆ. ಎರಡು ದಿನಗಳಿಂದ ಅವರಿಂದ ಫೋನು ಬರುತ್ತೇನೋ ಅಂತಾ ಕಾಯ್ತಾನೇ ಇದೀನಿ. ಎಲ್ಲಿದಾರೋ ಪುಣ್ಯಾತ್ಮರು. ಅವರಿಗೆ ಮನೆ ಕಡೆ ಚಿಂತೆಯೇ ಇಲ್ಲ. ಅವರಮ್ಮನ ಗೊಣಗಾಟನೂ ನಾನೇ ಕೇಳ್ಬೇಕು. ಅವರ ಮಕ್ಕಳ ಹುಡುಗಾಟಾನೂ ನಾನೇ ನೋಡ್ಬೇಕು. ನನಗೆ ಸಾಕಾಗಿ ಹೋಗಿದೆ."

"ಇಷ್ಟಕ್ಕೇ ಸಾಕಾಯ್ತು ಅಂತೀರಲ್ಲ ರಾಧಮ್ಮಾ... ಈಗಿನ್ನೂ ನಿಮ್ಮ ಮಕ್ಕಳು ಬೆಳೀತಿದಾರೆ. ಇನ್ನು ಅವರ ಜವಾಬ್ದಾರಿ ಕಳೆದಿಲ್ಲ. ದಿನ ದಿನಕ್ಕೂ ಜವಾಬ್ದಾರಿ ಹೆಚ್ಚುತ್ತೆ.... ಏಳಿ ನಿಮ್ಮ ಅತ್ತೇದೂ ಊಟ ಆಗಿರಬಹುದು... ನೋಡೋಣ" ನಂದಿನಿ ಅವಳನ್ನು ಎಬ್ಬಿಸಿಕೊಂಡು ಅಡಿಗೆ ಮನೆಯ ಕಡೆಗೆ ಬಂದಳು.ಗೌರಮ್ಮ ನಿರ್ಯೋಚನೆಯಿಂದ ಅನ್ನ ಕಲೆಸಿಕೊಂಡು ತಿನ್ನುವುದರಲ್ಲಿ ನಿರತಳಾಗಿದ್ದಳು.... ಬಾಳೆ ಎಲೆಯ ಮೇಲೆ ಅನ್ನದ ರಾಶಿ. ಅದರ ಮೇಲೆ ಬಿಸಿ ಬಿಸಿ ಹೊಗೆಯಾಡುವ ಮೇಲೋಗರ... ಘಂ ಎನ್ನುವ ಬೆಣ್ಣೆ ಕಾಸಿದ ತುಪ್ಪ. ನೆಂಚಿಕೊಳ್ಳಲು ಉಪ್ಪಿನಕಾಯಿ, ಸೊಪ್ಪಿನ ಪಲ್ಯ. ನಂದಿನಿ ರಾಧಾಳ ಕಡೆ ನೋಡಿದಳು. ಇದು ತನಗೆ ಹೊಸ ನೋಟ ಅಲ್ಲವೆನ್ನುವಂತೆ ರಾಧಾ ಮುಖಭಾವ ಮಾಡಿದಳು.... ನಂದಿನಿ ಇತ್ತ ಸರಿದು ಪಿಸುದನಿಯಲ್ಲಿ ಕೇಳಿದಳು...

"ಈ ಪಾಟಿ ಅನ್ನ ತಿಂತಾರಲ್ಲ ನಿಮ್ಮತ್ತೆ... ಅರಗುತ್ತಾ?...."

"ಅರಗ್ದೇ ಏನು! ಹೇಗಿದಾರೆ ನೋಡಿ.... ಒಂದು ದಿನವಾದ್ರೂ ಕೆಮ್ಮು ನೆಗಡಿ ಅಂತ ನರಳಿದ್ದನ್ನ ನೋಡಿದೀರಾ? ಬಿಸಿ ಬಿಸಿ, ತಪ್ಪಲೆಯಿಂದ ಇಳಿಸಿದ

ಅನ್ನ ತಿಂತಾರೆ. ಒಪ್ಪೊತ್ತಿನ ಊಟ ಅಂತ ಚೆನ್ನಾಗಿಯೇ ಬಡಿಸ್ಕೊಂಡು ಊಟ ಮಾಡ್ತಾರೆ. ಇನ್ನು ತಿನ್ನುಕ್ಕಾಗುಲ್ಲ ಅನ್ನುವಷ್ಟು ಹಾಕ್ಕೊತಾರೆ. ಆ ಅನ್ನವನ್ನೂ ಉಂಡೆ ಕಟ್ಟಿ ತನಗೆ ತಾನೇ ನಿವಾಳಿಸಿಕೊಂಡು, ಬೀದಿಗೆ ಎಸೀತಾರೆ....

"ಯಾಕೆ?...."

"ದೃಷ್ಟಿಯಾಗದಿರಲಿ ಅಂತ...."

"ಹೀಗೆ ತಿಂದರೆ ದೃಷ್ಟಿಯಾಗದೇ ಇರುತ್ತಾ?"

"ಶ್ ಮೆಲ್ಲಗೆ... ಕೇಳ್ಸಿದ್ರೆ.... ಒಂದು ರಂಪವೇ ಆಗಿಹೋಗುತ್ತೆ."

"ನೀವ್ಯಾಕೆ ನಿಮ್ಮ ಅತ್ತೆಗೆ ಇಷ್ಟೆ ಹೆದರ್ತೀರಿ!"

"ಹೆದರಿಕೆ ಅಂತಲ್ಲ. ನಾನ್ಯಾಕೆ ಆಡ್ಬೇಕು. ನನಗೇನು ಅಧಿಕಾರ ಇದೆ! ಎಷ್ಟಾಗಲೀ ಅವರ ಮಗನ ಮನೆ. ಅವರ ಕೈಯ ಅಡಿಗೆ. ಮೊದಲಿಗೆಲ್ಲ ಬಡತನ ಅಂತ, ಚೆನ್ನಾಗಿ ತಿಂದಿದಾರೋ ಇಲ್ವೋ.... ಈಗ ಮಗನ ಕಾಲ್ದಲ್ಲಾದ್ರೂ ಚೆನ್ನಾಗಿ ತಿನ್ನಲಿ. ನಾನ್ಯಾಕೆ ಕಣ್ಣು ಹಾಕಲಿ? ಅವರು ನನ್ಮೇಲೆ ಕಿಡಿಗಣ್ಣ ನೋಟ ಬೀರದಿದ್ರೆ ಸಾಕು.... ಅವರಿಗೆ ನನ್ನ ಮೇಲೆ ಯಾವ ಮಮತೆಯೂ ಇಲ್ಲ. ಸೊಸೆ ಮಗಳಾಗುವುದು ಸಾಧ್ಯವಿಲ್ಲ ಅಂತ ಹೇಳ್ತಾನೇ ಇರ್ತಾರೆ."

"ಹೆಣ್ಣು ಮಕ್ಕಳ ಮೇಲೆ ಇರೋ ಪ್ರೀತಿಯೂ ಅಷ್ಟರಲ್ಲೇ ಇದೆ."

"ಅದು ನಿಜ. ಅಂಥೋರು ಸೊಸೇನ ಮಗಳಂತೆ ನೋಡಿಕೊಳ್ಳೋಕೆ ಸಾಧ್ಯಾನಾ?.... ಅತ್ತೆ ಅತ್ತೆಯೇ ತಾಯಿಯಲ್ಲ. ಅನ್ನೋ ಸತ್ಯ ನಂಗೂ ಅರಿವಾಗಿದೆ. ನನ್ನ ಪಾಡಿಗೆ ನಾನು ಇದೀನಿ..."

"ನಿಮ್ಮ ಪಾಡಿಗೆ ನೀವು ಬೇರೆ ಮನೆ ಮಾಡ್ಕೊಂಡು ಇರ್ಬೇಕು ಅಂತ ನಿಮಗೆ ಅನ್ನಿಸುಲ್ವಾ ರಾಧಮ್ಮಾ..."

"ತೀರ ರೇಗಿದಾಗ ಅನ್ನಿಸುತ್ತೆ. ಆದರೆ ಹಿಂದೆಯೇ ವಿವೇಕ ತಿಳುವಳಿಕೆ ಹೇಳುತ್ತೆ. ಬೇರೆ ಇನ್ಯಾರಿದಾರೆ ನೀವೇ ಹೇಳಿ. ಹೆಣ್ಣು ಮಕ್ಕಳು ಹಬ್ಬ ಹುಣ್ಣಿಮೆ ಅಂತ ಬರ್ತಾರೆ, ಅಮ್ಮನ್ನೇ ಒಂದಿಷ್ಟೇ ಅಂದುಬಿಟ್ಟು ಹೋಗ್ತಾರೆ.... ಅಮ್ಮ ಈ ಕಾಲದಲ್ಲಿ ಆರಾಮವಾಗಿರುವುದು ಅವರಿಗೂ ಸಹಿಸುಲ್ಲವೇನೋ... ತಾಯಿ ಮಕ್ಕಳಲ್ಲಿ ಅನ್ಯೋನ್ಯತೆಯೇ ಇಲ್ಲ. ನನಗೂ ಭಯ ನನ್ನ ಮಕ್ಕಳೂ ಎಲ್ಲಿ ಹಾಗೇ ಆಗಿಬಿಡ್ತಾರೋ ಅಂತ..."

"ಬಿಡ್ತು ಅನ್ನಿ.... ನಿಮ್ಮ ಮಕ್ಕಳು ಹಾಗಾಗಲು ಸಾಧ್ಯವೇ ಇಲ್ಲ..." ತಟ್ಟನೆ ಮಾತನ್ನು ನಿಲ್ಲಿಸಿದಳು ನಂದಿನಿ....

"ಯಾಕೆ ನಂದಿನಿ ಏನಾಯ್ತು?....

"ನಿಮ್ಮ ಅತ್ತೆಯ ಊಟ ಮುಗೀತು.... ಎಲೆ ಮಡಿಸಿ ಎತ್ತುತ್ತಿದ್ದಾರೆ.... ನಾನಿನ್ನು ಬರ್ತೀನಿ. ನನ್ನ ಸಹಾಯ ಏನಾದ್ರೂ ಬೇಕಿದ್ರೆ ಕೇಳಿ. ಮಧೂನ ನಮ್ಮ ಮನೆಗೆ ಕಳಿಸಿ..... ನಮ್ಮ ಮನೇಲಿ ಯಾವ ಮಡಿಯ ಹೆದರಿಕೆ ಇಲ್ಲ..."

"ಪರವಾಗಿಲ್ಲ ನಂದಿನಿ. ನಾನು ಹದಿನೈದು ವರ್ಷಗಳಿಂದ ನಿಭಾಯಿಸಿದೀನಿ. ಮಕ್ಕಳಿಗೂ ಗೊತ್ತಿದೆ.... ಏನೂ ಕಷ್ಟವಾಗುಲ್ಲ.... ನೀವೂ ಇಲ್ಲೇ ಊಟಕ್ಕೆ ಏಳಿ.... ಇಬ್ರೂ ಮಾತಾಡ್ತಾ ಊಟ ಮಾಡೋಣ."

"ಮಧುರಂಗೆ?"

"ನಮ್ಮತ್ತೆ ಇನ್ನೂ ಸ್ವಲ್ಪ ಹೊತ್ತಿಗೆ ಅವರ ಸ್ನೇಹಿತೆಯ ಮನೆಗೆ ಹೋಗ್ತಾರೆ. ಆಗ ಬಿಡಿಸ್ತೀನಿ.... ಹೇಗೂ ತಿಂಡಿ ತಿಂದಿದಾಳಲ್ಲ..."

"ನಾನು ಕಾಯಿಸಾಸುವೆ ತಿರುವಿ ಹಾಕಿ ಚಿತ್ರಾನ್ನ ಕಲೆಸಿದ್ದೆ. ತಗೊಂಡು ಬರ್ತೀನಿ. ಮಧುರಂಗೆ ಇಷ್ಟವಾಗಬಹುದು." ನಂದಿನಿ ಅತ್ತ ಹೋದಳು.

* * * *

"ಅಮ್ಮಾ.... ಮಧು ಇನ್ನು ಮನೆಗೆ ಬಂದಿಲ್ವಾ!" ಮಯೂರ ಕೇಳಿದಾಗ ರಾಧಾ.... ಸುಮ್ಮನಿರು ಎನ್ನುವಂತೆ ಬಾಯಮೇಲೆ ಬೆರಳನ್ನಿಟ್ಟು ಎಚ್ಚರಿಸಿದಳು.

"ಯಾಕಮ್ಮಾ.... ಸ್ಕೂಲ್ನಲ್ಲಿ ಏನಾದ್ರೂ ಫಂಕ್ಷನ್ನಾ? ನಂಗೆ ಹೇಳಲೇ ಇಲ್ಲವಲ್ಲ ಅವಳು."

"ಅವಳು ಮಲಗಿದಾಳೆ. ಅವಳಿಗೆ ಹುಷಾರಿಲ್ಲ."

"ಹುಷಾರಿಲ್ವಾ! ಜ್ವರಾನಾ?.... ಅಲ್ಲೇ ಕುಳಿತಿದ್ದ ಮಂದಾರ ಕೇಳಿದಳು.

"ಸುಮ್ನೆ ತಿಂಡಿ ತಿಂದು ಎದ್ದು ಆಟ ಆಡ್ನೋ ಹೋಗು.... ಜ್ವರವೂ ಇಲ್ಲ ಛಳಿಯೂ ಇಲ್ಲ."

"ಮತ್ತೇನಾಗಿದೆ!"

"ಸುಮ್ನೆ ಹೋಗ್ತೀಯೋ ಇಲ್ವೋ, ಅಪ್ಪಂಗೆ ಹೇಳ್ತೀನಿ ಅಷ್ಟೇ..." ಮಂದಾರ ಮುಖ ಚಿಕ್ಕದು ಮಾಡಿಕೊಂಡು ತಿಂಡಿಯನ್ನು ಅಲ್ಲಿಯೇ ಬಿಟ್ಟು ಎದ್ದುಹೋದಳು.

"ಅಮ್ಮಾ.... ನೀನ್ಯಾಕಮ್ಮಾ ಅವಳನ್ನ ಬೈದೆ.... ಮಧುರಂಗೆ ಏನಾಗಿದೆ ಹೇಳು. ಅಜ್ಜಿ ಏನಾದ್ರೂ ಅಂದ್ರಾ?"

"ನಿಮ್ಮ ಈ ಅಜ್ಜಿಗೆ ಬೇರೆ ಏನೂ ಕೆಲ್ಸ ಇಲ್ವಾ?..... ನಿಮ್ಮನ್ನೆಲ್ಲಾ ಅನ್ನೋದೇ ನನ್ನ ಕೆಲಸಾನಾ? ಹೋಗೇ ಹುಚ್ಚುಗೈನೆ... ನಿಮ್ಮ ನಿಮ್ಮ ಕೆಲ್ಸ ನೋಡ್ಕೊಳ್ಳಿ...." ಮಯೂರ ಅಜ್ಜಿಯ ಕಡೆ ಕೋಪದಿಂದ ನೋಡಿದಳು. ಅಜ್ಜಿ ಹಿಂದೆಯೇ ಬಂದು ನಿಂತದ್ದು ಅವಳಿಗೆ ಗೊತ್ತಿರಲಿಲ್ಲ. ರಾಧಾ ಮಗಳನ್ನು ಗದರಿದಳು.

"ಈ ತಿಂಡಿ ತಟ್ಟೆಗಳನ್ನೆಲ್ಲಾ, ನಲ್ಲೀ ಕಟ್ಟೇಲಿಟ್ಟು, ಒದ್ದೆ ಬಟ್ಟೇಲಿ ಈ ಜಾಗವನ್ನೆಲ್ಲಾ ಒರೆಸು.... ಸುಮ್ಮನೇ ಮಾತುಬೇಡ."

"ನಾನು ಆಮೇಲೆ ಬಂದುಮಾಡ್ತೀನಿ. ನಂಗೆ ಡ್ಯಾನ್ಸ್ ಕ್ಲಾಸ್ಗೆ ಹೊತ್ತಾಯ್ತು."

"ಸರಿ.... ನಡೀ.... ನೀವೆಲ್ಲಾ ಮೈಗಳ್ಳರು" ಎನ್ನುತ್ತಾ ತಾನೇ ತಟ್ಟೆಗಳನ್ನು ಎತ್ತಿಡತೊಡಗಿದಳು. ಮಯೂರ ಗೆಜ್ಜೆಗಳನ್ನು ಸದ್ದು ಮಾಡುತ್ತಾ ಬಾಗಿಲನ್ನು ದಾಟಿ ಹೊರನಡೆದಳು.

"ನಾನೂ ಬೆಳಗ್ಗಿಂದ ನೋಡ್ತಾನೇ ಇದೀನಿ..... ಅದೇನು ಗುಸುಗುಸು.... ಪಿಸುಪಿಸು..... ನಂದಿನಿ ಯಾಕೆ ಬಂದಿದ್ಲು.... ಮಧು ಋತುಮತಿ ಆದ್ಲೇನು?" ಅತ್ತೆ ನೇರವಾಗಿ ಕೇಳಿದಾಗ, ರಾಧಾ ನೆಟ್ಟಗೆ ನಿಂತಳು. ಅತ್ತೆಯನ್ನೇ ಒಂದು ಗಳಿಗೆ ದಿಟ್ಟಿಸಿದಳು. ತಡವರಿಸಿ ತಲೆತಗ್ಗಿಸಿ ನುಡಿದಳು.

"ಹೂಂ. ಅತ್ತೆ..."

"ಹೂಂ. ಈಗ ಹೇಳ್ತಿದೀಯ ನಂಗೆ. ಮನೇಲಿ ಹಿರಿಯವಳು ನಾನೊಬ್ಳು ಇದೀನಿ ಅನ್ನೋ ನೆನಪೇ ಇಲ್ವಾ ನಿಂಗೆ.... ನಾನೇನು ನಿನ್ನ, ನಿನ್ನ ಮಕ್ಕಳ ಶತ್ರೂನೇ.... ನಂಗಂತೂ ಒಂದು ವಿಷಯ ತಿಳಿಸುಲ್ಲ ನೀನು.... ನೀನು, ನಿನ್ನ ಮಕ್ಕಳು ಒಂದು, ನಾನೇ ಒಂದು...."

"ಹಾಗೇನಿಲ್ಲ ಅತ್ತೆ. ನೀವು ಏನೇನೋ ಅನ್ಬೇಡಿ. ನಂಗೆ ದಿಕ್ಕು ತೋಚದಾಗಿದೆ. ಅವಳಿನ್ನೂ ಚಿಕ್ಕವಳು. ಅವಳಿಗಿನ್ನೂ ಏನೂ ತಿಳಿಯದು. ಅದಕ್ಕೇ.... ಆತಂಕ ಆಗ್ತಿದೆ."

"ಏನು ಚಿಕ್ಕೋಳು. ಅವಳಿಗೂ ಇನ್ನೆರಡು ತಿಂಗಳಿಗೆ ಹದಿನೈದು ವರ್ಷ ತುಂಬುತ್ತೆ. ಮೈಕೈಯೆಲ್ಲಾ ಗುಂಡು ಗುಂಡಾಗಿವೆ... ಬೆಳೆದಿಲ್ವಾ.... ಆತಂಕ ಯಾಕೆ!.... ಯಾವ ಹೆಣ್ಣಿಗೆ ಇದು ತಪ್ಪಿದೆ.... ಇವತ್ತು ಇವಳು.... ಮುಂದಿನ ವರ್ಷವೋ ಅದರ ಮುಂದಿನ ವರ್ಷವೋ.... ಈ ಗಂಡುಬೀರಿಯೂ ಮೈ ನೆರೀತಾಳೆ.... ಯಾವ ಹೆಣ್ಣಿಗೂ ತಪ್ಪಿದ್ದಲ್ಲ" ಅತ್ತೆಯ ಕುಚೋದ್ಯದ ಮಾತು ಅವಳಿಗೆ ಹಿಡಿಸಲಿಲ್ಲ. ಮಾತು ಬದಲಾಯಿಸಿದಳು.

"ಸ್ಕೂಲು ತಪ್ಪಿಸೋಕೆ ಆಗುತ್ತಾ? ಪಾಠ ಹೋಗುತ್ತೆ. ಅಟೆಂಡೆನ್ಸ್ ಕಡಿಮೆ ಆಗುತ್ತೆ... ಹೋಗ್ಬೇಡ ಅಂತ ಹೇಗೆ ಹೇಳೋದು?"

"ಸ್ಕೂಲ್ಗೂ ಕಳ್ಸು... ಪೆರೇಡ್‌ಗೂ ಕಳ್ಸು. ಮಂದಿ ಕಾಣ್ಲಿ ಹಾಗೆ ಮೋಟು ಲಂಗ ಹಾಕ್ಕೊಂಡು ಸುತ್ತಾಡ್ಕೊಂಡು ಬರ್ಲಿ. ನಾಚ್ಕೆ. ಹೇಸ್ಗೆಯಾವ್ದೂ ಇಲ್ಲ ಈಗ್ನೋರ್ಗೆ..."

"ಅತ್ತೇ.... ನೀವು ಹೀಗೆಲ್ಲಾ ಮಾತಾಡ್ತೀರೀಂತ್ಲೇ ನಿಮಗೆ ಹೇಳಿರ್ಲಿಲ್ಲ.... ಮನೇಲೇ ಕೂರಿಸ್ಕೊಂಡಿರುಕ್ಕೆ ಆಗುತ್ತಾ! ಯೂನಿಫಾರಂ ಡ್ರೆಸ್ ಹಾಕ್ಕೊಳ್ದೇ ಇರುಕ್ಕೆ ಆಗುತ್ತಾ? ಇದೆಲ್ಲಾ ನಿಮ್ಗೆ ಅರ್ಥವಾಗುಲ್ಲ."

"ಹೌದಮ್ಮಾ ಹೌದು. ನಂಗೆ ಏನೂ ಅರ್ಥವಾಗುಲ್ಲ. ನಿನಗೇ ಎಲ್ಲಾ ಅರ್ಥ ಆಗೋದು. ಅದೇನು ಬೆಳೆಸಿದಾರೋ ನಿಮ್ಮ ಅಪ್ಪ ಅಮ್ಮ ನಿನ್ನನ್ನ...."

"ಅತ್ತೇ! ನಮ್ಮ ಅಪ್ಪಅಮ್ಮನ ವಿಷಯ ನಿಮ್ಗೇನು ಗೊತ್ತು! ನಮ್ಮನ್ನೆಲ್ಲಾ ಸರಿಯಾಗೇ ಬೆಳ್ಸಿದಾರೆ. ಅಂಥದ್ದೇನು ಮಾಡಿದೀನಿ ನಾನೀಗ?"

"ನನ್ಗೇನು ಬೆಲೆ ಕೊಟ್ಟಿದೀಯ ನೀನು! ನಂಗೊಂದು ಮಾತು ತಿಳಿಸ್ಬೇಕು ಅಂತ ನಿನಗನ್ನಿಸ್ಲಿಲ್ಲಾ! ಮಧು ನನ್ನ ಮೊಮ್ಮಗಳು. ನಾನು ಅವಳ ಅಜ್ಜಿ...."

"ಸರಿ. ಈಗ ವಿಷಯ ತಿಳೀತಲ್ಲ. ಎಲ್ರಿಗೂ ಹೇಳ್ಕೊಂಡು ಬನ್ನಿ. ರಸ್ತೆಯೋರ್ಗೆಲ್ಲಾ ವಿಷಯ ತಿಳೀಲಿ..."

"ನಾನು ತಿಳಿಸ್ತೀನೋ ಬಿಡ್ತೀನೋ ನಿಂಗ್ಯಾಕೆ! ಮಹಾ ನೀನೊಬ್ಬೇ ಮಗಳನ್ನ ಹೆತ್ತಿರೋಳ ಹಾಗೆ ಕುಣೀಬೇಡ. ನಾನೂ ಇಬ್ಬರು ಹೆಣ್ಣು ಮಕ್ಕಳನ್ನು ಹೆತ್ತಿದೀನಿ. ಅವರಿಬ್ಬರೂ ಮೈನೆರೆದಾಗ, ಆರೈಕೆ ಮಾಡ್ದೆ. ಆರತಿ ಎತ್ತಿಸಿದೆ. ದೃಷ್ಟಿ ತೆಗೆಸಿದೆ. ಮನೇಲಿ ಸಂಭ್ರಮದ ವಾತಾವರಣ ಇತ್ತು. ಹೀಗೆ ಜಗಳ ಕದನ ಇರ್ಲಿಲ್ಲ."

"ನಾನೇನು ಜಗಳ ತೆಗೀಲಿಲ್ಲ. ನನ್ನನ್ನ ಬೈಯಬೇಡಿ."

"ನಾನೇ ಜಗಳ ತೆಗೆದದ್ದು. ನಾನು ಜಗಳಗಂಟಿ. ನಮ್ಮಪ್ಪನ ಮನೆಯವರು ನನ್ನನ್ನು ಬೆಳೆಸಿದ್ದೇ ಹೀಗೆ..." ಅತ್ತೆ ಹೋ ಎಂದು ದೊಡ್ಡ ದನಿಯಲ್ಲಿ ಅಳತೊಡಗಿದಾಗ ರಾಧಾ ತಬ್ಬಿಬ್ಬಾದಳು. ಅಳುವಂಥಾದ್ದೇನಾಯ್ತು? ನಾನೀಗ ಏನಂದೆ ಎಂದು ಅವಳಿಗೆ ಅರ್ಥವಾಗಲಿಲ್ಲ. ಗೌರಮ್ಮನ ಅಳುವಿನ ಧ್ವನಿ ಕೇಳಿ ಮಧುರ ಬಾಗಿಲನ್ನು ತೆರೆದು ಹೊರಬಂದು ನಿಂತಳು. ಒಳಕ್ಕೆ ಹೋಗು ಎನ್ನುವಂತೆ ರಾಧಾ ಸಂಜ್ಞೆ ಮಾಡಿದಳು. ನಂದಿನಿ ಕಿಟಕಿಯಲ್ಲಿ ಹಣಿಕಿದಳು.

"ರಾಧಮ್ಮ ಏನಾಯ್ತು? ಯಾರು ಅಳ್ತಾ ಇರೋದು?..." ರಾಧಾ ಕಿಟಕಿಯ ಬಳಿ ಬಂದು ನಿಂತಳು.

"ಏನೇನೋ ಮಾತಾಡಿ, ಜಗಳವಾಡಿ, ತಮ್ಮನ್ನು ತಾನೇ ಬೈದುಕೊಂಡು ಅಳ್ತಾ ಇದಾರೆ. ನಂಗಂತೂ ರೋಸಿಹೋಗಿದೆ. ನಾನು ಮನೆಬಿಟ್ಟು ಎಲ್ಲಾದ್ರೂ ಹೊರಟುಹೋಗ್ತೀನಿ ಅಷ್ಟೇ."

"ನೀವೂ ತಲೆ ಕೆಟ್ಟೋರ ಥರ ಆಡ್ತೀರಲ್ಲ. ಇಂಥದ್ದೇನು ಹೊಸದೇ ನಿಮಗೆ!"

"ಅಲ್ಲಾ ನಂದಿನಿ.... ಇವತ್ತೇ ಹೀಗಾಡಬೇಕಾ?.... ಮಧುರ ಹೆದರಿಕೊಳ್ಳಲ್ವಾ.... ನಾಲ್ಕು ಧೈರ್ಯದ ಒಳ್ಳೆಯ ಮಾತುಗಳನ್ನಾಡೋದು ಬಿಟ್ಟು. ಹೀಗೆ ರಂಪ ಮಾಡಿ ಹೆದರಿಸೋದಾ?" ರಾಧಾ ತೊಟ್ಟಿಕ್ಕಿದ ಕಣ್ಣೀರನ್ನು ಒರೆಸಿಕೊಂಡಳು.

"ಸಮಾಧಾನ ಮಾಡ್ಕೊಳ್ಳಿ ರಾಧಮ್ಮ... ನಿಮ್ಮತ್ತೆಯ ಬಾಯ್ಮುಂದೆ ಯಾರ್ಗೂ ನಿಲ್ಲುಕ್ಕಾಗುಲ್ಲ. ಮಧುರ ಊಟ ಮಾಡಿದ್ಲಾ? ತಿಂಡಿಗಿಂಡಿ ತರಿಸಿಕೊಡಿ. ಬೇಜಾರಾಗ್ತಿರುತ್ತೆ."

ಅನ್ನ ಕಲೆಸಿಕೊಟ್ಟಿದ್ದೆ. ಸಾಯಂಕಾಲ ತಿಂಡಿಕೊಡ್ತೀನಿ. ಯಾರು ಹೇಳದಿದ್ರೂ ಅತ್ತೆಗೆ ವಿಷಯ ಗೊತ್ತಾಗಿದೆ. ಅದೇ ಅವರ ಕೋಪಕ್ಕೆ ಕಾರಣ....

"ಹೋಗ್ಲಿ ಬಿಡಿ. ನೀವು ಮಾತಾಡ್ಲೇಬೇಡಿ.... ಯಾರೋ ಆಟೋದಲ್ಲಿ ಬಂದ್ರಲ್ಲಾ.... ನಮ್ಮ ಮನೆಗೋ? ನಿಮ್ಮ ಮನೆಗೋ...? ನಿಮ್ಮ ಮನೆಗೇ ಇರ್ಬೇಕು. ಯಾರೂಂತ ಮೊದಲು ನೋಡಿ...." ರಾಧಾ ಕಿಟಕಿಯ ಬಳಿಯಿಂದ ಇತ್ತಬಂದಳು.

ಮೊದಲು, ಆಟೋದಿಂದ ಒಬ್ಬ ಯುವಕ ಇಳಿದ. ಅವನ ಹಿಂದೆ ಅವಳ ಪತಿ ಕೇಶವ ಇಳಿದ. ಆ ಯುವಕ, ಕೇಶವನನ್ನು ನಿಧಾನವಾಗಿ ನಡೆಸಿಕೊಂಡು ಗೇಟಿನಿಂದ ಒಳಕ್ಕೆ ಕರೆತಂದ. ರಾಧಾ ಮುಂಬಾಗಿಲಿಗೆ ಬಂದು ಗಂಡನ ಕಡೆ ನೋಡಿದಳು. ಅವನು ಪೆಚ್ಚುನಗೆ ನಕ್ಕಂತೆ ಅನ್ನಿಸಿತು.

"ಏನಾಯ್ತು?.... ಏನಾಯ್ತು ನಿಮಗೆ!" ಆತಂಕದಿಂದ ಕೇಳಿದಳು.

"ಏನಿಲ್ಲ. ಸ್ವಲ್ಪ ಸುಸ್ತು. ಹುಷಾರಾಗಿದೀನಿ. ಸ್ವಲ್ಪ ಬಿಸಿಬಿಸಿ ಕಾಫೀನೋ ಟೀನೋ ಕೊಡ್ತೀಯಾ?" ಆ ಯುವಕನೊಡನೆ ಒಳಬಂದ ಕೇಶವ, ಅಲ್ಲಿದ್ದ

ಸೋಫಾದ ಮೇಲೆ ಕುಳಿತ. ಆ ಯುವಕ ಲಗೇಜುಗಳನ್ನು ಒಳತಂದು, ಆಟೋದವನಿಗೆ ದುಡ್ಡು ಕೊಟ್ಟು ಕಳಿಸಿದ.

"ಅಮ್ಮಾ ಹೇಗಿದೀಯಮ್ಮಾ?".... ಅಲ್ಲಿಯೇ ಕೂತಿದ್ದ ತಾಯಿಯನ್ನು ಕೇಳಿದ.

"ನಂಗೇನಾಗಿದೆ? ಕಲ್ಲು ಗುಂಡು ಇದ್ದ ಹಾಗಿದೀನಿ. ನಿಂಗೇನಾಯ್ತು? ಇಳಿದು ಹೋಗಿದೀಯ.... ಈ ಟೂರ್ ಕೆಲ್ಸ ಬೇಡ ಅಂತಂದ್ರೆ ಕೇಳುಲ್ಲ ನೀನು..."

"ನೀನು ಹೀಗೆ ಹೊರಗೆ ತಿರುಗಿ, ಕಷ್ಟಪಟ್ಟು ಸಂಪಾದಿಸೋದು.... ದುಡಿಯೋನು ನೀನೊಬ್ಬ.... ತಿನ್ನೋಕೆ ಐದು ಬಾಯಿ...." ಕಾಫಿ ಬೆರೆಸುತ್ತಿದ್ದ ರಾಧಾ ಹಲ್ಲು ಕಡಿದಳು. ಜೊತೇಲಿ ಬಂದಿರೋ ಹುಡುಗನ ಎದುರಿಗೆ ಇನ್ನು ಏನೇನು ಆಡಿ ಬಿಡುವರೋ ಎಂದುಕೊಂಡು ಹೊರಬಂದಳು.

"ನೀವು ಎದ್ದು ಕೈಕಾಲು ಮುಖ ತೊಳೀರಿ... ಹಂಡೇಲಿ ಬಿಸಿ ನೀರಿದೆ..."

ತಿನ್ನೋಕೆ ತಿಂಡಿ ಏನಾದ್ರೂ ಇದೆಯಾ! ಹೋಗೋ ರಾಜಾ, ಕೈಕಾಲು ಮುಖ ತೊಳ್ಕೊಂಡು ಬಾ.... ಮಕ್ಕಳೆಲ್ಲಾ ಎಲ್ಲಿ?".... ರಾಧಾ ಅತ್ತೆಯ ಮುಖ ನೋಡಿದಳು. ಅದೇನೋ ಅತ್ತೆ ಸುಮ್ಮನಿದ್ದಳು.... ಆ ಹುಡುಗ ಅತ್ತ ಹೋದ ನಂತರ ಕೇಳಿದಳು.

"ಯಾರೀ ಹುಡುಗಾ?....

"ಮನೋಹರ ಅಂತ. ಇವನ ತಂದೆ ತಾಯಿ ಬದುಕಿಲ್ಲ. ಸೋದರಮಾವನ ಮನೇಲಿ ಓದ್ಕೊಂಡಿದ್ದ. ಈ ಊರಿನ ಕಾಲೇಜಿನಲ್ಲಿ ಸೀಟು ಸಿಕ್ಕಿದೆ..." ಇಷ್ಟೇ ಪರಿಚಯ ಸಾಕು ಎನ್ನುವಂತೆ ಸುಮ್ಮನಾದ.

ತಿಂಡಿ ಕಾಫಿಯ ನಂತರ, ಕೇಶವ ಮುಂದಿನ ರೂಮಿನ ಬಾಗಿಲು ಮುಚ್ಚಿರುವುದನ್ನು ಕಂಡ. "ರಾಧಾ...." ನಿಂತಲ್ಲಿಂದಲೇ ಕರೆದ. ಒಳಗೆ ಯಾರಿದಾರೆ? ಬಾಗಿಲು ಯಾಕೆ ಹಾಕಿದೆ?"

"ಮಧುರ ಮಲಗಿದಾಳೆ. ಅವಳಿಗೆ ಹುಷಾರಿಲ್ಲ."

"ಹುಷಾರಿಲ್ಲದಿದ್ರೆ ಒಳಗಿನ ರೂಮ್ನಲ್ಲಿ ಮಲಕ್ಕೋಬೇಕು. ಇಲ್ಲೇನು ಮಲಗೋದು?"

"ನೀವು ಸ್ವಲ್ಪ ಸುಮ್ನಿರ್ತೀರಾ?.... ಅವಳು ಒಳಗೆ ಬರೋ ಹಾಗಿಲ್ಲ. ಪಿಸುದನಿಯಲ್ಲಿ ಹೊರಗಿನವರಿಗೆ ಕೇಳಿಸಿದಂತೆ ನುಡಿದಳು.

"ಏನು ಹಾಗಂದ್ರೆ?.... ಮತ್ತೆ ನಾನು? ನಾನು ಎಲ್ಲಿ ಮಲಗ್ಲೀ..." ಅರ್ಥವಾಗದವನಂತೆ ಮತ್ತೆ ಕೇಳಿದ.

"ಮೇಲಿನ ರೂಮ್ನಲ್ಲಿ ಮಲಕ್ಕೊಳ್ಳಿ. ಮೂರು ದಿನ ಅಷ್ಟೇ...

"ಮೇಲಿನ ರೂಮ್ನಲ್ಲಿ ರಾಜ ಮಲಗ್ತಾನೆ... ಅವನು ಅಲ್ಲಿರ್ತಾನೆ."

"ಅಂದ್ರೇ.... ಈ ಹುಡ್ಗಾ ಇಲ್ಲೇ ಇರ್ತಾನಾ?..."

"ಈ ಚರ್ಚೆ ಎಲ್ಲಾ ನಿಧಾನವಾಗಿ ಆಗ್ಲಿ.... ನಿನ್ನ ಮಗಳಿಗೆ ಬಾಗಿಲು ತೆಗಿ ಅಂತ ಹೇಳು. ಒಳಗೆ ನನ್ನ ಬಟ್ಟೆಗಳಿವೆ."

"ನೀವು ಇತ್ಲಾಗ್ಬನ್ನಿ. ನಾನು ನಿಮ್ಮ ಬಟ್ಟೆಗಳನ್ನು ಹೊರಕ್ಕೆ ತಂದುಕೊಡ್ತೀನಿ. ನೀವು ಇವತ್ತು ಬರ್ತಿದೀರಿ ಅಂತ ಗೊತ್ತಿದ್ದಿದ್ರೆ ಎಲ್ಲಾ ಹೊರಕ್ಕೆ ತಂದಿಡ್ತಿದ್ದೆ. ಬೆಳಗ್ನಿಂದ ನನ್ನ ಮನಸ್ಸೇ ಸರಿ ಇಲ್ಲ" ಕೇಶವ ಅತ್ತ ಸರಿದು ಹೋಗಿದ್ದ. ತನ್ನ ಹೆಸರಿಗೆ ಬಂದಿದ್ದ ಕಾಗದಗಳ ಕಡೆ ಗಮನಹರಿಸಿದ್ದ.

"ಮಧೂ... ಬಾಗಿಲು ತೆಗಿ..." ಮಧುರ ಬಾಗಿಲನ್ನು ಸ್ವಲ್ಪವೇ ತೆರೆದು, ತಾಯಿಯನ್ನು ಸಂಜ್ಞೆಯಲ್ಲಿಯೇ ಏನು ಎನ್ನುವಂತೆ ಪ್ರಶ್ನಿಸಿದಳು.

"ನಿಮ್ಮಪ್ಪನ ಬಟ್ಟೆಬರೆ ಎಲ್ಲಾ ಇಲ್ಲೇ ಇದೆ... ಹೊರಕ್ಕೆ ತಗೊಂಡು ಹೋಗ್ತೀನಿ. ನೀನು ಅತ್ಲಾಗೆ ನಿಂತ್ಕೋ..." ಒಳಬಂದು ಬಾಗಿಲನ್ನು ಸರಿಸಿದಳು.

"ಅಮ್ಮಾ... ಅಪ್ಪಂಗೆ ಹೇಳ್ಬೇಡಮ್ಮ...." ಲಜ್ಜೆಯಿಂದ ನುಡಿದಳು.

"ಹುಂ. ಹೇಳುಲ್ಲ. ಆದ್ರೆ ಒಂದೇ ಮನೇಲಿದ್ದ ಮೇಲೆ ಗೊತ್ತಾಗ್ದೇ ಇರುತ್ತಾ ಮಧು.... ನಿನ್ನ ಪಾಡಿಗೆ ನೀನು ಸುಮ್ನಿರು..." ಮಧುರ ಕೈಬೆರಳುಗಳ ಉಗುರು ತೆಗೆಯುತ್ತಾ ನಿಂತಳು. ರಾಧಾ ಕೆಲವು ಬಟ್ಟೆಗಳನ್ನು ತೆಗೆದುಕೊಂಡು ಹೊರಬಂದಳು.

"ಬರೀ ಬಾಗಿಲು ಹಾಕ್ಕೋ.. ಯಾರೂ ಬರುಲ್ಲ. ಪ್ರತಿಸಲವೂ ಬಾಗಿಲು ಬಡಿದರೆ ಅಕ್ಕಪಕ್ಕದವರಿಗೆ ಕೇಳ್ಸುತ್ತೆ."

"ಅಮ್ಮಾ ತಿನ್ನೋಕೆ ಏನಾದ್ರೂ ಇದೆಯಾ? ಹೊಟ್ಟೆ ಹಸೀತಿದೆ. ಕಾಫೀನಾದ್ರೂ ಕೊಡು."

"ಸುಮ್ನೆ ಕಾಫಿ ಕುಡೀಬೇಡ. ಮೈ ಒಣಗಿ ಹೋಗುತ್ತೆ. ಮಯೂರ ಕ್ಲಾಸ್ನಿಂದ ಬರ್ಲಿ.... ಬ್ರೆಡ್ ಅಂಗಡಿಯಿಂದ ಏನಾದ್ರೂ ತರ್ಸಿಕೊಡ್ತೀನಿ."

"ನಾಳೆ ಸಂಗೀತದ ಟೀಚರ್ರು ಬರ್ತಾರೆ.... ಏನ್ಮಾಡ್ಲೀ...

"ನಿನ್ನ ಪಾಡಿಗೆ ನೀನು ಕೂತು ಕಲಿತ್ಕೋ.... ಇದಕ್ಕೆಲ್ಲಾ ಏನು ಮಡಿ!.... ನಾನು ರಾತ್ರಿಯ ಅಡಿಗೆ ಮಾಡ್ಬೇಕು" ರಾಧಾ ಅತ್ತ ಸರಿದ ಕೂಡಲೇ ಮಧುರ ಬಾಗಿಲನ್ನು ಭದ್ರಪಡಿಸಿಕೊಂಡಳು.

* * * *

"ಮಧು ತಗೊಳ್ಳೇ..." ಎನ್ನುತ್ತಾ ಮಯೂರ ಕಿಟಕಿಯಿಂದ ತಿಂಡಿಯ ಪೊಟ್ಟಣವನ್ನು ಮಧುರಳ ಕೈಗಿತ್ತಳು. ಕೈಬೆರಳುಗಳು ತಗುಲಿದವು. ಮಯೂರ ತಪ್ಪು ಮಾಡಿದೆನೇನೋ ಎನ್ನುವಂತೆ ಕೆಟ್ಟಮುಖ ಮಾಡಿ, ಕೈಯನ್ನು ಹಿಂದಕ್ಕೆ ಸರ್‍ರನೆ ಎಳೆದುಕೊಂಡಳು. ಮಧುರ ಒಂದು ತರಹ ಗೆಲುವಿನ ನಗೆಯನ್ನು ನಕ್ಕಳು.

"ಹೋಗಿ ಅಮ್ಮಂಗೆ ಹೇಳು.... ಅಮ್ಮ ಬಟ್ಟೆ ಬದಲಾಯಿಸು ಅಂತ ಹೇಳ್ತಾಳೆ."

"ನಂಗೆ ಇಷ್ಟು ಹೊತ್ನಲ್ಲಿ ಬಟ್ಟೆ ಬದಲಾಯಿಸುಕ್ಕೆ ಬೇಜಾರು.... ನಾನು ಹೇಳುಲ್ಲ. ಕೈ ತೊಳೆದುಕೊಂಡುಬಿಡ್ತೀನಿ."

"ಅಯ್ಯೋ ಪೆದ್ದಿ. ಕೈಯೂ ತೊಳ್ಕೋಬೇಡ. ಕಾಲೂ ತೊಳ್ಕೋಬೇಡ.... ಏನೂ ಆಗುಲ್ಲ ಹೆದರ್ಬೇಡ."

"ಅಜ್ಜಿಗೆ ಗೊತ್ತಾದ್ರೆ ಅಂತ ಭಯ."

"ಅಜ್ಜಿಗೆ ಹೇಳೋರ್ಯಾರು! ನಾನಂತೂ ಹೇಳುಲ್ಲ. ನೀನೂ ಯಾರ್ಗೂ ಹೇಳ್ಬೇಡ. ಅಪ್ಪ ಬಂದ್ರಂತೆ.... ನಮಗೆಲ್ಲಾ ಏನಾದ್ರೂ ತಂದಿದಾರಾ?" ಆಸೆಯಿಂದ ಕೇಳಿದಳು.

"ಅಪ್ಪಂಗೆ ಹುಷಾರಿರಲಿಲ್ವಂತೆ... ಏನನ್ನು ತಂದಿಲ್ಲ. ಜೊತೆಗೆ ಒಬ್ಬ ಹುಡುಗನೂ ಬಂದಿದಾನಂತೆ. ಅಮ್ಮ ಹೇಳಿದ್ಲು.... ನಾನಿನ್ನೂ ಅವನನ್ನು ನೋಡಿಲ್ಲ. ಮಹಡಿ ಮೇಲಿನ ರೂಮಿನಲ್ಲಿದಾನಂತೆ."

"ಹುಡುಗಾನಾ? ನೋಡ್ಕೊಂಡು ಬಂದು ಹೇಗಿದಾನೆ ಅಂತ ಹೇಳ್ತೀಯಾ?"

"ನೀನೇ ಹೋಗಿ ನೋಡ್ಕೊಂಡು ಬಾ. ನಂಗೆ ಬೇಜಾರು...."

"ನಾನಾ? ನಾನು ಹೋದ್ರೆ ಅಮ್ಮ ಬೈಯಬಹುದು. ನೀನಾದ್ರೆ ಫ್ರೀಯಾಗಿದೀಯ...." ಮಧುರ ಮೂತಿ ಉದ್ದ ಮಾಡಿದಳು.

"ನೋಡೋಣ ತಡಿ. ಊಟದ ಹೊತ್ಗೆ ಅವನೇ ಕೆಳಗೆ ಬರಬಹುದು."

"ನಾನು ಊಟಕ್ಕೆ ಹೊರಕ್ಕೆ ಬರುಲ್ಲಪ್ಪ. ಇಲ್ಲೇ ಕಿಟಕಿಯಿಂದ ಇಸ್ಕೊಂಡು ತಿಂತೀನಿ. ಹಾಗಂತ ಅಮ್ಮಂಗೆ ಹೇಳಿಬಿಡು." ಮಯೂರ ಕಿಟಕಿಯಿಂದ ಮರೆಯಾದಳು. ಮಧುರ ಕಿಟಕಿಯ ಬಾಗಿಲನ್ನು ಹಾಕಿಕೊಂಡು, ಕುರುಕಲು ತಿಂಡಿಯನ್ನು ತಿನ್ನತೊಡಗಿದಳು. ಬೆಳಗ್ಗೆ ಸ್ಕೂಲ್ನಿಂದ ಬಂದಾರಭ್ಯ ರೂಮಿನ ಒಳಗೇ ಕೂತಿದೀನಿ. ಮಲಗಿದ್ದಾಯ್ತು. ತಿಂಡಿ ತಿಂದಾಯ್ತು... ಓದಿದ್ದಾಯ್ತು... ಇದೆಂಥಾ ಗ್ರಹಚಾರ! ಸ್ವತಂತ್ರವಾಗಿ ನನ್ನ ಪಾಡಿಗೆ ನಾನು ಓಡಾಡಿಕೊಂಡಿರುವಂತಿಲ್ಲ. ತುಥ್ ಬೇಜಾರು.... ಅಜ್ಜಿಯ ಮಡಿ ಒಂದಿಲ್ಲದಿದ್ರೆ ನನ್ನ ಪಾಡಿಗೆ ನಾನು ತಿರುಗಾಡಿಕೊಂಡಿರಬಹುದಾಗಿತ್ತು. ಅಪ್ಪ ಊರಿಗೆ ಬಂದಿಲ್ಲದೇ ಇದ್ದಿದ್ರೆ ಅಲ್ಲೇ ಎಲ್ಲರ ಜೊತೆ ಕೂತು ಮಾತನ್ನಾಡಬಹುದಾಗಿತ್ತು. ಅವರ ಜೊತೆ ಒಬ್ಬ ಹುಡುಗ ಬೇರೆ ಬಂದಿದಾನಂತೆ. ಎಷ್ಟೇ ವಯಸ್ಸಿನವನೋ.... ಹೇಗಿದಾನೋ.... ನಮ್ಮ ಮನೇಲಿ ಎಷ್ಟು ದಿನ ಇರ್ತಾನೋ.... ಈ ಬಂಧನದೊಳಗೆ ಕೂತಿರುವುದು ಸಾಕು ಅಂತ ಅನ್ನಿಸ್ತಿದೆ.... ರೂಮಿನಿಂದ ಹೊರಗೆ ಏನು ನಡೀತಿದೆ ಅಂತ ತಿಳ್ಕೋಬೇಕು ಅಂತ ಆಸೆ ಆಗ್ತಿದೆ.... ತಿಂಡಿ ಮುಗಿದಿತ್ತು. ನೀರನ್ನು ಕುಡಿಯಲೆಂದು ಚೊಂಬು ಎತ್ತಿದಳು. ಖಾಲಿಯಾಗಿತ್ತು. ಮಯೂರನ್ನೋ ಮಂದಾರನ್ನೋ ಕರೆದು ನೀರನ್ನು ಕೇಳ್ತೀನಿ ಎಂದುಕೊಂಡು ರೂಮಿನ ಬಾಗಿಲನ್ನು ಸದ್ದಾಗದಂತೆ ತೆಗೆದಳು. ಸ್ವಲ್ಪವೇ ಸರಿಸಿ ಹೊರಕ್ಕೆ ಕತ್ತು ಚಾಚಿ ನೋಡಿದಳು. ಯಾರೂ ಕಾಣಲಿಲ್ಲ. ಬಾಗಿಲನ್ನು ಇನ್ನೂ ಸ್ವಲ್ಪ ತೆರೆದು ಹೊರಕ್ಕೆ ಬಂದಳು. ಎದುರಿನ ಕಿಟಕಿಯಿಂದ ಬೀಸುತ್ತಿದ್ದ ಗಾಳಿ ಹಿತವೆನಿಸಿತ್ತು. ಮೇಲಕ್ಕೆ ಕೈ ಎತ್ತಿ ಮೈಮುರಿದಳು. ಕೈಬೆರಳುಗಳ ನೆಟ್ಟಿಗೆ ತೆಗೆದಳು. ನಾಲ್ಕು ಹೆಜ್ಜೆ ಮುಂದೆ ಬಂದು, ಹಾಲಿನ ಬಾಗಿಲಲ್ಲಿ ನಿಂತಳು. ಸುತ್ತಲೂ ಕಣ್ಣು ಹಾಯಿಸಿದಳು. ಚಾಪೆಯ ಮೇಲೆ ಪುಸ್ತಕಗಳನ್ನು ಹರಡಿಕೊಂಡು, ಮಂದಾರ ಹೋಂ ವರ್ಕ್ ಮಾಡುತ್ತಿದ್ದಳು. ಕುರ್ಚಿಯ ಮೇಲೆ ಕುಳಿತ ಅಪ್ಪ ಮುಖಕ್ಕೆ ಪೇಪರನ್ನು ಅಡ್ಡ ಹಿಡಿದಿದ್ದರು. ಸಮೀಪದ ಸೋಫಾದ ಮೇಲೆ ಶಾಲು ಹೊದೆದು ಕುಳಿತ ಅಜ್ಜಿ ತೂಕಡಿಸುತ್ತಿದ್ದರು. ಇನ್ನು ಸ್ವಲ್ಪ ಬಾಗಿ ನೋಡಿದಳು. ಮತ್ತೆ ಯಾರೂ ಕಾಣಲಿಲ್ಲ. ಆ ಹುಡುಗನೂ ಕಾಣಲಿಲ್ಲ. ಅವನ ಬಗ್ಗೆ ಹೇಳಿದ ಮಯೂರಳೂ

ಕಾಣಲಿಲ್ಲ. ಅವನನ್ನು ನೋಡಿ ಮಾತನಾಡಿಸಲು ಮಯೂರ ಮಹಡಿ ಹತ್ತಿ ಹೋಗಿರಬಹುದೇ ಅಂತಂದುಕೊಂಡಾಗ, ಆ ಅನಿಸಿಕೆ ಹಿತವೆನಿಸಲಿಲ್ಲ. ನಾನು ದೊಡ್ಡವಳು. ನನಗಿಂತ ಮುಂಚೆ ಮಯೂರ ಅವನೊಡನೆ ಸ್ನೇಹ ಬೆಳೆಸುವುದೆಂದರೇ ಅಸೂಯೆಯ ಮುಳ್ಳು ಚುಚ್ಚಿದಂತಾಯಿತು.

ಒಳಗೆ ಅಡಿಗೆ ಮನೆಯಲ್ಲಿ ಅಮ್ಮ ಯಾರೊಡನೆಯೋ ಮಾತಾಡುತ್ತಿದಾಳೆ. ಯಾರಿರಬಹುದು! ನಂದಿನಿ ಆಂಟಿ ಬಂದಿರಬಹುದೇ.... ತಾನು ಈ ಹಾಲನ್ನು ದಾಟಿಕೊಂಡು ಊಟದ ಮನೆಗೆ ಹೋಗಿಬಿಟ್ಟರೇ...? ಮತ್ತೊಮ್ಮೆ ಅಜ್ಜಿಯ ಕಡೆ ನೋಡಿದಳು. ಅಜ್ಜಿ ತೂಕಡಿಸುತ್ತಿದ್ದಳು. ಎರಡು ಹೆಜ್ಜೆ ದಾಟುವಷ್ಟರಲ್ಲಿ ಊಟದ ಮನೆಯಲ್ಲಿ ಮಯೂರ ಕಂಡುಬಂದಳು. ಅರೇ.... ಮಯೂರ ಇಲ್ಲೇ ಇದಾಳೆ. ಮಹಡಿಗೆ ಹೋಗಿಲ್ಲ. ಹಾಗಾದ್ರೆ ಅಲ್ಲಿ ಅವನೊಬ್ಬನೇ ಇರಬಹುದೇ... ಯಾರಿಗೂ ತಿಳಿಯದಂತೆ, ತಾನು ಮುಂಬಾಗಿಲನ್ನು ತೆಗೆದು, ಮಹಡಿ ಹತ್ತಿಹೋದರೇ.... ಮಹಡಿಗೆ ಹೋಗಲು ಏನಡ್ಡಿ.... ಮತ್ತೆ ಎರಡು ಹೆಜ್ಜೆ ಹಿಂದೆ ಬಂದಳು..... ಮುಂಬಾಗಿಲು ತೆರೆದ ಸದ್ದಾಯಿತು. ಹಾಗೇ ನಿಂತು ಹಿಂತಿರುಗಿ ನೋಡಿದಳು. ಬಾಗಿಲನ್ನು ತಳ್ಳಿಕೊಂಡು ಒಳಕ್ಕೆ ಬರುತ್ತಿದ್ದ ಯುವಕನನ್ನು ಕಂಡಳು. ಅವಳನ್ನು ಕಂಡು ಅವನೂ ಹಾಗೇ ನಿಂತ.... ಒಂದು ಗಳಿಗೆ ಅವನನ್ನೇ ದಿಟ್ಟಿಸಿ ನೋಡಿದ ಮಧುರ. ಅವನಿಗೆ ದಾರಿ ಬಿಡುವವಳಂತೆ, ಸರ್ರನೆ ರೂಮಿಗೆ ಹೋಗಿಬಿಟ್ಟಳು. ಬಾಗಿಲು ಸಂಧಿಯಿಂದ ಅವನು ವರಾಂಡದಿಂದ ಹಾಲಿಗೆ ಹೋದುದನ್ನು ಗಮನಿಸಿದಳು. ಇವನೇ ಆ ಯುವಕ...! ಅವನ ಬಗ್ಗೆ ಕುತೂಹಲ ಮೂಡಿತು. ಒಂದು ಗಳಿಗೆ ನೋಡಿದ್ದು ಅಷ್ಟೇ. ಸರಿಯಾಗಿ ನೋಡಲೇ ಇಲ್ಲ.... ಮತ್ತೊಮ್ಮೆ ನೋಡಬೇಕು.... ಮಾತನಾಡಿಸಬೇಕು ಎಂಬ ಹಂಬಲ ಇಣುಕಿತು. ಆದರೆ ಹೊರಗೆ ಹೋಗುವುದು ಹೇಗೆ! ಕಾರಣ ಏನಾದರೂ ಬೇಕಲ್ಲ. ಅಮ್ಮ ಊಟಕ್ಕೆ ಕರೆಯಬಾರದೇ....

ಬಾಗಿಲನ್ನು ತಳ್ಳಿಕೊಂಡು ಒಳಬಂದವಳು ಮಯೂರ... ಕೈಯಲ್ಲಿ ಊಟದ ತಟ್ಟೆಯನ್ನು ಹಿಡಿದಿದ್ದಳು.... ನೀರಿನ ಲೋಟವನ್ನೂ ಇಟ್ಟಳು.... ತಟ್ಟೆಯನ್ನು ಕೆಳಗೆ ಇಟ್ಟಳು. ಕಲೆಸಿದ ಸಾರನ್ನ, ಪಲ್ಯ ಇತ್ತು.

"ಕೂತ್ಕೊಂಡು ಮಹಾರಾಣಿ ಥರ ಸೇವೆ ಮಾಡಿಸ್ಕೋತಾ ಇದೀಯಲ್ಲ. ಪರವಾಗಿಲ್ಲ ಕಣೇ ಈ ರಜದಲ್ಲೂ ಮಜ ಇದೆ."

"ಏನು ಮಜ? ಸಜಾ.... ಒಳಗೇ ಕೂತು ಬೇಜಾರಾಗ್ತಿದೆ. ಈ ಕಾಟ ಇಲ್ದಿದ್ರೆ ಎಷ್ಟೇ ಚೆನ್ನಾಗಿರ್ತಿತ್ತು ಅಲ್ವಾ?"

"ನಂಗೊತ್ತಿಲ್ಲಮ್ಮ.... ಸದ್ಯಕ್ಕೆ ನಾನು ಹಾಯಾಗಿದೀನಿ..." ಮಯೂರ ತನ್ನ ಎದುರಿಗೆ ಗೋಡೆಯ ಮೇಲಿದ್ದ ಕನ್ನಡಿಯಲ್ಲಿ ಮುಖ ನೋಡಿಕೊಂಡು ನಸುನಗೆ ಸೂಸುತ್ತಾ ಮುಂಗುರುಳು ಸರಿ ಮಾಡಿಕೊಂಡಳು.

"ಎಷ್ಟು ದಿನ ಹಾಯಾಗಿರ್ತೀಯಾ! ನನಗಿಂತ ಒಂದೂ ಕಾಲು ವರ್ಷಕ್ಕೆ ಚಿಕ್ಕವಳು ಅಷ್ಟೇ.... ನೀನೂ ಕೂತ್ಕೊಂಡು ಸೇವೆ ಮಾಡಿಸ್ಕೊಳ್ಳೂವಂತೆ... ಮಜವೋ ಸಜವೋ ಅಂತ ಗೊತ್ತಾಗುತ್ತೆ...."

"ನಾನು ರಜಾ ಅಂತ ಕೂತ್ಕೊಳ್ಳೋದೇ ಇಲ್ಲ. ನನ್ನ ಪಾಡಿಗೆ ನೀನು ಓಡಾಡಿಕೊಂಡಿರ್ತೀವಿ. ಯಾರಿಗೂ ಹೇಳೋದೇ ಇಲ್ಲ." ಮತ್ತೊಮ್ಮೆ ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡು ಹಲ್ಲು ಕಿರಿದಳು.

"ನೀನೇ ಸುಂದರಿ ಅಂತ ಜಂಭ.... ನಿಂಗೆ.... ನಿನ್ನನ್ನ ಹಾಯಾಗಿರುಕ್ಕೆ ನಾನು ಬಿಡ್ತೀನಾ? ಅಜ್ಜಿಗೆ ಹೇಳಿ ರಂಪ ಮಾಡಿಸಿಬಿಡ್ತೀನಿ."

"ನಿಂಗೆ ಗೊತ್ತಾದ್ರೆ ತಾನೇ ನೀನು ಅಜ್ಜಿಗೆ ಹೇಳೋದು... ಬೇಗ ಊಟ ಮಾಡು. ಮೊಸರನ್ನ ತಂದು ಹಾಕ್ತೀನಿ. ಅಮ್ಮ ಎಲ್ರಿಗೂ ಬಡಿಸ್ತಿದಾಳೆ. ನಾನೂ ಹೋಗಿಬಡಿಸ್ಬೇಕು." ಬಾಗಿಲ ಕಡೆಗೆ ತಿರುಗಿದಳು.

"ಆ ಹುಡುಗಾನೂ ಊಟಕ್ಕೆ ಕೂತಿದಾನಾ.?"

"ನೋಡ್ಕೊಂಡು ಬಂದುಹೇಳ್ತೀನಿ. ಈಗ ಹೋಗ್ಲಾ?"

"ನೀನು ಈವರೆಗೂ ಅವನನ್ನು ನೋಡಿಲ್ವಾ?. ನಾನು ಅವನನ್ನು ನೋಡ್ದೆ."

"ಹೌದಾ! ನೀನು ನೋಡಿದ್ಯಾ? ಚಿಕ್ಕೋನೋ ದೊಡ್ಡೋನೋ..."

"ಸರಿಯಾಗಿ ಗೊತ್ತಾಗ್ಲಿಲ್ಲ. ಕತ್ತಲೆಯಲ್ಲಿ ನಿಂತಿದ್ದ ನೀನು ಸರಿಯಾಗಿ ನೋಡ್ಕೊಂಡು ಬಂದು ಹೇಳ್ತೀಯಾ?"

"ನಿನಗೇನು ಅಷ್ಟು ಆಸಕ್ತಿ! ನೀನೇನು ಅವನನ್ನು ಮದುವೆ ಆಗ್ತೀಯಾ?"

"ಹಾಕ್ತೀನಿ ನೋಡು.... ಇದುವರೆಗೂ ಅಪ್ಪ ಅಂಥ ಹುಡುಗರನ್ನ ಎಂದೂ ಕರ್ಕೊಂಡು ಬಂದಿರ್ಲಿಲ್ಲ. ಯಾರವನು? ಯಾಕೆ ಬಂದಿದಾನೆ!

ಎಷ್ಟು ದಿನ ಇಲ್ಲಿರ್ತಾನೆ ಅಂತ ತಿಳ್ಕೊಳ್ಳೋದು ನನ್ನ ಕರ್ತವ್ಯ. ಎಷ್ಟಾಗಲೀ ನಾನು ಈ ಮನೆಗೆ ಹಿರೀಮಗಳು.... ನನಗೆ ಮನೆಯ ವಿಷಯಗಳು ತಿಳಿಯಲೇಬೇಕು.

"ನೀನೇ ತಿಳ್ಕೊ.... ನಾನೇನು ನಿನ್ನ ಮನೆ ಆಳಲ್ಲ. ಅಮ್ಮ ಒಬ್ಬಳೇ ಕಷ್ಟ ಪಡ್ತಾಳಲ್ಲ ಅಂತ ನಾನು ಸಹಾಯ ಮಾಡ್ತಿದೀನಿ. ನಂಗೂ ಓದೋದು ಬೇಕಾದಷ್ಟು ಇದೆ. ನಿನ್ನ ಸೇವೇನೇ ಮಾಡ್ತಿದ್ರೆ ನಾನು ಫೇಲಾಗಿ ಹೋಗ್ತೀನಿ ಅಷ್ಟೇ."

"ಸರಿ ತೊಲಗು.... ನಂಗೆ ಮೊಸರನ್ನ ಬೇಡ. ಬರೀ ಸಾರನ್ನ ಸಾಕು... ಹಾಗೇ ಹಾಸ್ಕೊಳ್ಳೋಕೆ, ಹೊದ್ದುಕೊಳ್ಳೋಕೆ ಒಂದಿಷ್ಟು ಬಟ್ಟೆಗಳನ್ನು ಬಿಸ್ಹಾಕಿ ಹೋಗು ಬಿದ್ಕೋತೀನಿ."

"ಸರಿ. ಅಮ್ಮಂಗೆ ಹಾಗೇ ಹೇಳ್ತೀನಿ." ಮಯೂರ ಹೊರಟುಹೋಗಿದ್ದಳು. ಕೆಲವೇ ನಿಮಿಷಗಳಲ್ಲಿ ತಾಯಿ ಒಳಕ್ಕೆ ಬಂದಿದ್ದಳು.

"ಯಾಕೇ ಮಧು ಕೋಪಿಸ್ಕೋತೀಯಾ?.... ಪಾಪ ಅವಳು [illegible]ವೆಷ್ಟು ಓಡಾಡ್ತಾಳೆ. ಹಿಡೀ ತಟ್ಟೇನ, ಮೊಸರನ್ನಾನ ತಂದಿದೀನಿ."

"ನಂಗೆ ಬೇಡ... ಸೇರುವ ಹಾಗಿಲ್ಲ.

"ಮೊಸರನ್ನಾನ ಬೇಡ ಅನ್ನಬಾರ್ದು. ಬರೀ ಖಾರ ತಿಂದು ಮಲಗಿದರೆ ಬಾಯಾರಿಕೆ ಆಗುತ್ತೆ. ಸುಮ್ನೆ ಹಾಕಿಸ್ಕೋ..." ರಾಧಾ ಎರಡು ಸೌಟು ಮೊಸರನ್ನ ಬಡಿಸಿದಳು.

"ಅಮ್ಮಾ ಮಯೂರನ್ನ ಇಲ್ಲೇ ನನ್ನ ಜೊತೆ ಮಲಕ್ಕೋ ಅಂತ ಹೇಳಮ್ಮಾ... ನಂಗೆ ಒಬ್ಬಳಿಗೇ ಬೇಜಾರಾಗುತ್ತೆ..."

"ನಾನೇ ಮಲಕೊಳ್ತೀನಿ.... ಅವಳ್ಯಾಕೆ?.... ಅವಳು ವಿಪರೀತ ಹೊರಳ್ತಾಳೆ. ಇಲ್ಲಿ ಅಷ್ಟು ಜಾಗ ಎಲ್ಲಿದೆ?" ಮಧುರ ಮಾತಾಡಲಿಲ್ಲ. ರಾಧಾ ಹೊರಟುಹೋದಳು. ಮಧುರ ಊಟವನ್ನು ಮುಗಿಸಿ ತಟ್ಟೆಯಲ್ಲೇ ಕೈ ತೊಳೆದು, ತಟ್ಟೆಬಟ್ಟಲನ್ನು ಮಂಚದ ಕೆಳಕ್ಕೆ ತಳ್ಳಿದಳು. ಕೈ ಒರೆಸಿಕೊಂಡು, ಹಾಲಿನ ಬಾಗಿಲು ಬಳಿ ನಿಂತು ಊಟದ ಮನೆಯ ಕಡೆಗೆ ನೋಡಿದಳು. ಊಟಕ್ಕೆ ಕುಳಿತಿದ್ದ ಆ ಯುವಕನ ಬೆನ್ನು ಮಾತ್ರ ಕಾಣುತ್ತಿತ್ತು. ತಲೆ ತಗ್ಗಿಸಿ ಊಟ ಮಾಡುತ್ತಿದ್ದ. ತಾಯಿಯೊಡನೆ ಮಯೂರಳೂ ಬಡಿಸುವುದರಲ್ಲಿ ನಿರತಳಾಗಿದ್ದಳು. ಕಾಲುಗಳು ನೋಯುತ್ತಿವೆ. ಅಂತೆನ್ನಿಸಿತು. ಮತ್ತೆ ರೂಮಿಗೆ ಬಂದು ಚಾಪೆಯ ಮೇಲೆ ಉರುಳಿಕೊಂಡಳು. ಎಷ್ಟೋ ಹೊತ್ತಿನ ಮೇಲೆ

ಮಯೂರ ಬಂದಳು. ಬೆಡ್ ಷೀಟ್‌ಗಳನ್ನು ರಗ್ಗನ್ನು ತೆಗೆದುಕೊಂಡು, ತಾನು ಅಲ್ಲಿದ್ದ ಮಂಚದ ಮೇಲಿನ ಹಾಸಿಗೆಯ ಮೇಲೆ ಮಲಗಿದಳು.

"ಅಮ್ಮಾ ಬರ್ತೀನಿ. ಅಂತ ಅಂದಿದ್ಲು.... ಅವಳು ಬರುಲ್ವಾ?..."

"ಅಪ್ಪನ ಮಂಚದ ಮೇಲೆ ಮಲಕ್ಕೋ ಅಂತ ಅವಳೇ ಕಳಿಸಿದ್ದು...."

"ಮತ್ತೆ ಮಂದಾರ ಒಬ್ಳೇ ಮಲಗ್ತಾಳಾ ಹಾಲ್ನಲ್ಲಿ....

"ಅವಳ ಜೊತೆ ಅಜ್ಜಿ ಮಲಗ್ತಾರೆ. ನಿಂಗ್ಯಾಕೆ ಅವಳ ಚಿಂತೆ?...." ಮಧುರ ಕಿಸಕ್ಕನೆ ನಕ್ಕಳು.

"ಅಜ್ಜಿ ಜೊತೆ ನಾವ್ಯಾರೂ ಒಂದು ದಿನವೂ ಮಲಗ್ಲಿಲ್ಲ. ಮಂದಾರನ್ನ ನಿದ್ದೆ ಮಾಡೋಕೇ ಬಿಡುಲ್ಲ ಅಜ್ಜಿ ನೋಡ್ತಿರು...."

"ಅದಿರಲಿ. ಈಗ ನೀನು ನನ್ನನ್ನ ನಿದ್ದೆ ಮಾಡೋಕೆ ಬಿಡ್ತೀಯಾ? ನನಗಂತೂ ತುಂಬಾ ಸುಸ್ತಾಗಿದೆ. ಕಾಲಂತೂ ಸಿಕ್ಕಾಪಟ್ಟೆ ನೋಯ್ತಿದೆ."

"ಕಾಲನ್ನು ಒತ್ಲೇನೇ.... ಪಾಪ ಡ್ಯಾನ್ಸ್ ಕ್ಲಾಸ್‌ಗೆ ಬೇರೆ ಹೋಗಿದ್ದೆಯಲ್ಲಾ.... ಅಮ್ಮಂಗೆ ಹೆಲ್ಪ್ ಬೇರೆ ಮಾಡಿದೀಯ.... ಮಹಡೀನ ಎಷ್ಟು ಸಾರಿ ಹತ್ತಿ ಇಳಿದು ಮಾಡಿದೀಯಾ?...." ಮಯೂರ ಉತ್ತರಿಸಲಿಲ್ಲ. ಅವಳಾಗಲೇ ನಿದ್ದೆಯ ಆಳಕ್ಕೆ ಇಳಿದುಹೋಗಿದ್ದಳು. ಗೊರಕೆಯ ಹಗುರವಾದ ಧ್ವನಿ ಕೇಳಿಸುತ್ತಿತ್ತು.

"ನೀನು ಹೀಗೆ ಗೊರಕೆ ಹೊಡೀತಿದ್ರೆ ನಂಗಂತೂ ನಿದ್ದೆ ಇಲ್ಲ.... ಎಂದು ತಂಗಿಯನ್ನು ಜೋರಾಗಿಯೇ ಬೈದು, ತಾನು ಮಲಗುವ ಸಿದ್ಧತೆ ಮಾಡಿಕೊಂಡಳು.

* * * *

"ಏ ಪುಟ್ಟೀ ಬದಿಗ್ಬಾರೇ... ದೂರ ಯಾಕೆ ಮಲ್ಗಿದೀಯಾ?" ಗೌರಮ್ಮ ಮಂದಾರನ್ನ ಮಗ್ಗುಲಿಗೆ ಎಳೆದಳು..."

"ಬಿಡಿ ಅಜ್ಜೀ..... ನನ್ನ ಹಾಸ್ಗೇಲೇ ನಾನು ಮಲಗ್ತೀನಿ" ಮಂದಾರ ಕೊಸರಾಡಿದಳು.

"ನೀವೆಲ್ಲಾ ಒಂದೇ ಜಾತಿಯೋವು.... ಅಜ್ಜಿ ಮೇಲೆ ಪ್ರೀತಿ ಇಲ್ಲ ಗೌರವ ಇಲ್ಲ."

"ನಿಮಗೂ ಅಷ್ಟೇ. ನಮ್ಮೇಲೆ ಎಲ್ಲಿದೆ ಪ್ರೀತಿ? ಸದಾ ಮಡಿ ಮಡಿ ಅಜ್ಜೀ ಅಂತ ತಬ್ಕೊಂಡ್ರೆ ದೂರ ದೂರ ಅಂತ ಅಟ್ತಿದ್ರಿ.... ಸುಮ್ನೆ ಮಲಕ್ಕೊಳ್ಳಿ ನೀವೂ ನಿದ್ದೆ ಮಾಡಿ. ನಂಗೂ ಮಾಡೋಕೆ ಬಿಡಿ..."

"ಅಲಲೇ.... ಅದೇನು ಪಟಪಟ ಅಂತ ಮಾತಾಡ್ತೀಯೇ... ಕಿರಿಯೋಳು ಅಂತ ನಿಮ್ಮಪ್ಪ ನಿಮ್ಮಮ್ಮ ತುಂಬಾ ಮುದ್ದು ಮಾಡಿ ಕೆಡ್ಸಿದಾರೆ. ನಿಂಗೊಬ್ಬ ತಮ್ಮನೋ ತಂಗಿಯೋ ಇರ್ಬೇಕಾಗಿತ್ತು. ಕಿವಿ ಹಿಂಡಿ ದಾರಿಗೆ ತಂದಿರೋನು...."

"ಈಗ ಇಲ್ವಲ್ಲಾ.... ಇದ್ದಿದ್ರೆ, ನಾನೇ ಕಿವಿಹಿಂಡಿ ಬುದ್ಧಿ ಕಲಿಸ್ತಿದ್ದೆ. ನೀವು ಒಬ್ರೇ ಮಲಕ್ಕಳಿ ನಿಮ್ಗೆ ಅದೇ ಸರಿ.... ನಾನು ಅಮ್ಮನ ರೂಂನಲ್ಲಿ ಮಲಕ್ಕೋತೀನಿ." ಮಂದಾರ ಎದ್ದು ಒಳಗಿನ ರೂಮಿನ ಬಳಿಗೆ ಬಂದಳು. ಬಾಗಿಲು ಒಳಗಿನಿಂದ ಹಾಕ್ಕೊಂಡಿತ್ತು. ಬಾಗಿಲನ್ನು ಬಡಿದು, ಅಮ್ಮಾ ಅಮ್ಮಾ... ಎಂದು ಕರೆದಳು. ಒಳಗಿನಿಂದ ಉತ್ತರ ಬರಲಿಲ್ಲ. ಅಮ್ಮಾಅಮ್ಮಾ ಎಂದು ಮತ್ತೂ ಕರೆದಳು. ಬಾಗಿಲು ತೆಗೆಯದಿದ್ದಾಗ, ಮತ್ತೆ ಬಂದು ತನ್ನ ಹಾಸಿಗೆಯ ಮೇಲೆ ಮಲಗಿದಳು.

"ಯಾಕೇ.... ಅಮ್ಮ ಮಲಗಿಬಿಟ್ಟಿದಾಳೇನೇ?... ಸುಮ್ನೆ [illegible]ಕ್ಕೋ ನಿದ್ದೆ ಬಂದೋರನ್ನ ಎಬ್ಬಿಸ್ಬಾರ್ದು..." [illegible]ರಂಗೆ ಅವಮಾನವಾದಂತಾಗಿತ್ತು. ಉತ್ತರಿಸದೇ ಮಗ್ಗುಲು ತಿರುಗಿ ಮಲಗಿದಳು. ಕೆಲವೇ ಕ್ಷಣಗಳಲ್ಲಿ ನಿದ್ದೆ ಹತ್ತಿತ್ತು. ಗೌರಮ್ಮ ನಿದ್ದೆ ಬಾರದೇ ಹೊರಳಾಡಿದಳು.

"ಮಂದಾರಂಗೆ ಒಬ್ಳೇ ಮಲ್ಗಿ ರೂಢಿ ಇಲ್ಲ... ಬಂದು ಕರೆದ್ಲು.... ನಿಮ್ಗೆ ಕೇಳಿಸ್ಲಿಲ್ವಾ?" ರಾಧಾ ಗಂಡನನ್ನು ಕೇಳಿದಳು.

"ಕೇಳಿಸ್ತು... ಬಾಗಿಲನ್ನ ಹಾಕ್ದೇ ಇದ್ದಿದ್ರೆ ಒಳಕ್ಕೆ ನುಗ್ಗಿರೋಳು... ಅಜ್ಜಿ ಜೊತೆ ಮಲಗ್ತಾಳೆ ಅಂತ ನೀನೇ ಹೇಳ್ದೆ..." ಕೇಶವ ಚುಡಾಯಿಸಿದ.

"ನೀವು ಇಲ್ಲಿ ಬಂದು ಮಲಕ್ಕೊಳಿ ಅಂತ ನಾನೇನೂ ಹೇಳ್ಲಿಲ್ಲ.... ನಿಮ್ಗೂ ಅಷ್ಟೇ.... ಮಕ್ಕಳಿಗೆ, ನಿಮ್ಮಮ್ಮಂಗೆ ನಿದ್ದೆ ಬರೋವರ್ಗೂ ತಡೆಯೋಕೆ ಆಗುಲ್ವಾ!.

"ಅಷ್ಟು ಹೊತ್ಗೆ ನೀನೂ ನಿದ್ದೆ ಮಾಡಿಬಿಟ್ಟಿರ್ತೀಯಾ..." ಜಾಣನಂತೆ ಮಾತನಾಡಿದ.

"ಪ್ರಯಾಣ ಮಾಡ್ಕೊಂಡು ಬಂದಿದೀರ.... ಸುಸ್ತಾಗಿದೆ ಅಂತೀರ.... ಮಲಗ್ಬಾರ್ದಾ. ಇಷ್ಟು ವರ್ಷ ಆದ್ರೂ ನಿಮ್ಮ ಈ ಆಸೆ ಮಾತ್ರ ಕಡಿಮೆ ಆಗ್ಲಿಲ್ಲವಲ್ಲ..."

"ಇದು ಬರೀ ಆಸೆ ಅಲ್ಲ; ಅಗತ್ಯ ಕೂಡಾ.... ನಾನು ಊರ್ನಲ್ಲಿಲ್ಲದಾಗ, ನೀನು ಹಾಯಾಗಿ ನನ್ನ ಕಾಟವಿಲ್ಲದೇ ಮಲಗಿರುಲ್ವಾ?...."

"ಈ ಆಸೆ ಇರೋರು, ಅಗತ್ಯ ಅಂತ, ಯಾರ್‍ಯಾರ ಸಂಗ ಮಾಡ್ತೀರೋ ನಂಗೇನ್ಗೊತ್ತು?"

"ಹಾಕ್ತೀನಿ ನೋಡು. ನಾನು ಅಂಥಾ ಕೊಳಕು ಮನುಷ್ಯನಲ್ಲ. ನೀನು ಹೀಗೆಲ್ಲಾ ಮಾತಾಡಿದ್ರೆ ಸನ್ಯಾಸಿಯಾಗಿ ಹೊರ್‍ಟುಹೋಗ್ತೀನಿ ಅಷ್ಟೇ."

"ಹುಂ. ಹೋಗಿ.... ನಂಗೆ ಇದೆಯಲ್ಲ ಈ ಸಂಸಾರ ತಾಪತ್ರಯ. ನಿಮ್ಮ ತಾಯಿ, ನನ್ನತ್ತೆ, ನಿಮ್ಮ ಮಕ್ಕಳು ನನ್ನ ಮಕ್ಕಳು.... ಎಲ್ಲಾ ಜವಾಬ್ದಾರಿ ನನ್ನ ತಲೆ ಮೇಲೆ... ಸಾಕಾಗಿ ಹೋಗಿದೆ."

"ಆ ಮಾತೆಲ್ಲಾ ಈಗ್ಯಾಕೆ ರಾಧಾ.... ಮಕ್ಕಳು ಮಲಗಿವೆ. ಅಮ್ಮ ಮಲಗಿದಾಳೆ.... ಮಾತಾಡ್ತಾನೇ ಇದ್ರೆ ಎಲ್ರಿಗೂ ಎಚ್ಚರವಾಗುತ್ತೆ."

"ನಾನು ಮಾತಾಡ್ಕೂಡ್ದು. ನೀವು ಹೇಳಿದ್ದಾಗೆ ಕೇಳ್ಬೇಕು. ಎರಡ್ದಿನದಿಂದ ನನ್ನ ಎದೆ ತವಕದಿಂದ ಹೊಡೆದುಕೊಳ್ತಿತ್ತು. ಯಾಕೆ ಅಂತ ಈಗ ಗೊತ್ತಾಯ್ತು. ನಂಗೆ ಮಧುರಂದೇ ಆತಂಕವಾಗಿತ್ತು. ಅವಳು ಹೇಗೆ ಬೆಳೆದುಬಿಟ್ಟಿದಾಳೆ. ಗಮನಿಸಿದೀರ?...

"ಇರಬಹುದು. ತಾಯಿ ಮಕ್ಕಳನ್ನು ಗಮನಿಸುವ ಹಾಗೆ, ತಂದೆಗೆ ಎಲ್ಲಿ ಪುರಸೊತ್ತು ಇರುತ್ತೆ." ನೀನು ಹೇಳಿದ್ಮೇಲೆ ಆಯ್ತು."

"ಇದಕ್ಕೆ ಪುರಸೊತ್ತು ಇರುತ್ತೆ ಅಲ್ವಾ... ಮಧುರನ್ನ ಮಾತಾಡ್ಸಿದ್ರಾ?"

"ಅವಳು ರೂಮ್ನಿಂದ ಆಚೇನೇ ಬಂದಿಲ್ಲ ಅಂತ ನೀನೇ ಹೇಳ್ದೆ. ನಾನೇ ಹೋಗಿ ಮಾತಾಡ್ದಿದ್ರೆ, ಅದಕ್ಕೆ ಸಂಕೋಚ ಆಗುತ್ತೆ. ನಾಳೆ ಮಾತಾಡಿಸ್ತೀನಿ."

"ಇದೇ ನೆವ ಮಾಡ್ಕೊಂಡು ನಿಮ್ಮಮ್ಮ ನನ್ನನ್ನ, ನಮ್ಮಪ್ಪನ ಮನೆಯವರನ್ನ ಹಂಗಿಸಿ ಮಾತಾಡಿದ್ರು. ಒಂದು ಒಳ್ಳೆ ಮಾತು ಬೇಡ್ವಾ? ಎಂಥಾ ಹೆಂಗ್ಸೋ."

"ರಾಧಾ, ಅಮ್ಮನ ಮೇಲೆ ಚಾಡಿ ಹೇಳ್ಬೇಡ. ಅವಳು ನಮ್ಮಮ್ಮ."

"ನಂಗೂ ಗೊತ್ರೀ... ಮದುವೆಯಾಗಿ ಬಂದ್ಮೇಲೆ, ನಿಮ್ಮಮ್ಮನ ಜೊತೆ ಹೆಚ್ಚು ಕಾಲ ಇರೋಳು ನಾನು.... ನಂಗೆ ನಿದ್ದೆ ಬರ್‍ತಿದೆ. ನನ್ನನ್ನ ಬಿಡಿ."

"ಇದ್ಯಾಕೆ ಹೀಗಾಡ್ತೀಯ. ಈ ಹೊತ್ನಲ್ಲಿ ಸಂಸಾರ ತಾಪತ್ರಯಗಳನ್ನೂ ಮರೆತು, ಗಂಡನೊಡನೆ ಖುಷಿಯಾಗಿ ಕಾಲ ಕಳೀಬೇಕು." ಎನ್ನುತ್ತಾ ತನ್ನ ಅಪ್ಪುಗೆಯನ್ನು ಬಿಗಿಗೊಳಿಸಿದ. ಅವಳು ಕೊಸರಾಡಿದರೂ ಅವನು ಬಿಡಲಿಲ್ಲ.

*　*　*　*

ಒಳಗಿನ ರೂಮಿನ ಬಾಗಿಲಿನ ಎದುರಿಗೇ ಕುಳಿತಿದ್ದ ಗೌರಮ್ಮ ಬಾಗಿಲು ತೆರೆದು ಹೊರಬಂದ ಸೊಸೆಯನ್ನೇ ಹೊಸಬಳಂತೆ ನೋಡಿದಳು. ರಾಧಾಳಿಗೆ ಮುಜುಗರ, ಸಂಕೋಚ, ರೂಮಿನ ಬಾಗಿಲನ್ನು ಓರೆ ಮಾಡಿದಳು.

"ನಿನ್ನ ಗಂಡ ಇನ್ನು ಎದ್ದಿಲ್ವಾ!...." ಪ್ರಶ್ನೆಗೆ ಉತ್ತರಿಸದೇ ಬಚ್ಚಲು ಮನೆಯ ಕಡೆಗೆ ನೋಡಿದಳು. ನೀವು ಗಂಡ ಹೆಂಡ್ತಿ ರಾತ್ರಿ ಒಟ್ಟಿಗೇ ಮಲಗಿದ್ರಿ ಅಂತ ನಂಗೆ ಗೊತ್ತು ಅಂತ ನಂಗೆ ತಿಳಿಸ್ತಿದಾರೆ ಎಂದುಕೊಂಡಳು.

"ನಿನ್ನನ್ನೇ ಕೇಳಿದ್ದು. ಅದೇನು ದುರಹಂಕಾರ ನಿಂಗೆ?"

"ಬಚ್ಚಲು ಮನೆಗೆ ಹೋಗಿ ಮುಖ ತೊಳೆದುಬಂದಳು." ಬಾಯಿ ಮುಕ್ಕಳಿಸಿ ಬರೋವಷ್ಟರಲ್ಲಿ ಏನು ಆತುರ ನಿಮ್ಗೆ. ಮೆಲ್ಲಗೆ ಮಾತಾಡಿ. ಅವರು ನಿದ್ದೆ ಮಾಡ್ತಿದಾರೆ." ಎನ್ನುತ್ತಾ ಕಾಫಿ ಬೆರೆಸಲು ಅಡಿಗೆ ಮನೆಯ ಕಡೆಗೆ ನಡೆದಳು. ಕುಳಿತಲ್ಲಿಂದಲೇ ಸೊಸೆಯ ಚಲನವಲನಗಳನ್ನು ಗಮನಿಸುವ ವಾಡಿಕೆ ಆಕೆಯದು. ಹಿರೀಮಗಳು ಮೈನೆರೆದಿದಾಳೆ. ಇಂಥಾ ಹೊತ್ನಲ್ಲೂ ಗಂಡನೊಡನೆ ಮಲಗಿ ಚಕ್ಕಂದವಾಡುವ ಆಸೆ. ಸೊಸೆಯ ಬಗ್ಗೆ ತಿರಸ್ಕಾರ ಮೂಡಿತ್ತು. ಈ ಕೇಶವಂಗೆ ಅದೇನು ಮೋಡಿ ಮಾಡಿದಾಳೋ. ಈ ಮಾಯಾಂಗನೆ.? ಒಂದು ವಾರದಿಂದ ಊರ್ನಲ್ರ್ಲಿಲ್ಲ. ಹುಷಾರಿರಲಿಲ್ವಂತೆ, ಮನೇಲಿ ಮಗಳು ದೊಡ್ಡೋಳಾಗಿದಾಳೆ. ತಾಯಿ, ನಾನಿನ್ನು ಬದುಕಿದೀನಿ. ಅಮ್ಮ ಹೇಗಿದೀಯ ಅಂತ ಕೇಳೋದನ್ನ ಮರೆತೇಬಿಟ್ಟಿದ್ದಾನೆ. ರಾತ್ರಿಯೆಲ್ಲಾ ತನಗೆ ನಿದ್ದೆ ಇಲ್ಲ. ಬರೀ ಹಾಲು ಹಣ್ಣುಹೊಟ್ಟೆಗೆ ಸಾಕಾಗಿರ್ಲಿಲ್ಲ. ಫಲಾಹಾರಕ್ಕೆ ಏನು ಮಾಡ್ಕೊಳ್ತೀರಿ ಅಂತ ಕೇಳಿದ್ಲಾ ಇವಳು?.... ಗಂಡ ಊರಿಗೆ ಬಂದ ಅನ್ನೋ ಸಂಭ್ರಮ ಇವಳಿಗೆ. ಈ ವಯಸ್ನಲ್ಲಿ... ಮಗಳಿಗೆ ಮದುವೆ ಮಾಡಿದ್ರೆ ಇನ್ನೊಂದು ವರ್ಷದಲ್ಲಿ ಅಜ್ಜಿ ಆಗ್ತಾಳೆ... ಅಷ್ಟಾದ್ರೂ ತಿಳೀಬೇಡ್ವೆ?....

ಬಿಸಿಬಿಸಿ ಕಾಫಿ ಕುಡಿದ ರಾಧಾ, ಅಡಿಗೆ ಮನೆಯನ್ನು ಚೊಕ್ಕಟಗೊಳಿಸಿ, ಬೆಳಗಿನ ತಿಂಡಿಗೆ ಸಿದ್ಧತೆಗಳನ್ನು ಮಾಡಿಕೊಳ್ಳತೊಡಗಿದಳು.

"ಅಮ್ಮಾ.... ಇಲ್ಲಿ ಕೂತ್ಕೊಂಡು ಏನ್ಮಾಡ್ತಿದೀಯ?..." ಹೊರಬಂದ ಕೇಶವ ತಾಯಿಯನ್ನು ಕೇಳಿದ. ಅವನಿಗೂ ಮುಜುಗರವೆನಿಸಿತ್ತು.

"ಏನೂ ಕೆಲ್ಸ ಇರ್ಲಿಲ್ಲ. ಹಾಗೇ ಕೂತೆ. ರಾತ್ರಿ ಚೆನ್ನಾಗಿ ನಿದ್ದೆ ಬಂತಾ?" ತಾಯಿಯ ಮಾತು ವಿಚಿತ್ರವೆನಿಸಿತ್ತು. ಎಂದೂ ಕೇಳದವಳು.

"ಹೂಂ.... ನಮ್ಮ ಮನೆ, ನಮ್ಮ ಹಾಸ್ಗೆ ಹೊದ್ಕೆ. ಚೆನ್ನಾಗಿ ನಿದ್ದೆ ಬರದೇ ಇರುತ್ತಾ! ಯಾಕೆ ನಿಂಗೆ ನಿದ್ದೆ ಬರ್ಲಿಲ್ವಾ?....

"ನಂಗೆ ಜಾಗ ಬದಲಾವಣೆ ಆದ್ರೆ ನಿದ್ದೆ ಬರುಲ್ಲಪ್ಪಾ. ಇಲ್ಲಿ ಊಟದ ಮನೇಲಿ ಮಲಗಿ ಅಭ್ಯಾಸ... ಅವಳೋ, ನಿನ್ನ ಮಗಳು ವಿಪರೀತ ಹೊರಳ್ತಾಳಪ್ಪಾ... ದಪ್ ದಪ್ ಅಂತ ಮೈಮೇಲೆ ಕಾಲು ಹಾಕ್ತಿದ್ಲು.

"ಸುಳ್ಳು ಹೇಳ್ಬೇಡಿ ಅಜ್ಜಿ.... ನೀವೇ ನನ್ನ ಮೈಮೇಲೆ ಪದೇ ಪದೆ ಕೈ ಹಾಕ್ತಿದ್ದದ್ದು... ಕೈ ತೆಗೆದೂ ತೆಗೆದೂ ನಂಗೂ ಸಾಕಾಯ್ತು" ಮಲಗಿದ್ದಲ್ಲಿಂದಲೇ ಮಂದಾರ ನುಡಿದಳು ಕೇಶವ ನಕ್ಕ.

"ನೋಡಿದ್ಯಾ... ನೋಡಿದ್ಯಾ ನಿನ್ನ ಮಗಳನ್ನ? ನನ್ಮೇಲೆ ಚಾಡಿ ಹೇಳ್ತಿದಾಳೆ..."

"ಅಮ್ಮಾ ನೀನು ಸುಮ್ನಿರ್ಬಾರ್ದಾ?. ಅವಳಿನ್ನೂ ಚಿಕ್ಕೋಳು."

"ಏನು ಚಿಕ್ಕೋಳು. ಈ ವಯಸ್ಸಿಗೆ, ನಂಗೆ ಮದುವೆ ಆಗಿತ್ತು.

"ನಿನ್ನ ಕಾಲದ ಮಾತನ್ನು ಬಿಡು. ರಾಧಾ ಕಾಫಿ ಆಗಿದ್ರೆ ಕೊಡು.... ಮುಖ ತೊಳೆದು ಬರ್ತೀನಿ" ಕೇಶವ ಬಚ್ಚಲು ಮನೆಯ ಕಡೆಗೆ ನಡೆದ.

"ನಿಂಗೆ, ನಿನ್ಹೆಂಡ್ತಿ ನಿನ್ನ ಮಕ್ಕಳು ಆಡೋದು ಗೊತ್ತಾಗುಲ್ಲ. ನಾನು ಆಡೋದು ಮಾತ್ರ ತಪ್ಪಾಗಿ ಕಾಣಿಸುತ್ತೆ." ಅತ್ತೆ ಗೊಣಗಿದ್ದು ರಾಧಂಗೆ ಕೇಳಿಸಿತ್ತು. ಬಿಸಿಬಿಸಿ ಕಾಫಿಯನ್ನು ತಂದು ಹಾಲಿನ ಟೀಪಾಯ್ ಮೇಲಿಟ್ಟು ಮಗಳ ಕಡೆ ತಿರುಗಿದಳು.

"ಮಂದಾ... ಏಳೇ... ಹಾಸಿಗೆ ಸುತ್ತಿ ಕಸ ಗುಡಿಸ್ಬಿಟ್ಟು, ಸ್ನಾನಕ್ಕೆ ಹೋಗ್ತೀನಿ. ಗಂಟೆ ಎಂಟಾಗ್ತಾ ಬಂದಿದೆ. ತಿಂಡಿ ಮಾಡ್ಬೇಕು.

"ಇನ್ನೂ ಏಳೂಕಾಲು ಗಂಟೆ ಕಣಮ್ಮ. ಇನ್ನು ಹತ್ತು ನಿಮಿಷ ಬಿಟ್ಟು ಏಳ್ತೀನಿ" ಮಂದಾರ ಮುಸುಕು ಬೀರಿದಳು.

"ಸಾಕು ಸುಮ್ನೆ ಏಳು ಸ್ಕೂಲ್ಗೆ ಹೊತ್ತಾಗುತ್ತೆ." ಹೊದ್ದಿಕೆಯನ್ನು ಎಳೆದುಕೊಂಡಳು. ಮುಖ ತೊಳೆದು ಬಂದ ಕೇಶವ ಕಾಫಿಯ ಲೋಟವನ್ನು ಕೈಗೆತ್ತಿಕೊಂಡ.

"ಏನೇ ಮಂದಾರ, ಏಳುಲ್ವೇನೆ. ಎದ್ದು, ರಾಜಾ ಇನ್ನು ಮಲಗಿದ್ದರೆ ಹೋಗಿ ಎಬ್ಬಿಸು. ಇಳಿದು ಬಂದು ಕಾಫಿ ಕುಡೀಲಿ. ರಾಧಾ, ಅವನಿಗೂ ಕಾಫಿ ಇದೇ ತಾನೇ?"

"ಎದ್ದು ಬರ್ತಾನೆ ಬಿಡಿ. ಬೆಲ್ ಮಾಡಿ. ಹೆಣ್ಣು ಹುಡುಗೀನ ಏನು ಅವನನ್ನು ಎಬ್ಬಿಸೋಕೆ ಕಳಿಸೋದು...?" ಮಂದಾರಾ ಆಕಳಿಸುತ್ತಾ ಎದ್ದಳು.

"ಒಂದೆರಡು ದಿನ... ಅವನಿಗೆ ಅಭ್ಯಾಸವಾದರೆ ಅವನೇ ಬರ್ತಾನೆ. ಬೆಲ್ ಮಾಡಿ ಕರೆಯೋಕೆ, ಅವನೇನು ಮನೆಯ ಆಳೇ..."

"ಅವನು ಪರರ ಮನೆಯ ಹುಡುಗ. ಚಿಕ್ಕವನೇನಲ್ಲ. ಹೆಣ್ಣು ಮಕ್ಕಳಿಗೆ ಯಾಕೆ ಇಂಥಾ ಕೆಲಸ ಹಚ್ಚಬೇಕು?"

"ನಮ್ಮ ಮನೇಲಿ ಗಂಡು ಮಕ್ಕಳಿಲ್ಲವಲ್ಲ." ಹೆಂಡತಿಯ ಕಡೆ ಕುಡಿನೋಟ ಬೀರಿದ. ಮಂದಾರ ಎದ್ದು ಹೋಗಿದ್ದಳು.

"ನಾನು ಹತ್ತು ವರ್ಷದ ಕೆಳಗೇ ಹೇಳ್ದೆ.... ಶಾಸ್ತ್ರಿಗಳನ್ನು ಕೇಳ್ಕೊಂಡು ಸಹ ಬಂದಿದ್ದೆ. ನಿನಗೆ ಎರಡೆರಡು ಗಂಡು ಮಕ್ಕಳ ಯೋಗ ಇದೆ. ಈಗ್ಲೂ ನೀನೇನು ಮುದುಕನಾಗಿಲ್ಲ." ಊಟದ ಮನೆಯಲ್ಲಿ ಕೂತಿದ್ದ ತಾಯಿ ನುಡಿದಾಗ, ಕೇಶವ ತುಟಿಯನ್ನು ಕಚ್ಚಿಕೊಂಡ. ರಾಧಾ ತಲೆ ಚಚ್ಚಿಕೊಂಡಳು. ಇದು ಆಗಾಗ್ಗೆ ಅತ್ತೆ, ಒತ್ತಿ, ಚುಚ್ಚಿ ನುಡಿವ ನುಡಿಗಳೇ. ಮಾತನ್ನು ಮುಂದುವರೆಸಲಿಲ್ಲ. ಆದರೆ ಕೇಶವ ಮಾತ್ರ ಸಂಭ್ರಮದಿಂದ ಹೆಂಡತಿಯನ್ನು ಕೇಳಿದ.

"ಏನಂತೀಯಾ?...." ತಾಯಿಗೆ ಕೇಳಿಸಿದಂತೆ ಮೆಲ್ಲನೆ ಕೇಳಿದ್ದ.

"ಸಾಕು ನಿಮ್ಮ ಹುಡುಗಾಟ.... ಅವರ ಮಾತಿಗೆ ಬೆಲೆ ಕೊಟ್ರೆ ಆಯ್ತು... ಈಗ್ಲೇ ಮೂರು ಮಕ್ಕಳು ಜಾಸ್ತಿ. ಇನ್ನು ಎರಡು ಅಂತಂದ್ರೆ, ಐದು.... ಆಮೇಲೆ ಇನ್ನು ಒಂದನ್ನ ಹೆತ್ತರೆ, ಅರ್ಧ ಡಜನ್... ಯಾವನೋ ಶಾಸ್ತ್ರಿ ಹೇಳಿದ ಮಾತಿನಲ್ಲಿ ನನಗೆ ನಂಬಿಕೆ ಇಲ್ಲ. ಏಳಿ ಎದ್ದು ಸ್ನಾನಗೀನ ಮಾಡಿ. ಕಸಗುಡಿಸಿ ನಾನೂ ಸ್ನಾನಕ್ಕೆ ಹೋಗ್ತೀನಿ. ಮಕ್ಕಳ ಸ್ಕೂಲಿಗೆ ಹೊತ್ತಾಗುತ್ತೆ."

"ಮಧುರನ್ನ ಸ್ಕೂಲ್ಗೆ ಕಳಿಸ್ತೀಯಾ?"

"ಅವಳು ಹೋಗೋದಾದ್ರೆ ಹೋಗಲಿ. ಮನೇಲಿ ಕೂತು ಏನ್ಮಾಡ್ತಾಳೆ?"

"ಅಮ್ಮನ್ನ ಒಂದ್ಮಾತು ಕೇಳು."

"ಅವರನ್ನ ಕೇಳಿದ್ರೆ ಬೇಡಾಂತ಼್ಲೇ ಹೇಳ್ತಾರೆ. ಮಕ್ಕಳು ದೊಡ್ಡವರಾಗಿದಾರೆ. ತಿಳುವಳಿಕೆ ಇದೆ. ಅವರಿಗೆ ಹೇಗೆ ಬೇಕೋ ಹಾಗೆ ನಿರ್ಧರಿಸುತ್ತಾರೆ."

"ಅಮ್ಮ ಹಳೇ ಕಾಲದವಳು.... ಅವಳ ಮಾತಿನಲ್ಲೂ ಅರ್ಥ ಇರುತ್ತೆ."

"ಅದೇ ನಂಗೆ ಬಂದಿರೋ ಕುತ್ತು. ಅವರು ಹಳೇಕಾಲದವರು, ಮಕ್ಕಳು ಈ ಕಾಲದವರು. ನಾನು!.... ಇಬ್ಬರ ಮಧ್ಯೆ ನಾನು ಯಾವ ಕಾಲಕ್ಕೂ ಸೇರದವಳಾಗಿ ಬಿಟ್ಟಿದೀನಿ."

"ಸ್ವಲ್ಪ ಮೆತ್ತಗೆ ಮಾತಾಡು ಮಾರಾಯ್ತಿ. ಯಾಕೆ ಹೀಗೆ ಒರಟಾಗಿ ಮಾತಾಡ್ತೀಯ. ಅಮ್ಮಂಗೆ ಕೇಳ್ಸಿದ್ರೆ ಏನಂದ್ಕೊಳ್ತಾಳೆ."

"ಅವರು ಎದ್ದು ಹೋಗಿದಾರೆ. ನಂಗೇನು ನಿಮ್ಮಮ್ಮನ ಮೇಲೆ ದ್ವೇಷವಿಲ್ಲ. ನಿಮ್ಮಮ್ಮಂಗೆ ಬೇಸರವಾಗ್ಬಾರ್ದು. ಈ ಹೆಣ್ಣು ಮಕ್ಕಳಿಗೆ ನೋವಾಗಬಾರ್ದು. ನನಗೆ ಏನಾದ್ರೂ ಪರವಾಗಿಲ್ಲಾ?.... ನನ್ನನ್ನ ಕೇಳೋರು ಯಾರು?"

"ಏಯ್ ಯಾಕೆ ಹೀಗೆ ಮಾತಾಡ್ತೀ.... ನಾನಿಲ್ವಾ ನಿನ್ನನ್ನ ಕೇಳೋಕೆ..." ತುಂಟತನದಿಂದ ಕೇಳಿದ.

"ಸಾಕು ಸುಮ್ನಿರು. ನೀವು ಕೇಳೋದು ನಿಮಗೆ ಬೇಕಾದ್ದನ್ನ ನಿಮಗೆ ಬೇಕಾದಾಗ ಕೇಳ್ತೀರಿ. ರಾತ್ರಿಯಿಂದ ನಿಮ್ಮ ರಸಿಕತನ ಯಾಕೋ ಏನೋ ಹೆಚ್ಚಾಗಿದೆ. ನಿಮ್ಮ ಮಾತನ್ನ ಕೇಳ್ತಾನಿಂತ್ರೆ. ಒಳಗೆ ಕೆಲಸ ಮಾಡೋರ್ಯಾರು?"

"ಇವತ್ತೂ ನೀನು ಮದುವೆ ಮಾಡ್ಕೊಂಡು ಬಂದಾಗ ಹೇಗಿದ್ಯೋ ಹಾಗೇ ಇದೀಯ. ರಾಧಾ.... ಮೂರು ಮಕ್ಕಳ ತಾಯಿ ಅಂತ ಹೇಳೋ ಹಾಗೇ ಇಲ್ಲ" ಹೆಂಡತಿಯ ಸೊಂಟಕ್ಕೆ ಕೈಹಾಕಿದ.

"ಸಾಕು ರಾತ್ರಿಯೆಲ್ಲಾ [illegible]ೀಳು ಹೊಯ್ದುಕೊಂಡದ್ದು ಸಾಕಾಗಿದೆ. ವಯಸ್ಸಾದ ತಾಯಿ, ಬೆಳೆದ ಹೆಣ್ಣು ಮಕ್ಕಳು ಮನೇಲಿವೆ. ಯಾರಾದ್ರೂ ನೋಡಿದ್ರೆ ಅವನ ಕೈಯನ್ನು ಸರಿಸಿ ಅವನಿಂದ ದೂರ ಸರಿದಳು. ಮುಂಬಾಗಿಲು ತೆರೆಯಿತು. ಬಾಗಿಲಲ್ಲಿ ರಾಜ ನಿಂತಿದ್ದ. ಕೇಶವ ಮುಖಕ್ಕೆ ಪೇಪರನ್ನು ಹಿಡಿದು ಕಾಫಿ ಕುಡಿಯುವವನಂತೆ ನಟಿಸುತ್ತಾ, ಹೆಂಡತಿಯ ಕಡೆ ನೋಡಿದ. ಅವಳು ಪಿಟಿಪಿಟಿ ಅಂತ ಬೈದು ತುಟಿಯಂಚಿನಲ್ಲಿ ನಕ್ಕಳು. ಹಾಸಿಗೆಯನ್ನು ಸುತ್ತಿ ಒಳಗಿನ ರೂಮಿಗೆ ಎತ್ತಿಡಲು ಎತ್ತಿಕೊಂಡಳು.

"ಅಮ್ಮಾ.... ಇಲ್ಕೊಡಿ.... ನಾನು ಎತ್ತಿಡ್ತೀನಿ..." ರಾಜಾ ಸುತ್ತಿಟ್ಟ ಹಾಸಿಗೆಗೆ ಕೈಹಾಕಿದ.

"ಪರ್ವಾಗಿಲ್ಲ ಬಿಡಪ್ಪಾ.... ನಾನು ಇಡ್ತೀನಿ."

"ಇಲ್ಲಮ್ಮಾ.... ಇಲ್ಲಿ ಬಿಡಿ.... ನೀವು ನನ್ನ ತಾಯಿಯಂತೆ ನಾನು ಚಿಕ್ಕವನು. ನಿಮಗೆ ಸಹಾಯ ಮಾಡೋದು ನನ್ನ ಕರ್ತವ್ಯ ಅಂತ ಅಂದ್ಕೊಳ್ತೀನಿ"

"ರಾಧಾ, ಬಿಡು. ಅವನು ಎತ್ತಿಡ್ತಾನೆ..." ಗಂಡ ಹೇಳಿದ, ರಾಧಾ ಕೈ ತೆಗೆದಳು. ಅವನು ಹಾಸಿಗೆಗಳನ್ನು ಒಳಗಿನ ರೂಮಿನಲ್ಲಿಟ್ಟು ಬಂದ.

"ಮುಖ ತೊಳೆದಾಯ್ತಾ?"

"ಹುಂ." ಎನ್ನುತ್ತಾ ಕೈಕಟ್ಟಿ, ಬಾಗಿಲಿಗೊರಗಿ ನಿಂತ.

"ರಾಧಾ ಇವನಿಗೆ ಕಾಫಿ ಕೊಡು" ಅಡಿಗೆ ಮನೆಯ ಕಡೆಗೆ ಹೊರಟವಳ ಹಿಂದೆ ರಾಜ ನಡೆದ.

"ಅಮ್ಮಾ ಏನಾದ್ರೂ ಕೆಲ್ಸ ಇದ್ರೆ ಸಂಕೋಚ ಇಲ್ಲದೇ ಹೇಳಿ. ನಾನು ಮಾಡಿಕೊಡ್ತೀನಿ." ಎನ್ನುತ್ತಾ ಕಾಫಿಯ ಕಪ್ಪನ್ನು ಎತ್ತಿಕೊಂಡ. ರಾಧಾ ಬೆರಗಾಗಿ ಅವನನ್ನೇ ನೋಡಿದಳು. ಇದುವರೆಗೂ ಮನೆಯಲ್ಲಿ ಯಾರೂ ಅವಳಿಗೆ ಹೇಳದಿದ್ದ ಮಾತು. ಎಲ್ಲರೂ ಇವಳಿಂದ ಕೆಲಸ ತೆಗೆಯುವವರೇ...

"ಇರಲಿ ಬಿಡಪ್ಪಾ. ನನಗೆ ಇದೇ ಅಭ್ಯಾಸ. ಅಲ್ಲದೇ ನೀನಿನ್ನು ಈ ಮನೆಗೆ ಹೊಸಬ. ನಿನ್ನ ಕಾಲೇಜು ಯಾವಾಗ ಪ್ರಾರಂಭ?

"ಇನ್ನೂ ಹತ್ತು ದಿನ ಸಮಯವಿದೆ..... ತರಕಾರಿ ಹಚ್ಚೋದು ಏನಾದ್ರೂ ಇದ್ರೆ ಕೊಡಿ ಹೆಚ್ಚು ಕೊಡ್ತೀನಿ." ಕಾಫಿಯ ಕಪ್ಪನ್ನು ತೊಳೆದು ತಂದಿತ್ತ. ರಾಧಾಳ ಆತಂಕ ಹೆಚ್ಚಾಗಿತ್ತು. ಈ ಹುಡುಗನಿಗೆ ಸಲುಗೆ ಕೊಟ್ಟು ಹತ್ತಿರ ಮಾಡಿಕೊಂಡರೆ, ತನಗೆ ಸಹಾಯ ಆಗುವುದೋ ಅಥವಾ ಅಪಾಯ ಒದಗುವುದೋ ಹುಡುಗನ ಸೋದರಮಾವ, ನನ್ನ ಗಂಡನ ಸ್ನೇಹಿತ. ಅವನಿಗೆ ಉಪಕಾರ ಮಾಡುವವನಂತೆ, ನನ್ನ ಗಂಡ ಇವನನ್ನು ಕರ್ಕೊಂಡು ಬಂದಿದಾನೆ. ಈ ಹುಡುಗ ಹೇಗೋ ಏನೋ.... ಈಗಲೇ ಹೇಗೆ ತಿಳಿಯುತ್ತೆ?

"ಒಂದೆರಡು ದಿನ ಸುಧಾರಿಸ್ಕೋ.... ಆಮೇಲೆ ಸಣ್ಣಪುಟ್ಟ ಕೆಲಸಗಳನ್ನು ಮಾಡಲೇಬೇಕಾಗುತ್ತೆ. ಅಜ್ಜಿ ತುಂಬಾ ಮಡಿ. ಅವರು ಏನಂತಾರೋ...? ಅತ್ತೆಯ ನೆವ ಹೇಳಿ ತಪ್ಪಿಸಿಕೊಳ್ಳಲು ನೋಡಿದಳು.

"ನಂಗೆ ಉಪನಯನ ಆಗಿದೆ. ಮಡಿ ಕೆಲಸ ಕೂಡಾ ಗೊತ್ತಿದೆ. ನಮ್ಮ ಅತ್ತೆಗೆ ತುಂಬಾ ಸಹಾಯ ಮಾಡ್ತಿದ್ದೆ." ಹುಡುಗನ ಮೇಲೆ ಅನುಕಂಪ ಮೂಡಿತು.

"ಆಗ಼್ಿ, ನಂಗೂ ಸಹಾಯ ಮಾಡೂವಂತೆ. ಆದರೆ ಇವತ್ತೇ ಬೇಡ. ಮೇಲಿನ ರೂಮನ್ನು ಓರಣ ಮಾಡ್ಕೋ. ಧೂಳು ಕಸ ತುಂಬಿರಬಹುದು. ನಿನ್ನ ಓದಿಗೆ ಅನುಕೂಲವಾಗುವಂತೆ ಟೇಬಲ್ಲು, ಕುರ್ಚೀನ ಇಟ್ಕೋ. ತಿಂಡಿ ಆದ್ಮೇಲೆ ಕರೀತೀನಿ. ಇನ್ನೊಂದು ಸ್ವಲ್ಪ ಕಾಫಿ ಬೇಕಾ?"

"ಬೇಡ.... ನಂಗೆ ಹೆಚ್ಚು ಕಾಫಿಯ ಅಭ್ಯಾಸವಿಲ್ಲ." ಅಲ್ಲೇ ನಿಂತವನನ್ನು ಸಾಗಹಾಕುವುದು ಹೇಗೆ ಎಂದು ಚಿಂತಿಸಿದಳು. ಹಾಲಿನ ಬಾಗಿಲ ಮರೆಯಲ್ಲಿ ನಿಂತು ಮಯೂರ ತಾಯಿಗೆ ಸಂಜ್ಞೆ ಮಾಡಿ ಕರೆದಳು. ರಾಧಾ ಅತ್ತ ಕಡೆ ತಿರುಗಿ ಏನು ಅಂತ ಕಣ್ಣಿನಲ್ಲೇ ಕೇಳಿದಾಗ, ರಾಜ ಹಿಂತಿರುಗಿ ನೋಡಿದ. ಮಯೂರಳನ್ನು ಕಂಡ. ತಾನು ಅಲ್ಲಿ ನಿಂತಿರುವುದು ಸರಿಯಲ್ಲ ಎನಿಸಿತು. ಕತ್ತು ತಗ್ಗಿಸಿ ಹಾಲಿನೆಡೆಗೆ ನಡೆದ. ರಾಧಾ ನಿರಾಳವಾಗಿ ಉಸಿರಾಡಿದಳು. ಮಯೂರ ತಾಯಿಯ ಬಳಿಗೆ ಬಂದು ನಿಂತಳು. "ಅಮ್ಮಾ... ಇದೇನಮ್ಮ ಅವನನ್ನು ಮಾತಿಗೆ ನಿಲ್ಲಿಸಿಕೊಂಡಿದೀಯಲ್ಲ."

"ನಾನೇನು ನಿಲ್ಲಿಸಿಕೊಂಡಿರ್ಲಿಲ್ಲ. ಅವನೇ ಬಂದ. ಮಧುರ ಎದ್ಲಾ?..."

"ಹುಂ ಎದ್ದಿದಾಳೆ. ನಿನ್ನನ್ನ ಕರೀತಿದಾಳೆ. ಅಜ್ಜಿ ಎಲ್ಲಿ ಕಾಣ್ತಿಲ್ಲ?"

"ಎಲ್ಲಿ ಹೋದ್ರೋ.... ನಮ್ಮದೆಲ್ಲ ತಿಂಡಿ ಕೆಲಸ ಮುಗಿದು, ಅಡಿಗೆ ಮನೆ ಕ್ಲೀನ್ ಆಗೋವರೆಗೂ ಅವರು ಬರುಲ್ಲ. ಅವಳಿಗೆ ಹೇಳು, ಹಿಂಬಾಗಿಲ್ನಿಂದ ಬಂದು ಮುಖ ತೊಳ್ಕೊಳ್ಳಲಿ. ಹಂಡೇಲಿ ಬಿಸಿ ನೀರಿದೆ. ಸಧ್ಯ ರೂಮಿಗೆ ಒಂದು ಅಟ್ಯಾಚ್ಡ್ ಬಾತ್ ರೂಂ ಇರೋ ಹೊತ್ಗೆ ಸರಿಹೋಯ್ತು. ಇಲ್ದಿದ್ರೆ ಏನ್ಗತಿ?"

"ಅಲ್ಲಿ ನಲ್ಲಿಯಲ್ಲಿ ನೀರು ಸರಿಯಾಗಿ ಬರ್ತಿಲ್ಲ..."

"ಮಹಡಿ ಮೇಲಿನ ರೂಮಿನ ಬಚ್ಚಲು ಮನೆಯಲ್ಲಿ ಅವನು ನೀರನ್ನು ಬಿಟ್ಟಿದ್ದ ಅಂತ ಕಾಣುತ್ತೆ."

"ಅವನು ಯಾರು ಅಂತ.... ಎಷ್ಟು ದಿನ ಇಲ್ಲಿರ್ತಾನೆ?"

"ಅದೇನೋ ನಂಗೊತ್ತಿಲ್ಲ. ನಾನು ಸ್ನಾನಕ್ಕೆ ಹೋಗ್ಬೇಕು. ಹೊತ್ತಾಯ್ತಲ್ಲೇ."

"ನೀನು ಹೋಗು. ನಾನು ಮಧುರಂಗೂ ಕಾಫಿ ಕೊಡ್ತೀನಿ." ರಾಧಾ, ಸ್ನಾನದ ಮನೆಗೆ ಹೋದಳು. ಮಯೂರ ಎರಡು ಕಪ್‌ಗಳಲ್ಲಿ ಕಾಫಿಯನ್ನು ಹಿಡಿದು ಹೊರಬಂದಳು. ಗೋಡೆಗೊರಗಿ ಕೈಕಟ್ಟಿ ನಿಂತಿದ್ದ ರಾಜಾ ಅವಳೆಡೆ

ನೋಡಿ ಮುಗುಳ್ನಕ್ಕ. ಕೈ ನಡುಗಿದಂತಾಗಿ ಕಾಫಿ ತುಳುಕಿತು. ಅಲ್ಲಿ ನಿಲ್ಲದೇ ರೂಮಿನೊಳಕ್ಕೆ ಹೋದಳು.

"ಅಮ್ಮಾ ಮಧು ಸ್ಕೂಲಿಗೆ ಹೋಗುಲ್ಲವಂತೆ..." ಮಯೂರ ಬಂದು ಹೇಳಿದಾಗ ರಾಧಾ ನಿರಾಳವಾದಳು.

"ನಾನೇ ಹೋಗ್ಬೇಡಾಂತ ಹೇಳ್ಬೇಕೂಂತಿದ್ದೆ. ಅವಳೇ ಹೇಳಿದ್ದು ಒಳ್ಳೇದೇ ಆಯ್ತು. ಮಂದಾರ ಎಲ್ಲಿ ಕರೀ, ಸ್ನಾನ ಮಾಡಿ ರೆಡಿಯಾಗ್ಲೀ."

"ಅಮ್ಮಾ ನಾನೂ ಮನೇಲಿರ್ತೀನಮ್ಮಾ..."

"ಏನೂ ಬೇಡ. ಅವಳಿಗಾದ್ರೆ ಒಂದು ಕಾರಣ ಇದೆ. ಸುಮ್ನೇ ಹೋಗು. ಮನೇಲಿದ್ದು ಏನ್ಮಾಡ್ತೀಯ? ನೀನು ಹೋಗುಲ್ಲ ಅಂತಂದ್ರೆ, ಮಂದಾರಾನೂ ಹೋಗುಲ್ಲ ಅಂತ ಹಠ ಮಾಡ್ತಾಳೆ ಅಷ್ಟೇ" ಮಯೂರ ಸಪ್ಪೆ ಮುಖ ಮಾಡಿಕೊಂಡು ತಂಗಿಯನ್ನು ಕರೆಯಲು ಹೋದಳು. ಮಂದಾರ ಪಕ್ಕದ ಮನೆಯ ನಂದಿನಿ ಹತ್ತಿರ ಮಾತಾಡುತ್ತಿದ್ದಳು.

"ಮಾತು ಸಾಕು ಬಾರೇ. ಸ್ಕೂಲ್ಗೆ ಹೊತ್ತಾಗುತ್ತೆ." ಮಂದಾರನ್ನ ಒಳಗೆ ಕಳಿಸಿ, ಮಯೂರ ತಾನು ಮಾತಿಗೆ ನಿಂತಳು.

"ನಿಮ್ಮಪ್ಪನ ಜೊತೆ ಒಬ್ಬ ಹುಡುಗ ಬಂದಿದಾನಂತೆ. ಯಾರವನು? ಎಲ್ಲಿಯವನು!....

"ಏನೋ ನಂಗೊತ್ತಿಲ್ಲ ಆಂಟಿ.... ಅಮ್ಮಂಗೂ ಸರಿಯಾಗಿ ಗೊತ್ತಿಲ್ಲವಂತೆ. ಅಪ್ಪನ್ನ ನಾವು ಕೇಳಲಿಲ್ಲ. ಅವನ ಹತ್ತಿರವೂ ಮಾತಾಡಿಲ್ಲ."

"ಚಿಕ್ಕೋನೋ ದೊಡ್ಡೋನೋ ನೋಡೋಕೇ ಹೇಗಿದಾನೆ!...

"ನಾನೂ ಸರಿಯಾಗಿ ನೋಡಿಲ್ಲ ಆಂಟಿ.... ಅವನ ಹೆಸರು ರಾಜ ಅಂತ ಅಪ್ಪ ಹಾಗೇ ಕರೀತಿದ್ರು ಅವನನ್ನ...

"ಹೋಗು ಮಾತಿಗೆ ನಿಂತ್ರೆ ಸ್ಕೂಲ್ಗೆ ಹೊತ್ತಾಗುತ್ತೆ. ಆಮೇಲೆ ನಿಮ್ಮಮ್ಮ ನನ್ನನ್ನ ಬೈಕೋತಾರೆ ಅಷ್ಟೇ. ಅಜ್ಜಿ ಎಲ್ಲಿ?....

"ಎಲ್ಲೋ ತಿರುಗಾಡುಕ್ಕೆ ಹೋಗಿರಬಹುದು. ಏನು ತಿಂಡಿ ಮಾಡಿದೀರಿ ಆಂಟಿ!

"ಇವತ್ತು ಶುಕ್ರವಾರ ಅಲ್ವಾ? ಹುಗ್ಗಿ ಮಾಡಿದೀನಿ ಕೊಡ್ಲಾ?..."

"ಬೇಡಪ್ಪಾ ಸುಮ್ನೆ ಕೇಳ್ದೆ. ನಂದಿನ್ನೂ ಸ್ನಾನ ಆಗಿಲ್ಲ..."

"ಪರವಾಗಿಲ್ಲ ಆಮೇಲೆ ತಿನ್ನು. ತಡೀ ಡಬ್ಬಿಗೆ ಹಾಕಿಕೊಡ್ತೀವಿ. ಮಧುರಂಗೂ ಕೊಡು ಸ್ಕೂಲ್ಗೆ ಹೋಗ್ತಾಳೋ ರಜ ಹಾಕ್ತಾಳೋ..."

"ಸ್ಕೂಲ್ಗೆ ಹೋಗುಲ್ಲವಂತೆ. ಮುಜುಗರವಂತೆ." ಮಯೂರ ನಾಚಿಕೆಯಿಂದ ನುಡಿದಾಗ, ನಂದಿನಿ ನಕ್ಕಳು.

"ನಿಮ್ಮಪ್ಪ ಇಲ್ದೇ ಇದ್ದಿದ್ರೆ, ಅವಳ ಜೊತೆ ಚೌಕಾಬಾರಾನೋ, ಪಗಡೇನೋ ಆಡ್ಬಹುದಾಗಿತ್ತು.

"ಅವಳೇ ನಿಮ್ಮ ಮನೆಗೆ ಬಂದ್ರೇ..."

"ಬೇಡ ನಿಮ್ಮಜ್ಜಿಗೆ ಇಷ್ಟವಾಗುಲ್ಲ. ಅದನ್ನೇ ಒಂದುದೊಡ್ಡ ರಂಪಮಾಡಿ ಬಿಡ್ತಾರೆ." ಡಬ್ಬಿಗೆ ಹುಗ್ಗಿಯನ್ನು ತುಂಬಿಕೊಟ್ಟಳು. ಮಂದಾರಂಗೂ ಸ್ವಲ್ಪ ಕೊಡು. ಇಲ್ದಿದ್ರೆ ಗಲಾಟೆ ಮಾಡ್ತಾಳೆ" ಮಯೂರ ಡಬ್ಬಿ ಹಿಡಿದು, ಸೀದಾ ಮಧುರಳ ರೂಮಿಗೆ ಬಂದಳು... ಡಬ್ಬಿಯನ್ನು ಅಲ್ಲಿದ್ದ ಟೇಬಲ್ಲಿನ ಮೇಲಿಟ್ಟಳು.

"ಆದೇನೇ ನೆನ್ನೆಯಿಂದ ಅಕ್ಕನ ರೂಮ್ನಲ್ಲೇ ಇರ್ತೀಯಾ. ಅಮ್ಮ ಕರೀತಿದಾಳೆ ಹೊರಗೆ ಬಾ." ಮಂದಾರ ಬಾಗಿಲ ಬಳಿ ನಿಂತು ಕರೆದಳು.

"ಮಂದಾ ಬಾಯಲ್ಲಿ" ಮಧುರ ತಂಗಿಯನ್ನು ಕರೆದಳು.

"ಇಲ್ಲ ನಾನು ಬರುಲ್ಲ. ಅಜ್ಜಿ ಬೈತಾರೆ."

"ಅಜ್ಜಿ ಮನೇಲಿಲ್ಲ. ಸುಮ್ನೆ ಬಾರೆ..." ಮಯೂರ ಕೈ ಹಿಡಿದೆಳೆದಳು.

"ಅಮ್ಮಾ..." ಮಂದಾರ ಕೆಟ್ಟದನಿಯಲ್ಲಿ ಕಿರುಚಿದಳು. ಹಾಲಿನಲ್ಲಿ ಕುಳಿತು ಪೇಪರೋದುತ್ತಿದ್ದ ರಾಜ ವೇಗವಾಗಿ ರೂಮಿನ ಬಾಗಿಲಿಗೆ ಬಂದ. ಒಳಬಾಗಿಲಲ್ಲಿ ನಿಂತಿದ್ದ ಮಧುರಳನ್ನು ನೋಡಿದ. ಅವಳು ಮಯೂರನ ಕಡೆ ಸಂಜ್ಞೆಮಾಡಿದಳು. ಅವಳು ತಿರುಗಿ ನೋಡಿ ತಂಗಿಯ ಕೈಬಿಟ್ಟಳು. ಆ ರಭಸಕ್ಕೆ ಮಂದಾರ ಆಯತಪ್ಪಿ ಬಾಗಿಲ ಬಳಿ ಬಿದ್ದುಬಿಟ್ಟಳು. ತಲೆಯ ಹಿಂಭಾಗ ಬಾಗಿಲ ಚೌಕಟ್ಟಿಗೆ ತಗುಲಿತು. ಹ್ಹಾಂ ಎಂದು ಕಿರುಚಿದಳು. ರಾಜ ಸರ್ರನೆ ಮುಂದೆ ಬಂದು ಅವಳನ್ನು ಎಬ್ಬಿಸಿದ. ಅವಳು ನೋವಿನಿಂದ ಮುಖ ಕಿವುಚುತ್ತಾ ಎದ್ದು ನಿಂತಳು.

"ಜೋರಾಗಿ ಏಟು ಬಿತ್ತಾ? ನೋವಾಗ್ತಿದೆಯಾ?" ಅವನು ಕೇಳಿದ.

"ಇಲ್ಲ.... ಎಂದು ಹೇಳಿದರೂ ತಲೆಯ ಹಿಂಭಾಗಕ್ಕೆ ಕೈ ಹೋಯಿತು. ತಗುಲಿದ್ದ ಜಾಗದಲ್ಲಿ ಬೋರೆ ಎದ್ದು ಸಣ್ಣದಾಗಿ ನೋಯುತ್ತಿತ್ತು. ಆದ ಪೆಟ್ಟಿಗಿಂತ ಅವನ ಎದುರಿಗೆ ಬಿದ್ದುದು ಹೀನಾಯವೆನಿಸಿತ್ತು. ಕಣ್ಣೀರು ಇಳಿಯಿತು. ಅಲ್ಲಿಂದ ನಡೆದು ಒಳಗಿನ ರೂಮಿಗೆ ಬಂದುಬಿಟ್ಟಳು. ಮಯೂರ

ಅಡಿಗೆ ಮನೆಗೆ ಬಂದು ವರದಿ ಒಪ್ಪಿಸಿದಳು. ಉಪ್ಪಿಟ್ಟು ಕೆದಕುತ್ತಿದ್ದ ರಾಧಾ, ಗಾಬರಿಯಿಂದ ಅಷ್ಟಕ್ಕೆ ಆ ಕೆಲಸವನ್ನು ಬಿಟ್ಟು, ರೂಮಿಗೆ ಬಂದಳು. ಬಾಗಿಲ ಪಕ್ಕದಲ್ಲಿ ಕುಳಿತು ಅಳುತ್ತಿದ್ದ ಮಂದಾರನನ್ನು ಸಮಾಧಾನಗೊಳಿಸಿ, ತಲೆಯ ಗಾಯದ ಮೇಲೆ ಕೈಯಾಡಿಸಿದಳು. ಮಂದಾರ ನೋವಿಗೆ ಮುಖ ಕಿವುಚಿದಳು.

"ತುಂಬಾ ನೋಯ್ತಾ ಇದೆಯೇನೇ! ಡಾಕ್ಟರ ಹತ್ರ ಹೋಗ್ಬರ್ತೀಯಾ?" ಇಲ್ಲ ಎನ್ನುವಂತೆ ತಲೆಯಾಡಿಸಿದಳು. ಸರಿ ಕಣ್ಣೊರೆಸಿಕೊಂಡು ಎದ್ದು ಬಾ. ತಿಂಡಿ ಆಗಿದೆ ತಿಂಡಿ ತಿನ್ನುವಂತೆ."

"ನಂಗೆ ತಿಂಡಿ ಬೇಡ."

"ಏನಾಯ್ತೇ ಮಂದಾರ... ಬಿದ್ದು ಬಿಟ್ಟಂತೆ" ಕೇಶವನೂ ರೂಮಿನೊಳಗೆ ಬಂದು ನಿಂತು ಕೇಳಿದಾಗ, ಮಂದಾರ ಎದ್ದು ನಿಂತಳು.

"ಇವಳೇ ನನ್ನನ್ನ ಬೀಳಿಸಿದ್ದು ಇವಳು ಎಳಿದೇ ಇದ್ದಿದ್ರೆ, ನಾನು ಬೀಳ್ತಿರಲಿಲ್ಲ." ಮಯೂರಳ ಕಡೆ ಬೆರಳು ತೋರಿದಳು.

"ನಾನೇನು ಬೇಕೂಂತ ಬೀಳಿಸ್ಲಿಲ್ಲ." ಮಯೂರಳೂ ಬಾಯಿ ಹಾಕಿದಳು.

"ಸಾಕು. ಸಾಕು... ಚರ್ಚೆ ಮಾಡ್ತಾ ನಿಂತಿರ್ತೀರೋ. ಸ್ಕೂಲಿಗೆ ಹೋಗ್ತೀರೋ. ಕೇಶವ ದಬಾಯಿಸಿ ಕೇಳಿದಾಗ, ಇಬ್ಬರೂ ತೆಪ್ಪಗಾದರು. ಹಾಲಿನ ಬಾಗಿಲ ಬಳಿ ನಿಂತು, ರಾಜ ಅವರುಗಳ ಮಾತನ್ನೇ ಆಲಿಸುತ್ತಿದ್ದ ರೂಮಿನ ಬಾಗಿಲ ಬಳಿ ನಿಂತ ಮಧುರ ಆಗಾಗ್ಗೆ ಅವನ ಕಡೆ ನೋಡುತ್ತಿದ್ದಳು.

"ಬೆಳಿಗ್ಗೆ ಏಳುವಾಗ ಎಡಮಗ್ಗುಲಿಂದ ಎದ್ದಿರಬೇಕು. ಅದಕ್ಕೇ ಪೆಟ್ಟಾಯ್ತು." ರಾಧಾ ಗಂಡನ ಕಡೆ ತಿರುಗಿ ನುಡಿದಳು. ಅವನದ್ದೇ ತಪ್ಪು ಎನ್ನುವಂತೆ ನೋಟದಲ್ಲಿ ಅರ್ಥ ಅಡಗಿತ್ತು. ರಾಜನಿಗೆ ಕಸಿವಿಸಿಯಾಗಿತ್ತು. ಅಲ್ಲಿ ನಿಲ್ಲುವ ಮನಸ್ಸಾಗದೇ ಸೀದಾ ಮಹಡಿ ಹತ್ತಿ ತನ್ನ ರೂಮಿಗೆ ಬಂದ.

"ಅಜ್ಜಿ ಬರುವಷ್ಟರಲ್ಲಿ ಎದ್ದು ಸ್ಕೂಲಿಗೆ ಹೊರಡಿ. ಇಲ್ದಿದ್ರೆ ಅದನ್ನೇ ದೊಡ್ಡದು ಮಾಡ್ತಾರೆ" ರಾಧಾ ಹೆದರಿಸಿದಳು. ಮಯೂರ ಬೇಗ ಬೇಗ ಸ್ನಾನ ಮಾಡಿ ಸಿದ್ಧಳಾದಳು. ಹತ್ತು ಹದಿನೈದು ನಿಮಿಷಗಳಲ್ಲಿ ಅಕ್ಕತಂಗಿಯರಿಬ್ಬರೂ ತಿಂಡಿ ತಿಂದು ರೆಡಿಯಾಗಿ ಮನೆಯಿಂದ ಹೊರಬಿದ್ದರು. ಮೇಲಿನ ರೂಮಿನ ಕಿಟಕಿಯ ಬಳಿ ನಿಂತು ರಾಜ, ಅವರಿಬ್ಬರ ಕಡೆ ನೋಡಿದ. ಮುಖದಲ್ಲಿ ಮಂದಹಾಸ ಮಿನುಗಿತು. ಗೇಟ್ಟು ದಾಟುವಾಗ, ಮಂದಾರ ಕತ್ತೆತ್ತಿ ಕಿಟಕಿಯ

ಬಳಿ ನಿಂತವನನ್ನು ಕಂಡಳು. ಒಂದು ಗಳಿಗೆ ಮುಖ ಚಿಕ್ಕದಾಗಿತ್ತು. ಮತ್ತೊಮ್ಮೆ ನೋಡಿದಾಗ, ಅವನು ಕಿರುನಗೆ ಸೂಸಿ, ಕೈಯಾಡಿಸಿದ. ಇವಳೂ ಮುಗುಳ್ನಕ್ಕು ಪ್ರತಿಯಾಗಿ ಕೈಯಾಡಿಸಿದಳು. ಮಯೂರ ಕತ್ತೆತ್ತಿ ಅವನ ಕಡೆ ನೋಡಿದಳು. ಅವನು ಅವಳಿಗೂ ಕೈಯಾಡಿಸಿದ. ಆದರೆ ಅವಳು ಸುಮ್ಮನೇ ನಡೆದಳು.

ಸ್ವಲ್ಪ ಹೊತ್ತಿನ ನಂತರ ಗೌರಮ್ಮ ಮನೆಗೆ ವಾಪಸ್ಸಾದಳು. ಸೀರೆಯ ಮಡಿಲಲ್ಲಿ ಕೂಡಿಟ್ಟಿದ್ದ ಹೂಗಳನ್ನು ಅಲ್ಲಿದ್ದ ಪೇಪರಿನ ಮೇಲೆ ಹಾಕಿದಳು.

"ಸದ್ಯ ಎಲ್ಲಾ ಹೋದ್ವೇನೋ.... ಮನೆ ನಿಶ್ಯಬ್ದವಾಗಿದೆ." ತನ್ನಲ್ಲೇ ಗೊಣಗಿಕೊಂಡಳು. ಇದ್ದಕ್ಕಿದ್ದಂತೆ ಏನೋ ನೆನಪಿಗೆ ಬಂದವಳಂತೆ, ಎದ್ದು ಮುಂದಿನ ರೂಮಿನ ಬಾಗಿಲನ್ನು ಸರಿಸಿ ಮಧುರ ಇದಾಳೋ ಇಲ್ಲವೋ ಎಂದು ನೋಡಿದಳು. ತಾಯಿ ತಂದುಕೊಟ್ಟಿದ್ದ ತಿಂಡಿಯನ್ನು ತಿನ್ನುತ್ತಿದ್ದ ಮಧುರ, ಬಾಯಿ ಮುಚ್ಚಿಕೊಂಡು ಅಜ್ಜಿಯನ್ನೇ ನೋಡಿದಳು.

"ಏನ್ಮಾಡ್ತಿದೀಯ? ತಿಂಡಿ ತಿಂತಿದೀಯಾ? ಏನ್ತಿಂಡಿ? ಉಪ್ಪಿಟ್ವಾ? ನಿಮ್ಮಮ್ಮನಿಗೆ ಬರೋದು ಇದೊಂದೇ. ನಿಮ್ಮಪ್ಪ ಊರಿಗೆ ಬಂದಿದಾನೆ. ಬಿಸಿಬಿಸಿಯಾಗಿ ದೋಸೇನೋ, ರೊಟ್ಟಿನೋ ಮಾಡ್ಬಾರ್ದಾ..." ಮಧುರ ನಿಧಾನವಾಗಿ, ಬಾಯಲ್ಲಿದ್ದುದನ್ನು ನುಂಗಿದಳು.

"ಅಜ್ಜೀ.... ಅಮ್ಮನ್ನ ಸುಮ್ನೇ ಅನ್ನಬೇಡಿ. ನಿಮ್ಮ ಮಗನಿಗೆ ನೀವೇ ತಿಂಡಿ ಮಾಡಿಕೊಡಿ."

"ಅಲಲೇ... ಸೊಗಸಾಗಿ ಮಾತಾಡ್ತಿ ಕಣೇ... ಸ್ನಾನ ಮಾಡ್ಕೊಂಡು ಬಂದು ನಿಮ್ಮಪ್ಪನಿಗೆ ಇಷ್ಟವಾದ ಅಡಿಗೇನೇ ಮಾಡ್ತೀನಿ. ನನ್ನ ಊಟ ಆಗೋವರೆಗೂ ನೀನು ರೂಮಿನಿಂದ ಹೊರಗೆ ಬರಕೂಡದು. ನಿನ್ನ ಧ್ವನಿ ಕೂಡಾ ನಂಗೆ ಕೇಳಿಸಬಾರ್ದು ತಿಳೀತಾ?..."

"ಇದನ್ನ ಹೇಳುಕ್ಕೆ ಬಂದ್ರಾ?"

"ಹೂಂ.... ನಿಮ್ಮಮ್ಮನಿಂಗೆ ಹೇಳುಲ್ಲ. ನಿಂಗೆ ಹೇಗೆ ತಿಳೀಬೇಕು.?"

"ಇಷ್ಟು ಮಡಿ ಯಾರ ಮನೇಲೂ ಮಾಡುಲ್ಲ. ನೀವೊಬ್ರೇ ಹೀಗಾಡೋದು."

"ಹೌದು. ನಾನು ಮಡಿ ಹೆಂಗ್ಸು. ಮಡೀನೇ ನಂಗೆ ಮುಖ್ಯ. ನನಗೆ ದೀಕ್ಷೆ ಆಗಿದೆ. ಮೈಲಿಗೆ ಏನಾದ್ರೂ ಬೆರೆಸಿದ್ರೋ... ದೇವರು ನಿಮ್ಮನ್ನು ಸುಮ್ಮನೇ ಬಿಡುಲ್ಲ. ಶಿಕ್ಷೆ ಕೊಡ್ತಾನೆ. ರೌರವ ನರಕಕ್ಕೆ ಹೋಗ್ತೀರಿ..." ಮಧುರ ಬೆಪ್ಪಾದಳು. ರಾಧಾ ಅತ್ತೆಯ ಹಿಂದೆ ಬಂದುನಿಂತಿದ್ದಳು.

"ಅದ್ಯಾಕತ್ತೆ ಹೀಗೆಲ್ಲಾ ಹೆದರಿಸ್ತೀರಿ! ಅವಳೇನು ಮಾಡಿದ್ಲು ಈಗ? ಅವಳ ಪಾಡಿಗೆ ಅವಳು ರೂಮಿನಲ್ಲಿ ಕೂತಿದಾಳೆ. ನಿಮ್ಮನ್ನು ಮುಟ್ಟಿದಳಾ? ಅಡಿಗೆ ಮನೆಗೆ ಬಂದ್ಲಾ. ನಿಮ್ಮ ಪೂಜೆಗೆ ಅಡ್ಡಿ ಬಂದ್ಲಾ...? ಛೆ.... ಎಂಥೋರಪ್ಪಾ..."

"ಹೌದು ಕಣೇ.... ನಾನು ಹಾಗೇನೇ... ನಾನು ಹೇಳ್ದೇ ಇದ್ರೆ ಈ ಮನೆ ಕುಲಗೆಟ್ಟು ಹೋಗುತ್ತೆ. ಎಲ್ಲಾ ಏಕವಾಗಿ ಹೋಗುತ್ತೆ. ನೀವುಗಳು ಮಾಡೋ ಅನ್ಯಾಯಕ್ಕೆ ನಾನ್ಯಾಕೆ ಕಷ್ಟ ಅನುಭವಿಸ್ಬೇಕು.?"

"ಅಂಥಾದ್ದೇನಾಗಿದೆ ಈಗ? ನನಗೂ ನನ್ನ ಮಕ್ಕಳಿಗೂ ಉಳಿಗಾಲವಿಲ್ಲ. ಈ ಮನೇಲಿ ರಾಧಾ ದಪ್ಪದನಿಯಲ್ಲಿ ನುಡಿದಳು.

"ನಿನ್ನ ಗಂಡನ್ನ ಕರೆದು ಅವನ ಕಿವಿಯಲ್ಲಿ ಹೇಳು. ನಾನು ನಿಮ್ಮನ್ನೆಲ್ಲಾ ಹುರಿದು ಮುಕ್ಕಿದೀನಿ ಅಂತ... ಸಾಕಾಯ್ತು ನಿಮ್ಮಗಳ ಸಹವಾಸ. ಏನು ಹೇಳಿದ್ರೂ ತಪ್ಪು. ಏನು ಕೇಳಿದ್ರೂ ತಪ್ಪು. ಅತ್ತೆ ತಲೆತಲೆ ಚಚ್ಚಿಕೊಂಡಾಗ, ರಾಧಾ ಪೆಚ್ಚಾದಳು. ಮಗಳಿಗೆ ಸುಮ್ಮನಿರುವಂತೆ ಹೇಳಿ, ತನ್ನ ಪಾಡಿಗೆ ತಾನು ಅಡಿಗೆ ಮನೆಯ ಕಡೆಗೆ ನಡೆದಳು.

"ನೀನು ಇದೇ ಬಟ್ಟೇಲಿ ಅಡಿಗೆ ಮನೆಗೆ ಹೋಗ್ಬೇಡ." ಹಿಂದಿನಿಂದ ಗೌರಮ್ಮ ಆದೇಶ ನೀಡಿದಳು. ರಾಧಾ ಹಾಗೇ ನಿಂತಳು. ಹಾಲಿನ ಕಿಟಕಿಯ ಬಳಿ ನಿಂತು ಮುಖಕ್ಷೌರ ಮಾಡಿಕೊಳ್ಳುತ್ತಿದ್ದ ಕೇಶವನಿಗೆ ಎಲ್ಲಾ ಕೇಳಿಸಿತ್ತು. ಇವೆಲ್ಲಾ ಆಗಾಗ್ಗೆ ನಡೆಯುವ ಮಾತಿನ ಚಕಮಕಿಗಳೇ. ಅದರಲ್ಲಿ ತಾನು ಬಾಯಿಹಾಕುವ ಮನಸ್ಸಾಗಿರಲಿಲ್ಲ. ತನಗೆ ಸಂಬಂಧಿಸಿದುದೇ ಅಲ್ಲಿ ಎಂದಿನಂತೆ ತನ್ನ ಕೆಲಸದಲ್ಲಿ ನಿರತನಾಗಿದ್ದ.

ಅಮ್ಮ ಯಾವಾಗಲೂ ಜೋರೇ. ತನ್ನ ಮಾತೇ ನಡೆಯಬೇಕೆನ್ನುವ ಆಸೆ. ತಾನು ಈ ಮನೆಗೆ ಹಿರಿಯಳು, ತನಗೆ ಎಲ್ಲರೂ ಮನ್ನಣೆ ಕೊಡಲಿ ಎನ್ನುವ ಹಂಬಲ. ಅದು ನಡೆಯದಿದ್ದಾಗ ಮನೆಯಲ್ಲಿ ಘರ್ಷಣೆ ಕಲಹ. ಅಪ್ಪನೊಂದಿಗೂ ಏನಾದರೂ ಕಾರಣದಿಂದ ಅಮ್ಮ ಜಗಳವಾಡುತ್ತಿದ್ದಳೆಂದು ಹಿರಿಯಕ್ಕ ಹೇಳಿದ್ದಳು.

ತನಗೆ ಅಪ್ಪನ ನೆನಪು ಸರಿಯಾಗಿ ಇಲ್ಲ. ಮಸುಕು ಮಸುಕಾಗಿದೆ. ಅಪ್ಪನ ಬಗ್ಗೆ ಅಮ್ಮ ಹೇಳಿಕೊಳ್ಳುವುದು ಕಡಿಮೆ. ಹೆಚ್ಚು ಆಸ್ತಿಪಾಸ್ತಿ ಏನೂ ಇರಲಿಲ್ಲ. ಸಮೀಪದ ಹಳ್ಳಿಯಲ್ಲಿದ್ದ ಗದ್ದೆಯಿಂದ ಅಲ್ಪಸ್ವಲ್ಪ ಆದಾಯ. ಅಮ್ಮ ಅವರಿವರ ಮನೆಯಲ್ಲಿ ಪುಡಿಗಳನ್ನು ಕುಟ್ಟಿಕೊಟ್ಟು, ಅಡಿಗೆ ಕೆಲಸ ಮಾಡಿ

ಸಂಪಾದಿಸುತ್ತಿದ್ದಳು. ಸೋದರ ಮಾವಂದಿರು ಸಾಕಷ್ಟು ಸಹಾಯ ಮಾಡಿದ್ದರು. ಆದರೂ ಅವರೊಂದಿಗೂ ಅಮ್ಮ ಜಗಳ ಆಡಿದ್ದಳು. ಚಿಕ್ಕಮಾವ, ಹಿರಿಯಕ್ಕನನ್ನು ಮದುವೆಯಾಗಿ, ತಮಗೆ ಮತ್ತೂ ಸಹಾಯಕನಾಗಿದ್ದ. ಮನೆಗೆ ಹಿರಿಮಗನಂತೆ ನಿಂತು, ಇನ್ನೊಬ್ಬ ಅಕ್ಕನಿಗೂ ಮದುವೆ ಮಾಡಿದ್ದ. ತನ್ನನ್ನು ಓದಿಸಿದ್ದ. ಸೋದರಮಾವನ ಋಣ ತನ್ನ ಮೇಲೆ ಸಾಕಷ್ಟಿದೆ. ಈಗ ತನಗೆ ಉದ್ಯೋಗವಿದೆ. ಸಂಪಾದನೆ ಇದೆ... ಮದುವೆ ಆಗಿದೆ. ಮಕ್ಕಳಾಗಿದಾರೆ. ಗಂಡು ಮಕ್ಕಳಿಲ್ಲ ಎನ್ನುವ ಕೊರತೆ ಏನೋ ಇದೆ. ಆದರೇನು ಮಾಡುವುದು? ಮಧುರ ಚೊಚ್ಚಿಲ ಮಗುವಾಗಿ ಹುಟ್ಟಿದಾಗ ಸಂಭ್ರಮದ ವಾತಾವರಣ. ನಮ್ಮ ಮನೆಯ ಮೊದಲ ಮಗು. ಹೆಚ್ಚು ಗಲಾಟೆ ರಂಪ ಯಾವುದೂ ಇರಲಿಲ್ಲ. ಹೊಟ್ಟೆ ಹಸಿದಾಗ ಮಾತ್ರ ಅಳುತ್ತಿದ್ದಳು. ಆ ಅಳುವಿನಲ್ಲೂ ಏನೋ ಮಧುರತೆ. ನಾಮಕರಣ ಸಮಯದಲ್ಲಿ 'ಮಧುರ' ಎಂದೇ ಹೆಸರನ್ನಿಟ್ಟೆವು. ಈಗ ಅವಳು ಬೆಳೆದು ಯುವತಿಯಾಗಿದ್ದಾಳೆ. ಬಾಲ್ಯಾವಸ್ಥೆಯಿಂದ ಕೌಮಾರಾವಸ್ಥೆಗೆ ಅಡಿ ಇಟ್ಟಿದಾಳೆ. ಓಹ್... ನಮ್ಮ ಮಧು, ಮದುವೆಗೆ ಸಿದ್ಧವಾಗುತ್ತಿರುವ ವಧುವಾಗುತ್ತಿದ್ದಾಳೆ. ಮಕ್ಕಳು ಎಷ್ಟು ಬೇಗ ಬೇಗ ಬೆಳೆದು ಬಿಡುತ್ತಿದಾರೆ ಅಂತ ಅನ್ನಿಸ್ತಿದೆ. ವರ್ಷಗಳು ಬಹಳ ಬೇಗ ಬೇಗ ಉರುಳುತ್ತಿದೆ. ನಾನು ನನ್ನ ಯೌವನದ ದಿನಗಳನ್ನು ಕಳೆದುಕೊಂಡು ಮಧ್ಯ ವಯಸ್ಕನಾಗುತ್ತಿದ್ದೇನೆಯೆ! ಯಾಕೋ ಆ ಅನಿಸಿಕೆ ಅಹಿತವಾಗಿ ತೋರಿತು. ಗಡ್ಡದ ಕೂದಲನ್ನು ಕೆರೆಯುತ್ತಿದ್ದ ಬ್ಲೇಡ್ ಚರ್ಮವನ್ನು ಗೀರಿತು... ಹ್ಞಾಂ....ಎಂದ ರಕ್ತ ಒಸರುತ್ತಿತ್ತು.

"ರಾಧಾ.... ರಾಧಾ.... ಬೇಗ ಬಾ" ಕೂಗು ಹಾಕಿದ.

"ಏನಾಯ್ತು?.... ಅಲ್ಲಿಂದ್ಲೇ ಅವಳೂ ಕೇಳಿದಳು.

"ರಕ್ತ... ರಕ್ತ..." ಕೆನ್ನೆ ಕಟ್ ಆಯ್ತು." ಸೆರಗಿಗೆ ಕೈ ಒರೆಸುತ್ತಾ ಬಂದು, ಟಾಲ್ಕಂ ಪೌಡರನ್ನು ಕಿಟಕಿಯಲ್ಲಿ ಇಟ್ಟಳು. "ಪೌಡರನ್ನು ಹಚ್ಕೋಳ್ಳೋಕೆ ನಾನೇನು ಹೆಂಗ್ಸೇ ಬೇಡ ತಗೊಂಡು ಹೋಗು."

"ರಕ್ತ ಬರೋದು ನಿಲ್ಲುತ್ತೆ. ಹಿಡೀರಿ..." ಅವನ ಎಡಗೈಯ ಅಂಗೈ ಮೇಲೆ ಪೌಡರನ್ನು ಸುರಿದಳು.

"ನೀನೇ ಸ್ವಲ್ಪ ಹಚ್ಚೇಯಾ ರಾಧಾ..." ಮುಖವನ್ನು ಅವಳ ಮುಂದೆ ಒಡ್ಡಿದ.

"ನಂದು ಸ್ನಾನ ಆಗಿದೆ.... ನಾನು ನಿಮ್ಮನ್ನು ಮುಟ್ಟುಲ್ಲ. ಕೆನ್ನೆ ನಿಮ್ಮದು ಚರ್ಮ, ರಕ್ತ ನಿಮ್ಮದು ಹೋಗಿ ತಣ್ಣೀರ್ನಲ್ಲಿ ಮುಖ ತೊಳೀರಿ ಎಲ್ಲಾ ಸರಿ ಹೋಗುತ್ತೆ."

"ನನ್ನ ಕೆನ್ನೆ ನಿಂದು.... ನಿನ್ನೆ ಕೆನ್ನೆ ನಂದು..." ಅವಳ ಕೆನ್ನೆಯನ್ನು ತೋರು ಬೆರಳಿಂದ ತಟ್ಟಿದ. ರಾಧಾ ಹಿಂದಕ್ಕೆ ವಾಲಿದಳು.

"ನೀವೊಬ್ರು. ಹೊತ್ತಿಲ್ಲ ಗೊತ್ತಿಲ್ಲ. ಯಾರಾದ್ರೂ ನೋಡಿದ್ರೆ ಯಾಕೋ ಅತಿಯಾಯ್ತು ನಿಮ್ದು."

"ಅಮ್ಮ ಅಡಿಗೆ ಮನೇಲಿದಾಳೆ, ಮಧು, ಮುಂದಿನ ರೂಂನಲ್ಲಿದ್ದಾಳೆ. ಚಿಕ್ಕೋರಿಬ್ರೂ ಸ್ಕೂಲ್ಗೆ ಹೋಗಿದಾರೆ. ಇನ್ಯಾರಿದಾರೆ ಈ ಮನೇಲಿ!...."

"ಆ ಹುಡ್ಗ? ಆ ಹುಡ್ಗನ್ನ ಕರ್ಕೊಂಡು ಬಂದೋರು ನೀವೇ ಮರತೇಬಿಟ್ರಾ?..."

"ಅವನೆಲ್ಲೋ ಮಹಡಿ ಮೇಲಿನ ರೂಂನಲ್ಲಿದಾನೆ..." ಅವಳ ಮುಖವನ್ನು ಮೆಚ್ಚುಗೆಯಿಂದ ನೋಡಿ, ಗಲ್ಲವನ್ನು ಹಿಡಿದೆತ್ತಿದ. ಅವತ್ತು ಹೇಗಿದ್ಯೋ. ಈಗ್ಲೂ ಹಾಗೇ ಇದೀಯ ರಾಧಾ... ಯಾವಾಗ್ಲೂ ನೀನು ಹೀಗೇ ಇರ್ಬೇಕು."

"ಅದೇನದು? ಇದ್ದಕ್ಕಿದ್ದ ಹಾಗೆ ಈ ಪ್ರೇಮ ಸಲ್ಲಾಪ. ನಮ್ಗೂ ವಯಸ್ಸಾಗ್ತಿದೆ. ನಾವು ಚಿಕ್ಕವರಲ್ಲ. ಮಕ್ಕಳು ಬೆಳೆದು ದೊಡ್ಡವರಾಗಿದಾರೆ."

"ಮಕ್ಕಳು ಬೆಳೆದರೂ, ನಮಗೆ ಚಿಕ್ಕವರೇ. ನಿನಗೆ ಇನ್ನು ಎರಡು ಮಕ್ಕಳನ್ನು ಹೆರುವಷ್ಟು ಯೌವನ ಇದೆ."

"ಮಂದಾರ ಹುಟ್ಟಿದಾಗಲೇ ನಮಗೆ ಇನ್ನೂ ಮಕ್ಕಳು ಬೇಡ ಅಂತ ನಿರ್ಧರಿಸಿದ್ದಾಗಿದೆ. ನಿಮ್ಮ ಈ ಮರುಳು ಮಾತುಗಳಿಂದ ಉಪಯೋಗವಿಲ್ಲ. ಬಿಡಿ ನನ್ನನ್ನ ಸ್ನಾನ ಮಾಡಿ ತಿಂಡಿ ತಿಂದು ಆಫಿಸಿಗೆ ಹೋಗಿ. ನನಗಿನ್ನು ಬೇಕಾದಷ್ಟು ಕೆಲಸವಿದೆ." ಅವನನ್ನು ಹಿಂದಕ್ಕೆ ತಳ್ಳಿದಳು. ಅವನು ಅತ್ತಿತ್ತ ನೋಡಿ, ಕಳ್ಳನಂತೆ, ಸರ್ರನೆ ಅವಳ ಕೆನ್ನೆಯನ್ನು ಚುಂಬಿಸಿದ. "ಛೀ..." ಅವಳು ಕೆನ್ನೆಯನ್ನು ಉಜ್ಜಿಕೊಂಡಳು ಕೆನ್ನೆ ಕೆಂಪಾಗಿತ್ತು. ಅಲ್ಲಿಂದ ರೂಮಿಗೆ ಓಡಿದ್ದಳು. ರೂಮಿನ ಬಾಗಿಲ ಬಳಿ ನಿಂತು ನುಡಿದ. "ನಿನ್ನನ್ನ ರಾತ್ರಿ ವಿಚಾರಿಸಿಕೊಳ್ತೀನಿ." ಅವಳು ಇತ್ತ ತಿರುಗಲಿಲ್ಲ. ಇವರಿಬ್ಬರ, ಅಸ್ಪಷ್ಟವಾದ ಸಲ್ಲಾಪದ ಮಾತುಗಳು ಗೌರಮ್ಮನ ಕಿವಿಯನ್ನು ತಲುಪಿದ್ದವು.

"ಥೂ ಹೊತ್ತಿಲ್ಲ, ಗೊತ್ತಿಲ್ಲ. ಈ ಮುಂಡೇವು ಯಾಕೆ ಹೀಗಾಡುತ್ವೆ.! ಮಗಳು ನೆರೆದು ನಿಂತಿದಾಳೆ ಅನ್ನೋ ಜ್ಞಾನವಾದ್ರೂ ಬೇಡ್ವೆ? ಅವನಂತೂ ಗಂಡಸು, ಮನಸ್ಸು ಚಂಚಲ, ಇವಳಿಗಾದ್ರೂ ತಿಳುವಳಿಕೆ ಬೇಡ್ವೆ! ವೈಯಾರವಾಗಿ ಅವನ ಎದುರಿಗೆ ಸೆರಗು ಬೀಸಿ ಓಡಾಡೋದು. ಅವನ ಮನ

ತಕತಕ ಅಂತ ಕುಣಿಯುತ್ತೆ. ಗಂಡ ಹೆಂಡ್ತಿ ಸರಸ ಹೆಚ್ಚಾದ್ರೇ ವರ್ಷದೊಳಗೆ ಇನ್ನೊಂದು ಕೂಸು ಹುಟ್ಟಿದ್ರೂ ಹುಟ್ಟಬಹುದು. ಈ ಸಾರಿಯಾದ್ರೂ ಗಂಡು ಮಗು ಹುಟ್ಟಲಿ ದೇವ್ರೇ... ವಂಶ ಮುಂದುವರೆಯೋಕೆ ಒಂದು ಗಂಡು ಸಂತಾನ ಬೇಡ್ವೇ.... ಈ ಹೆಣ್ಣು ಮಕ್ಕಳು ಮದುವೆ ಮಾಡ್ಕೊಂಡು ಗಂಡಂದಿರ ಮನೆಗೆ ಹೊರಟುಹೋಗುತ್ವೆ. ನನ್ನ ಮಗ ಅಳಿಯಂದ್ರ ಮನೆಗಳಲ್ಲಿ ಇರುವಂತಾಗಬಾರದು." ಗೌರಮ್ಮನ ಯೋಚನಾಲಹರಿ ಎತ್ತೆತ್ತಲಾಗೋ ಹರಿದಿತ್ತು.

"ಅಮ್ಮಾ... ಅಮ್ಮಾ" ಪಿಸುದನಿಯಲ್ಲಿ ಮಧು ಕರೆದಿದ್ದಳು. ತಾಯಿ ಬರದಿದ್ದಾಗ ಮಧುರ ಜೋರಾಗಿಯೇ ಅಮ್ಮ ಅಂತ ಕಿರುಚಿದ್ದಳು. ಹಿತ್ತಲಿನಲ್ಲಿದ್ದ ರಾಧಾ ತವಕದಿಂದ ಬಂದಿದ್ದಳು.

"ಏನೇ ಯಾಕೆ ಹೀಗೆ ಕಿರುಚ್ಕೊಂಡೆ? ಅಜ್ಜಿಗೆ ಕೇಳ್ಸಿದ್ರೆ?"

"ಅಜ್ಜಿಗೆ ಕೇಳ್ಸಿದ್ದೂ ಆಯ್ತು. ಅಜ್ಜಿಯ ಮಡಿಯನ್ನು ಕೆಡಿಸಿದ್ದೂ ಬಂತು. ಬೇಕೂಂತ಼್್ಲೆ ಮಾಡುತ್ವೆ." ಗೌರಮ್ಮ ಒಳಬಾಗಿಲಲ್ಲಿಯೇ ನಿಂತು ಜೋರಾಗಿ ನುಡಿದಳು.

"ನೀವು ಇಲ್ಲೇ ಇದ್ರಲ್ಲ ಏನೂಂತ ಕೇಳ್ಬಾರ್ದಾಗಿತ್ತಾ?" ರಾಧ ಗಂಡನ ಮೇಲೆ ಸಿಡುಕಿದಳು.

"ಅವಳು ಕರೆದಿದ್ದು ನಿನ್ನನ್ನ ಅದಕ್ಕೇ ಸುಮ್ಮನಿದ್ದೆ" ಅವನು ಶಾಂತವಾಗಿ ಹೇಳಿದಾಗ, ಅವಳು ತಲೆ ಚಚ್ಚಿಕೊಂಡಳು.

"ಇಲ್ಲಿ ಒಳಗೆ ಬಾ ಇಲ್ಲಿ." ಮಧುರ ಕೈ ಸಂಜ್ಞೆಯಿಂದ ಕರೆದಳು. ಇಲ್ಲಿ ಬಾತ್‌ರೂಂನಲ್ಲಿ ನೀರು ಬರ್ತಿಲ್ಲ. ನಾನೇನ್ಮಾಡ್ಲಿ?"

"ಮೇಲೆ, ನಲ್ಲಿ ಬಿಟ್ಟರೆ ಇಲ್ಲಿ ನೀರು ಬರಲ್ಲ. ತಡಿ ನಿಮ್ಮಪ್ಪಂಗೆ ಹೇಳ್ತೀನಿ ಸರಿ ಮಾಡಿಸ್ಲಿ. ತಡಿ ಒಂದು ಬಕೆಟ್ ನೀರು ತಂದುಕೊಡ್ತೀನಿ."

"ಏನೂ ಬೇಡ.... ಅವನಿಗೆ ಅಲ್ಲಿ, ನಲ್ಲಿ ಬಿಡಬೇಡಾಂತ ಹೇಳು. ಅವನ್ಯಾರು ತನಗೆ ತೋಚಿದ ಹಾಗೆ ಮಾಡುಕ್ಕೆ."

"ಷ್. ಮೆಲ್ಲಗೆ ಅಪ್ಪಂಗೆ ಕೇಳಿಸುತ್ತೆ..."

"ಕೇಳಿದರೆ ಕೇಳಲಿ ಬಿಡಮ್ಮ. ನನ್ನ ಕಷ್ಟ ನನಗೆ. ನಿಂಗೂ ಅರ್ಥ ಆಗುಲ್ಲ ಅಂತಂದ್ರೆ ನಾನೇ ಅವನಿಗೆ ಹೇಳಿಬಿಡ್ತೀನಿ ಅಷ್ಟೇ."

"ಸುಮ್ಮನಿರು. ನೀನು ಹೇಳೋದೇನೂ ಬೇಡ. ನಾನು ಯಾವು ಯಾವುದಕ್ಕೆ ಒದ್ದಾಡಲಿ! ಅಜ್ಜಿ ಮೈಲಿಗೆ ಆಯ್ತು ಅಂತ ಮತ್ತೆ ಸ್ನಾನಕ್ಕೆ ಹೋಗ್ತಾರೇನೋ... ಅಲ್ಲಿಂದ್ಲೇ ಕರೀತಾರೆ ನೋಡ್ತಿರು."

"ಇದೆಂಥದಮ್ಮಾ.... ನಾನೇನು ಅವರನ್ನೂ ಮುಟ್ಟಿದ್ನಾ? ಮೈಲಿಗೆ ಯಾಕಾಗುತ್ತೆ? ಯಾರ ಮನೇಲೂ ಇಷ್ಟು ಮಡಿ ಮಾಡುಲ್ಲ."

"ಅಜ್ಜಿ ಹಳೇ ಕಾಲದವರು, ಮಡಿ ಜಾಸ್ತಿ. ನಾನು ಅನುಸರಿಸಿಕೊಂಡು ಹೋಗ್ತಿಲ್ವಾ!"

"ನಾನು ನೀನಲ್ಲ.... ಅಲ್ಲದೇ ನಾನು ಈ ಮನೆಯ ಮೊಮ್ಮಗಳು ಚಿಕ್ಕವಳು... ನಂಗೆ ಇದನ್ನೆಲ್ಲಾ ಅನುಸರಿಸಿಕೊಂಡು ಹೋಗುಕ್ಕೆ ಕಷ್ಟ ಆಗುತ್ತೆ. ನೀನೇ ಹೇಳ್ತಿದ್ದೆ. ಮೊದಮೊದಲು, ನೀನು ಈ ಸಮಯದಲ್ಲಿ ನಿಮ್ಮಮ್ಮನ ಮನೆಗೆ ಹೋಗ್ತಿದ್ದೆ ಅಂತ."

"ಒಂದೇ ಸಲ ಹೋಗಿದ್ದು... ಈಗ ಮಾತು ಸಾಕು. ನಿಂಗೇನು ಬೇಕು ಹೇಳು ತಂದ್ಕೊಡ್ತೀನಿ. ಬಿಸಿ ನೀರು ತಂದು ಕೊಡ್ಲಾ? ಸ್ನಾನ ಮಾಡ್ತೀಯ.

"ಹುಂ. ನಾನು ಸ್ನಾನ ಮಾಡ್ಲೇ ಬೇಕು. ಒಣಗಿದ ಬಟ್ಟೆ, ಸೋಪು ಎಲ್ಲಾ ತಂದ್ಕೊಡು. ನೀನು ಇಲ್ಲೇ ಇರು. ಓಡಿ ಓಡಿ ಎಲ್ಲೋ ಹೋಗ್ಬೇಡ" ಮಧುರ ನಸುನಗುತ್ತಾ ನುಡಿದಾಗ ರಾಧಾ ಗಂಭೀರವಾದಳು. ಮಗಳ ಮುಖವನ್ನೇ ದಿಟ್ಟಿಸಿದಳು. ಅರೆ ಬಿರಿದ ಮೊಗ್ಗಿನಂತೆ ನಳನಳಿಸುತ್ತಾಳೆ ಮಗಳು. ತನ್ನ ದೃಷ್ಟಿಯೇ ತಾಗೀತು. ನಂದಿನಿ ಹೇಳಿದ್ದ ಮಾತುಗಳು ನೆನಪಾದವು.

ಮೊದಲು ಶಾಸ್ತ್ರಿಗಳ ಬಳಿಗೆ ಹೋಗಿ ಬರ್ಬೇಕು. ರಜಸ್ವಲೆಯಾದ ದಿನ, ತಿಥಿ ನಕ್ಷತ್ರಗಳನ್ನು ನೋಡಿ, ಗಳಿಗೆ, ಗ್ರಹಗತಿಯೆಲ್ಲಾ ಹೇಗಿದೆ ಅಂತ ಹೇಳ್ತಾರಂತೆ. ಶಾಂತಿ ಮಾಡಿಸಬೇಕಾ ಬೇಡವಾ ಅಂತಲೂ ಹೇಳ್ತಾರಂತೆ.

"ಏನಮ್ಮಾ ಏನಾಯ್ತು ನಿಂಗೆ? ಮಧುರ ಎಚ್ಚರಿಸಿದಳು.

"ಏನಿಲ್ಲ. ಏನೋ ಯೋಚಿಸ್ತಿದ್ದೆ." ಎನ್ನುತ್ತಾ ಬಚ್ಚಲು ಮನೆಯ ಕಡೆಗೆ ಬಂದಳು. ಅತ್ತೆ ಮತ್ತೆ ಸ್ನಾನ ಮಾಡಿ, ಒದ್ದೆ ಸೀರೆಯನ್ನುಟ್ಟು ಗೊಣಗುತ್ತಾ ಅಡಿಗೆ ಮನೆಯ ಕೆಲಸದಲ್ಲಿ ತೊಡಗಿದ್ದಳು.

"ರಾಧಾ ನಾನು ಸ್ನಾನಕ್ಕೆ ಹೋಗ್ತಾ! ಟವೆಲ್ಲು ಬಟ್ಟೆಗಳನ್ನು ತಂದು ಕೊಡ್ತೀಯಾ! ಕೇಶವ ಕೇಳಿದ.

"ಕಾದ ನೀರು ಇದೆಯೋ ಇಲ್ವೋ ನೋಡ್ತೀನಿ.... ಮಧುರಂಗೆ ಒಂದು ಬಕೆಟ್ ಬಿಸಿ ನೀರು ಕೊಟ್ಟುಬಿಡ್ತೀನಿ. ಆಮೇಲೆ ಮಾಡೋರಂತೆ. ಇನ್ನು ರಾಜನ ಸ್ನಾನ ಆಗಿಲ್ಲ."

"ಅಂದ್ಹಾಗೇ ಅವನೆಲ್ಲಿ? ಅವನನ್ನು ಕರ್ಕೊಂಡು ಕಾಲೇಜಿನ ಬಳಿಗೆ ಹೋಗಿ ಬರ್ಬೇಕು. ಬ್ಯಾಂಕಿಗೆ ಹೋಗಿ ಬರ್ಬೇಕು. ರಾಧಾ ಹದವಾಗಿದ್ದ ಬಿಸಿನೀರನ್ನು ಬಕೆಟ್‌ಗೆ ತೋಡಿದಳು.

"ನೀರಿನ ಬಕೆಟ್‌ನ ಸ್ವಲ್ಪ ಆ ಬಾತ್‌ರೂಂಗೆ ತಂದುಕೊಡ್ತೀರಾ!"

"ಹುಂ. ನೀನು ಇತ್ಲಾಗೆ ಬಾ..." ಅವನು ಬಕೆಟಿನ್ನು ಎತ್ತಿಕೊಂಡು ಊಟದ ಮನೆ ದಾಟುವಷ್ಟರಲ್ಲಿ ರಾಜ ಎದುರಿಗೆ ಬಂದ.

"ಇಲ್ಲಿ ಕೊಡಿ ಸಾರ್.... ನಾನು ತಂದು ಕೊಡ್ತೀನಿ. ಎಲ್ಲಿಡಬೇಕು?"

"ಇರಲಿ ಬಿಡಯ್ಯ."

"ಇಲ್ಲ, ಇಲ್ಲಿ, ಕೊಡಿ ಸಾರ್. ಬಲವಂತದಿಂದ ಬಕೆಟನ್ನು ಎತ್ತಿಕೊಂಡ.

"ರೂಂನಲ್ಲಿ ಬಂದು ಬಾತ್‌ರೂಂ ಇದೆ. ಅಲ್ಲಿಗೆ ತಗೊಂಡ್ಹೋಗಿ ಇಡಬೇಕು." ಕೇಶವ, ಸಾಕಾದವನಂತೆ ಅಲ್ಲಿಯೇ ನಿಂತ. ರಾಜ, ಮುಂದಿದ್ದ ರೂಮಿನ ಬಾಗಿಲನ್ನು ಸರಿಸಿ ಒಳಗೆ ಅಡಿ ಇಡುವ ಮುನ್ನ ಅತ್ತಿತ್ತ ಕಣ್ಣು ಹಾಯಿಸಿದ. ಕಿಟಕಿಯ ಬಳಿ ನಿಂತಿದ್ದ ಮಧುರ ಹಿಂತಿರುಗಿದಳು. ಸಂಕೋಚದಿಂದ ಏನು ಅನ್ನುವಂತೆ ನೋಡಿದಳು.

"ನೀರು... ಬಿಸಿ ನೀರು. ಬಾತ್‌ರೂಂನಲ್ಲಿ ಇಡ್ತೀನಿ" ಅವನು ಎರಡು ಹೆಜ್ಜೆ ಮುಂದೆ ಬಂದ.

"ಇಲ್ಲೇ ಇಡಿ. ನಾನು ತಗೊಂಡು ಹೋಗ್ತೀನಿ..." ಕಷ್ಟದಿಂದ ನುಡಿದಳು.

"ಪರವಾಗಿಲ್ಲ.... ಎಲ್ಲಿಡಬೇಕು ಹೇಳಿ."

"ಅಲ್ಲಿ..." ಬಚ್ಚಲ ಮನೆಯ ಕಡೆ ಬೆರಳು ತೋರಿದಳು. ಅವನು ಬಕೆಟನ್ನು ಅಲ್ಲಿಟ್ಟು ತನ್ನ ಪಾಡಿಗೆ ತಾನು ಹೊರಟುಹೋದ. ಅವನು ರೂಮಿನೊಳಗೆ ಅತ್ತಿತ್ತ ನೋಡಲಿಲ್ಲವೆಂಬ ಸಮಾಧಾನದಿಂದ ಮಧುರ ಹಾಯಾಗಿ ಉಸಿರಾಡಿದಳು. ತಾಯಿ ಬಟ್ಟೆಗಳನ್ನು ಕೊಡಲು ಬಂದಾಗ, ರೇಗಿದಳು.

"ಅವನ ಹತ್ರ ಯಾಕಮ್ಮ ಬಿಸಿನೀರನ್ನ ಕಳಿಸ್ದೆ? ಅವನು ರೂಂನೊಳಗೆ ಬಂದ. ನಂಗೆ ಎಷ್ಟು ನಾಚ್ಕೆ ಆಯ್ತು ಗೊತ್ತಾ?"

"ನಿಮ್ಮಪ್ಪನ ಕೈಲಿ, ಕೊಟ್ಟು ಕಳಿಸಿದ್ನಲ್ಲ. ಅವನು ಹೇಗೆ ತಂದ... ಹೋಗ್ಲಿ ಬಿಡು. ನೀನು ಸ್ನಾನ ಮಾಡು. ರೂಂ ಬಾಗಿಲನ್ನ ಭದ್ರವಾಗಿ ಹಾಕ್ಕೋ." ಮರೆಯದೇ ಹೇಳಿದಳು. ಬಚ್ಚಲ ಮನೆಯ ಬಾಗಿಲಲ್ಲಿ ಗಂಡನೊಡನೆ ಮಾತನಾಡುತ್ತಿದ್ದ ರಾಜನನ್ನು ಕಂಡಳು.

"ಅತ್ತೇ ಏನು ತರಕಾರಿ ಹೆಚ್ಚು ಕೊಡ್ಲಿ?. ಕಾಯಿ ಒಡೆದು ನೈವೇದ್ಯ ಮಾಡಾಗಿದ್ರೆ ಇತ್ತ ಕೊಡಿ. ತುರಿದು ಕೊಡ್ತೀನಿ."

"ಈಗ ಬಿಡುವಾಯ್ತಾ ನಿಂಗೆ.... ಒದ್ದೆ ಸೀರೆ ಉಟ್ಟು ಚಳಿಯಾಗ್ತಿದೆ. ನೀನೇ ಮಡಿ ಸೀರೆ ಉಟ್ಕೊಂಡು ಅಡಿಗೆ ಮಾಡು. ನಾನು ಮಡಿಸೀರೆ ಒಣಗಿಸಿಕೊಂಡು ಊಟ ಮಾಡ್ತೀನಿ." ಎನ್ನುತ್ತಾ ತನಗಾಗಿ ಮಾಡಿಟ್ಟುಕೊಂಡಿದ್ದ ಬಿಸಿಬಿಸಿ ಕಾಫಿಯನ್ನು ಹೀರಿದಳು. "ತಗೋ ನೀನೂ ಕುಡಿ." ಸೊಸೆಗೂ ಧಾರಾಳವಾಗಿ ಹಾಕಿಕೊಟ್ಟಳು.

"ಸರಿ, ನೀವು ಇತ್ಲಾಗೆ ಬನ್ನಿ....

'ನೀನು, ನಿನ್ನ ಮಗಳು ಏಕ ಸೋಕ ಮಾಡ್ಕೊಂಡಿಲ್ಲ ತಾನೇ. ಏನಾದರಾಗ್ಲೀ.... ಅವಳಿಗೆ ನೀರಾದ ಮೇಲೆ, ಪುಣ್ಯಾಹ ಮಾಡಿಸ್ಲೇಬೇಕು. ಪುರೋಹಿತರಿಗೆ ಹೇಳಿ ಬರ್ಬೇಕು. ಕೇಶವಂಗೆ ಹೇಳು..." ಅತ್ತೆಯ ಮಾತಿಗೆ ಸುಮ್ಮನೆ ಹೂಂಗುಟ್ಟಿದಳು. ಅತ್ತೆ ಹೊರಬಂದಳು. ರಾಧಾ ಅಡಿಗೆ ಮನೆ ಸೇರಿಕೊಂಡಳು.

"ರಾಧಾ... ರಾಧಾ..." ಸ್ನಾನದ ಮನೆಯಿಂದ ಹೊರಬರುತ್ತಿದ್ದಂತೇ ಕೇಶವ ಕೂಗು ಹಾಕಿದ.

"ನಿನ್ನ ಹೆಂಡ್ತಿ ಅಡ್ಗೆ ಮಾಡ್ತಿದಾಳೆ. ಏನ್ಬೇಕು" ಸೀರೆ ಒಣಹಾಕುತ್ತಿದ್ದ ತಾಯಿ ಕೇಳಿದಳು.

"ನೀನು ಸ್ನಾನ ಮಾಡಿ ಬಾ... ರಾಜ. ತಿಂಡಿ ತಿಂದು ನಿನ್ನ ಕಾಲೇಜಿನ ಕಡೆ ಹೋಗಿ ಬರೋಣ."

"ನನ್ನ ಸ್ನಾನ ಆಗ್ಲೇ ಆಯ್ತು ಸಾರ್...

"ತಣ್ಣೀರಲ್ಲೇ ಮಾಡಿದ್ಯಾ?

"ನಂಗೆ ಅದೇ ಅಭ್ಯಾಸ ಸಾರ್."

"ಆ ಅಭ್ಯಾಸ ಒಳ್ಳೇದೆ. ಆದರೆ ಸಂಕೋಚಬೇಡ. ನಮ್ಮ ಮನೇಲಿ ಸದಾ ಬಿಸಿ ನೀರು ಇರುತ್ತೆ. ರಾಧಾ, ನಮ್ಮಿಬ್ರಿಗೂ ತಿಂಡಿಕೊಡ್ತೀಯಾ?"

"ನಾನು ಮಡಿಲಿದೀನಿ. ಅಡಿಗೆಗೆ ಹೊತ್ತಾಗುತ್ತೆ. ನೀವೇ ಹಾಕ್ಕೊಳಿ... ಹಾಗೇ, ನಿಮ್ಮ ಮಗಳಿಗೂ ಹಾಕ್ಕೊಡಿ. ಅದೂ ಏನೂ ತಿಂದಿಲ್ಲ. ಉಪವಾಸ ಕೂತಿದೆ."

"ನಾನೂ ಏನೂ ತಿಂದಿಲ್ಲ. ಈಗ ಒಂದು ಲೋಟ ಕಾಫಿ ಬಸ್ದುಕೊಂಡೆ" ಗೌರಮ್ಮ ಮಗನಿಗೆ ಹೇಳಿದಳು.

"ನೀನು ಎಂದು ತಿಂಡಿ ತಿಂದಿದೀಯ ಹೇಳು.... ರಾಜಾ... ಅಲ್ಲಿ ತಿಂಡಿ ತಟ್ಟೆಗಳಿವೆ ತೊಳ್ಕೊಂಡು ತಗೊಂಡು ಬಾ..."

"ಅಂದ್ಹಾಗೇ ಈ ಹುಡ್ಗ ಯಾರು?.... ನೆನ್ನೆ ರಾತ್ರಿಯಿಂದ ಕೇಳೋಣಾಂತ್ಲೇ ಅಂದುಕೊಂಡಿದ್ದೆ....

"ನನ್ನ ಸ್ನೇಹಿತರ ಮನೆ ಹುಡುಗ. ಸದ್ಯಕ್ಕೆ ಇಲ್ಲಿರ್ತಾನೆ. ಈ ಊರಿನ ಇಂಜಿನಿಯರಿಂಗ್ ಕಾಲೇಜ್ನಲ್ಲಿ ಇವನಿಗೆ ಸೀಟು ಸಿಕ್ಕಿದೆ.

"ಹೆಸರೇನು? ರಾಜ ಅಂತ್ಲಾ?"

"ಮನೋಹರ ಅಂತ... ರಾಜ ಅಡ್ಡ ಹೆಸರು."

"ಮುಂಜಿ ಆಗಿದ್ಯಾ?"

"ಹುಂ. ಮುಂಜಿ ಆಗಿದೆಯಂತೆ." ರಾಧಾ ಒಳಗ್ನಿಂದ ಉತ್ತರಿಸಿದಳು. ಗೌರಮ್ಮ ಹುಬ್ಬೇರಿಸಿದಳು. ಕೇಶವ ಎರಡೂ ತಟ್ಟೆಗಳಿಗೂ ತಿಂಡಿಯನ್ನು ಹಾಕಿಟ್ಟ. ಅಲ್ಲಿ ಮೊಸರಿದೆ ತಗೋ... ಹಾಗೇ ಇನ್ನೊಂದು ತಟ್ಟೆ ತಗೊಂಡು ಬಾ. ಉಳಿದ ಉಪ್ಪಿಟ್ಟನ್ನ ಹಾಕು. ನಾನು ಇದನ್ನು ಮಧುರಾಗೆ ಕೊಟ್ಟುಬರ್ತೀನಿ."

"ನೀವು ತಿಂಡಿ ತಗೊಳ್ಳಿ ಸಾರ್.... ನಾನು ಕೊಟ್ಟು ಬರ್ತೀನಿ..." ರಾಜ ತಟ್ಟೆಯನ್ನೆತ್ತಿಕೊಂಡ. ಕೇಶವ ತಡೆಯಲಿಲ್ಲ. ತನ್ನ ತಟ್ಟೆಯನ್ನೆತ್ತಿಕೊಂಡು ತಿನ್ನಲು ತೊಡಗಿದ.

"ರಾಜಾ, ಬಾಗಿಲನ್ನು ಬೆರಳಿನಿಂದ ಮೆಲ್ಲಗೆ ಬಡಿದ. ಮಧುರ ಬಾಗಿಲನ್ನು ತೆರೆದಳು. ಎದುರಿಗೆ ರಾಜ, ಅವನ ಕೈಯಲ್ಲಿ ತಿಂಡಿಯ ತಟ್ಟೆ....

"ಎಲ್ಲಿಡಲಿ?..." ಅವಳನ್ನೇ ನೋಡುತ್ತಾ ಕೇಳಿದ. ಅವಳ ಮುಖ ಕೆಂಪಾಯಿತು. 'ಘಂ' ಎನ್ನುವ ಸೋಪಿನ ವಾಸನೆಯೋ, ಪೌಡರಿನ ವಾಸನೆಯೋ ರೂಮೆಲ್ಲಾ ಹರಡಿತ್ತು.

"ಇಲ್ಲೇ ಇಡಿ." ಕೆಳಗಿನ ಧ್ವನಿಯಲ್ಲಿ ಹೇಳಿದಳು. ಅವನು ನೆಲದ ಮೇಲೆ ತಟ್ಟೆಯನ್ನಿಟ್ಟ.

"ಮೊಸರು ಬೇಕಾ?"

"ಹುಂ. ಮೊಸರಿಲ್ದೇ ಹೇಗೆ ತಿನ್ನೋದು!....

"ಸರಿ ತರ್ತೀನಿ" ಅವನು ಮೊಸರಿನ ಪಾತ್ರೆಯನ್ನು ಎತ್ತಿಕೊಂಡಾಗ ಗೌರಮ್ಮ ಎಚ್ಚರಿಸಿದಳು.

"ಅದನ್ನೇ ಅಲ್ಲಿಗೆ ತಗೊಂಡು ಹೋಗ್ಬೇಡ. ಒಂದು ಪಾಟಿಗೆ ಹಾಕ್ಕೊಂಡು ಹೋಗಿ ಕೊಡು.... ಆಮೇಲೆ, ಎಲ್ಲಾ ಪಾತ್ರೆಗಳನ್ನು ಹಾಗೆ ತಗೊಂಡು ಹೋಗಬಾರದು. ನಿಂಗೆ ಮಡಿ ಮೈಲಿಗೆ ಗೊತ್ತಿದೆಯಾ ಹೇಗೆ?....

"ಅಮ್ಮಾ ಅವನು ಗಂಡುಹುಡುಗ.... ಅವನಿಗೇನು ಗೊತ್ತಿರುತ್ತೆ?...

"ಯಾಕೆ ಗೊತ್ತಿರುಲ್ಲ! ಒಂದು ಸಂಸಾರ ಒಂದು ಮನೆ ಅಂತಂದ್ರೆ ಅಲ್ಲಿ ಬರೀ ಗಂಡಸರೇ ಇರುಲ್ಲ. ಹೆಣ್ಣು ಮಕ್ಕಳೂ ಇರ್ತಾರೆ. ಮುಟ್ಟು ಮಡಿ, ಬಸಿರು, ಬಾಣಂತನ ಎಲ್ಲಾ ಗೊತ್ತಿರುತ್ತೆ. ಆಚರಣೇಲಿ ಇಟ್ಕೊಂಡಿಲ್ದಿದ್ರೆ ಗೊತ್ತಿರುಲ್ಲ ಅಷ್ಟೇ." ವ್ಯಂಗ್ಯವಿತ್ತು ಧ್ವನಿಯಲ್ಲಿ.

"ಇಲ್ಲ ಅಜ್ಜಿ... ನಂಗೂ ಸ್ವಲ್ಪ ಸ್ವಲ್ಪ ಗೊತ್ತಿದೆ. ಗೊತ್ತಿಲ್ದೇ ಇದ್ರೆ ನಿಮ್ನನ್ನ ಕೇಳ್ತೀನಿ" ಅವನು ಸೌಜನ್ಯದಿಂದ ನುಡಿದಾಗ, ಗೌರಮ್ಮ ಪ್ರಭಾವಿತಳಾದಳು.

"ನೀನೇ ವಾಸಿ... ಗೊತ್ತಿಲ್ಲದ್ದನ್ನ ಕೇಳ್ಬೇಕು. ಅನ್ನೋದಾದ್ರೂ ತಿಳಿದಿದೆ.... ನಮ್ಮನೆಯೋವಕ್ಕೆ ಏನೂ ಗೊತ್ತಿಲ್ಲ. ಏನೂ ಬೇಕೂ ಇಲ್ಲ" ರಾಜ ಮೊಸರಿನ ಕಪ್ಪನ್ನು ಕೊಟ್ಟು ಬಂದು, ತಾನೂ ತಿಂಡಿ ತಿನ್ನಲು ಕುಳಿತ.

"ರಾಜಾ.... ಬೇಗ ಬೇಗ ತಿನ್ನು.... ಈಗಾಗ್ಲೇ ಹೊತ್ತಾಗಿದೆ..." ಕೇಶವ ಅವಸರಿಸಿದ. ಇಬ್ಬರೂ ಸಿದ್ಧರಾಗಿ ಮನೆಯಿಂದ ಹೊರಟರು.

* * * *

"ಅತ್ತೇ. ಅಡಿಗೆ ಆಗಿದೆ. ನೀವು ಊಟ ಮಾಡಿ, ಒಂದು ಗಳಿಗೆ ಸುಧಾರಿಸಿಕೊಳ್ಳಿ. ನಾನು ನಂದಿನಿ ಜೊತೆ ಶಾಸ್ತ್ರಿಗಳ ಮನೆಗ ಹೋಗ್ಬರ್ತೀನಿ."

"ನಿನ್ನ ಮಗಳಿಗೆ ಹೇಳ್ಬಿಟ್ಟು ಹೋಗು.... ಮಾತಾಡಿ ಮೈಲಿಗೆ ಮಾಡದಿರಲಿ."

"ಅವಳೊಬ್ಬಳೇ ಇರ್ತಾಳಲ್ಲ. ಯಾರ ಹಾತ್ರ ಮಾತಾಡ್ಬೇಕು. ನಾನು ಬರೋವವರೆಗೂ ಅವಳು ಹೊರಗೆ ಕೂಡಾ ಬರುಲ್ಲ. ಅವಳಿಗೆ ಹೇಳಿಬಿಟ್ಟೇ ಹೋಗ್ತೀನಿ" ರಾಧಾ, ಸಿದ್ಧಳಾಗಿ, ನಂದಿನಿಯ ಮನೆಗೆ ಹೊರಟಳು. ಅಲ್ಲಿಂದ ಇಬ್ಬರೂ ಶಾಸ್ತ್ರಿಗಳ ಮನೆಯ ಕಡೆಗೆ ನಡೆದರು.

ಅವರಿಬ್ಬರೂ ವಾಪಸ್ಸು ಬರುವಷ್ಟರಲ್ಲಿ ಅತ್ತೆಯ ಊಟ ಮುಗಿದಿತ್ತು.

"ಶಾಸ್ತ್ರಿಗಳು ಏನಂದ್ರು?" ಗೌರಮ್ಮನ ಕುತೂಹಲ ಕೆರಳಿತ್ತು.

"ಎಲ್ಲಾ ತುಂಬಾ ದಿವಿವಾಗಿದೆ ಅಂತ ಹೇಳಿದ್ರು ಅತ್ತೆ. ಯಾವ್ದೇ ದೋಷ ಇಲ್ವಂತೆ... ಅವಳ ಭವಿಷ್ಯ ತುಂಬಾ ಚೆನ್ನಾಗಿದೆಯಂತೆ."

"ನಂಗೆ ಗೊತ್ತಿತ್ತು. ಯಾವುದೇ ಅನುಮಾನ ಇರ್ಲಿಲ್ಲ. ಆದರೂ ಐದನೇ ದಿನ, ನಾಲ್ಕೈದು ಜನ ಮುತ್ತೈದೆಯರನ್ನು ಕರೆದು ಆರತಿ ಮಾಡಿ ಮಡಿಲು ತುಂಬ ಬೇಕು. ಉಂಡೆ ಚಕ್ಕುಲಿ ಮಾಡಬೇಕು. ಚಿಗುಳಿ ತಂಬಿಟ್ಟು ಮಾಡಲೇಬೇಕು."

"ಅದೆಲ್ಲಾ ಯಾಕೆ ಅತ್ತೆ. ಸುಮ್ನೆ ಎಲ್ರಿಗೂ ತಿಳಿಯುತ್ತೆ.

"ತಿಳೀಬಾರದ್ದು ಏನು?.... ಇದೇನು ಅಪರಾಧಾನಾ! ರಹಸ್ಯವಾಗಿಡೋಕೆ. ನಮ್ಮ ಕಾಲದಲ್ಲಿ ಎಷ್ಟು ಸಂಭ್ರಮ.... ಹಬ್ಬ, ಹಬ್ಬದ ಥರಾ, ಹದಿನಾರು ದಿನದವರೆಗೂ, ಉತ್ಸವದ ಥರ ನಡೆಸುತಿದ್ರು..." ರಾಧಾ, ನಂದಿನಿ ಮುಖಮುಖ ನೋಡಿಕೊಂಡು ಕಿಸಿಕಿಸಿ ನಕ್ಕರು.

"ನಗೋದಕ್ಕೇನು ಇದೆ?... ಇದೆಲ್ಲಾ ಮಾಡಿದ್ರೇ ಅದಕ್ಕೆ ಒಂದು ಕಳೆ.... ಒಂದು ಹೆಣ್ಣು ಪುಷ್ಪವತಿಯಾಗೋದು ಅಂದ್ರೆ... ಅದೇ ಒಂದು ಸಡಗರ ಗಂಡನ ಮನೆಯನ್ನು ತುಂಬಿ, ಅವನ ಮಕ್ಕಳಿಗೆ ತಾಯಿಯಾಗಿ, ವಂಶವನ್ನು ಉದ್ಧಾರ ಮಾಡುಕ್ಕೆ ಸಿದ್ಧಳಾಗಿದಾಳೆ ಅಂತ ಅರ್ಥ... ಹೆಣ್ಣು ಹೆಂಡತಿಯಾಗಿ ಗಂಡನನ್ನು ಒಲಿಸಬೇಕು. ತಾಯಿಯಾಗಿ ಮಕ್ಕಳನ್ನು ಹಾಲೂಡಿಸಿ ಬೆಳೆಸಬೇಕು. ಇದಕ್ಕೆಲ್ಲಾ ಹೆಣ್ಣಿಗೆ ಸೌಂದರ್ಯಬೇಕು. ಶಕ್ತಿ ಬೇಕು. ಅದೆಲ್ಲಾ ಪ್ರಾರಂಭವಾಗೋದು ಇಲ್ಲಿಂದಲೇ... ಯಾವುದೇ ಥರದ ದೃಷ್ಟಿ ಆಗದಿರಲಿ, ಅಂತ ಈ ಆರತಿ ಉತ್ಸವದ ಸಡಗರ. ಸೌಂದರ್ಯ ವೃದ್ಧಿಸಲು ಆರೈಕೆ ಮಾಡಬೇಕು. ಶಕ್ತಿ ವೃದ್ಧಿಸಲು ಹಾಲು, ಹಣ್ಣು ತುಪ್ಪ ದಂಡಿಯಾಗಿ ಕೊಡಬೇಕು..... ಹಿಂದಿನ ಕಾಲದವರು ಏನೇ ಮಾಡಲಿ ಅದಕ್ಕೆ ಒಂದು ಅರ್ಥ ಇದ್ದೇ ಇರುತ್ತೆ.... ನಿಮ್ಗೆಲ್ಲಾ ಏನು ಗೊತ್ತು?

"ಗೌರಮ್ಮನವರೇ, ನೀವು ನಿಮ್ಮ ಕಾಲದ ಮಾತನ್ನಾಡ್ತಿದೀರಿ. ಆಗ ಹೆಣ್ಣು ಮಕ್ಕಳಿಗೆ ತುಂಬಾ ಚಿಕ್ಕವಯಸ್ನಲ್ಲಿ ಮದುವೆ ಆಗಿರುತ್ತಿತ್ತು. ಹೆಣ್ಣು ಮಕ್ಕಳಿಗೆ ಈ ಸಮಯದಲ್ಲೇ ಮಾತ್ರ ಆರೈಕೆ ಮಾಡುತ್ತಿದ್ದುದು. ಸೀದುಕೊಂಡಿರುತ್ತಿದ್ದ ಹೆಣ್ಣು ಮಕ್ಕಳು, ಈ ಸಮಯದಲ್ಲಿ ಮೈ ಕೈ ತುಂಬಿಕೊಳ್ಳುತ್ತಿದುದು ಈಗಲೇ... ಅದಕ್ಕೆ ಮೊದಲು, ಎಲ್ಲರ ಮನೇಲೂ ಗಂಡುಮಕ್ಕಳನ್ನು ಹೆಣ್ಣುಮಕ್ಕಳನ್ನು ಬೆಳೆಸುವುದರಲ್ಲಿ ತಾರತಮ್ಯ ಇದ್ದೇ ಇರುತ್ತಿತ್ತು. ಗಂಡನ ಮನೆಗೆ ಕಳಿಸುವಾಗ ದಷ್ಟಪುಷ್ಟ ಮಾಡಿ ಕಳಿಸಿದ್ರೂ ಏನು.... ಬಸಿರಿ, ಬಾಣಂತಿ.... ಇಷ್ಟೇ ಅವಳ ಜೀವನ. ಒಂದು ಯಂತ್ರದಂತೆ ವರ್ಷವರ್ಷ ಮಕ್ಕಳನ್ನು ಹೆರುವುದಷ್ಟೇ. ಕೆಲಸ. ಎಷ್ಟೋ ಜನಕ್ಕೆ ಜೀವನ ನರಕ ಅಂತ ಅನ್ನಿಸಿದ್ದೂ ಉಂಟು.

ನೀವೇಹೇಳಿ. ಐದು ಮಕ್ಕಳನ್ನು ಹೆತ್ತಿದೀರಂತಲ್ಲ. ಮೊದಲನೇ ಮಗು ಹುಟ್ಟಿದಾಗ ನಿಮಗೆ ಎಷ್ಟು ವರ್ಷ ಆಗಿತ್ತು....?

"ನೀನು ಸುಮ್ನಿರು ನಂದಿನಿ. ನನ್ನ ಮಾತು ಯಾಕೆ ಈಗ?.... ರಾಧಾ ಮೂರು ಮಕ್ಕಳನ್ನು ಹೆತ್ತಿದಾಳಲ್ಲ. ಇವತ್ತಿಗೂ ಅವಳ ಗಂಡ ಮೆಚ್ಚುವ ಹಾಗಿದಾಳೆ. ಬಾಣಂತನ ಚೆನ್ನಾಗಿ ಆಗಬೇಕು ಅಷ್ಟೆ"

"ಎಲ್ಲರ ಮನೇಲೂ ಸಾಧ್ಯಾನಾ ನೀವೇ ಹೇಳಿ. ರಾಧಾ ಭಾಗ್ಯವಂತೆ. ಅವರ ತಾಯಿ ಮನೆಯವರು ತುಂಬಾ ಅನುಕೂಲವಾಗಿದಾರೆ.... ಎಲ್ಲಾ ಚೆನ್ನಾಗಿ ನಡೆದಿದೆ."

"ನಾನೂ ಅವಳನ್ನೂ ಚೆನ್ನಾಗಿಯೇ ನೋಡ್ಕೊಂಡಿದೀನಿ. ಮೂರನೇ ಮಗಳ ಬಾಣಂತನಕ್ಕೆ ತವರು ಮನೆಗೆ ಹೋಗ್ಲಿಲ್ಲ. ನಾನೇ ಮಾಡಿದ್ದು. ಏನಾದ್ರೂ ಅಪಚಾರ ಆಗಿದೆಯಾ ನೀನೇ ಕೇಳು.... "ಮೈ ಕೈ ತುಂಬಿಕೊಂಡು ಗಟ್ಟಿಮುಟ್ಟಾಗಿದಾಳೆ. ಇನ್ನೂ ಎರಡು ಮಕ್ಕಳನ್ನೂ ಹೆತ್ರೂ ಕಂದುಲ್ಲ.... ಕುಂದುಲ್ಲ."

"ಕಣ್ಣು ಹಾಕ್ಬೇಡಿ ಅತ್ತೆ. ನಂಗೂ ವಯಸ್ಸಾಯ್ತು. ಆರೋಗ್ಯವಾಗಿದ್ದರೆ ನಂಗೇ ಒಳ್ಳೇದು." ರಾಧಾ ನಗುತ್ತಾ ನುಡಿದಳು.

"ನನ್ನ ಕಣ್ಣು ಕೆಟ್ಟದ್ದೇನಲ್ಲ. ಹಾಗೇನಾದ್ರೂ ಅನುಮಾನ ಇದ್ದರೆ, ನೀನೂ ನಿನ್ನ ಮಗಳ ಜೊತೆ ಕೂತು ಆರತಿ ಎತ್ತಿಸ್ಕೋ, ದೃಷ್ಟಿ ನಿವಾಳಿಸಿ ತೆಗಿತೀನಿ."

"ಏನೂ ಬೇಡ. ಈ ಆರತಿ ಗೀರತಿ ಯಾಕೆ ಬೇಕು. ನಿಮ್ಮ ಮನಸ್ಸಿನ ಸಮಾಧಾನಕ್ಕಾಗಿ ದೇವರ ಮುಂದೆ ಕೂರಿಸಿ ಆರತಿ ಎತ್ತಿದರಾಯ್ತು. ನಂದಿನಿ ಒಬ್ಬರು ಸಾಕು."

"ಹುಂ. ಸಾಕು... ಯಾರೂ ಬೇಡ. ಯಾವುದೂ ಬೇಡ. ದೊಡ್ಡೋರಾಗಿ ನೀವುಗಳೇ ಹೀಗಾಡಿದ್ರೆ, ನಿಮ್ಮ ಮಕ್ಕಳ ಗತಿಯೇನು. ನನ್ನ ಹೆಣ್ಣು ಮಕ್ಕಳು ಬರಬೇಕು. ಆಶೀರ್ವಾದ ಮಾಡಬೇಕು. ಅದು ಪದ್ಧತಿ. ಫೋನು ಮಾಡಿ ತಿಳಿಸಿ, ಬನ್ನಿ ಅಂತ ಹೇಳು...

"ಅಲ್ಲಾ ಅತ್ತೇ."

"ಅಲ್ಲಾನೂ ಇಲ್ಲ. ಬೆಲ್ಲಾನೂ ಇಲ್ಲ. ನನ್ನ ಮೊಮ್ಮಗಳು ಮೈ ನೆರೆದಿದಾಳೆ. ನಾನು ಇನ್ನು ಬದುಕಿದೀನಿ. ಆರತಿ ಅಕ್ಷತೆಯನ್ನು ಕಣ್ತುಂಬಾ ನೋಡುವ ಆಸೆ ನನಗೆ.... ಆಸೆ ಪೂರೈಸದೇ ನಾನು ಸತ್ತರೆ, ಪ್ರೇತಾತ್ಮವಾಗಿ ತಿರುಗುತ್ತೀನಿ. ಆಮೇಲೆ ನಿಮಗೆ ಕಷ್ಟ."

"ಹೀಗೆಲ್ಲಾ ಮಾತಾಡ್ಬೇಡಿ ಗೌರಮ್ಮ. ರಾಧಾ ಹೇಳಿದ್ದರಲ್ಲಿ ತಪ್ಪೇನಿಲ್ಲ. ಕಾಲ ಬದಲಾಗಿದೆ. ಯಾರೂ ಮಾಡುಲ್ಲ. ಎಷ್ಟೋ ಜನರ ಮನೇಲಿ ಹೊರಗೆ ಸಹ ಕೂತ್ಕೊಳ್ಳಲ್ಲ."

"ನಾನು ಬದುಕಿರುವವರೆಗೂ ಅಂಥ ಮೈಲಿಗೆ ಬೆರೆಸಲು ನಾನು ಬಿಡುಲ್ಲ. ಇದು ನಮ್ಮ ಮನೆಯ ವಿಷಯ. ನಿನ್ನ ಮಗಳು ಇನ್ನೂ ಚಿಕ್ಕದು. ಅದು ದೊಡ್ಡದಾದಾಗ, ಹೊರಗೆ ಕೂರಿಸ್ಲೇ ಬೇಡ. ದೇವರ ಮನೇಲಿ ಕೂರಿಸ್ಕೋ."

ನಂದಿನಿಯ ಮುಖ ಕೆಂಪಾಯಿತು. ಕೋಪವನ್ನು ತಡೆದುಕೊಂಡಳು. ಎದ್ದವಳನ್ನು ಗೌರಮ್ಮನೇ ತಡೆದಳು.

"ನೋಡಿದ್ಯಾ ಎಷ್ಟು ಬೇಗ ಕೋಪ ಬರುತ್ತೆ. ನಿಮಗೆಲ್ಲಾ ನಾವುಗಳೂ ಒಂದು ಪದ್ಧತಿ, ಸಂಪ್ರದಾಯ ಅಂತ ಆಚರಣೆ ಇಟ್ಟುಕೊಂಡಿರ್ತೀವಿ. ಅದನ್ನೆಲ್ಲ ಬಿಡುಕ್ಕಾಗುಲ್ಲ. ನಾನೇನು ನಂಗೆ ಒಡವೆ ಕೇಳಿದ್ನೆ! ಸೀರೆ ಕೇಳಿದ್ನೇ! ಅಥವಾ ಬೇರೆಯವರ ಮನೆಯವರ ವಿಷಯಕ್ಕೆ ಬಾಯಿ ಹಾಕಿದ್ನೇ.... ನಾನು ಹೇಳಿದ್ದು ತಪ್ಪು ಅಂತ ನಿನಗನ್ನಿಸದೇ ಇದ್ರೆ, ನಮ್ಮ ಮನೆಯ ಕೆಲಸದಲ್ಲಿ ನಗುನಗುತಾ ಓಡಾಡು.... ನಂಗೂ ಸಂತೋಷವಾಗುತ್ತೆ."

"ಆಯ್ತು. ಬಂದು ಓಡಾಡುಕ್ಕೆ ನನ್ನ ಕೈಲಾದ ಸಹಾಯ ಮಾಡುಕ್ಕೆ ನಾನೇನೂ ಕಷ್ಟ ಪಡಬೇಕು. ರಾಧಮ್ಮ ಸಂಕೋಚವಿಲ್ಲದೇ ಏನು ಬೇಕೋ ಕೇಳಿ.... ನಾನಿನ್ನು ಬರ್ತೀನಿ."

"ಕಾಫಿ ಕೊಡ್ತೀನಿ ನಂದಿನಿ" ರಾಧಾ ಎದ್ದಳು. ನಂದಿನಿಯೂ ಅವಳ ಹಿಂದೆ ಅಡಿಗೆ ಮನೆಗೆ ಬಂದಳು. ನಮ್ಮ ಅತ್ತೆಯ ಮಾತಿಗೆ ಬೇಸರ ಮಾಡ್ಕೋಬೇಡಿ ನಂದಿನಿ.... ಏನೇನೋ ಆಡಿಯೇ ಬಿಡ್ತಾರೆ."

"ಬಿಡಿ.... ನಂಗೂ ಹೊಸದಲ್ಲ. ನೀವಾಗುವ ಹೊತ್ತಿಗೆ ಇಂಥೋರ ಮಾತುಗಳನ್ನೂ ಸಹಿಸ್ಕೊಂಡು ಇದೀರಿ. ನಾನಾಗಿದ್ದಿದ್ರೆ, ಬೇರೆ ಮನೆ ಮಾಡ್ಕೊಂಡು ಹೋಗಿರ್ತಿದ್ದೆ."

"ನಾವೂ ಹೋಗಬಹುದಾಗಿತ್ತು. ಆದರೆ ನಮ್ಮನ್ನು ಬಿಟ್ಟರೆ, ಬೇರೆ ಇನ್ಯಾರಿದ್ದಾರೆ ಇವರಿಗೆ....ಮಗನ ಕರ್ತವ್ಯ, ತಾಯಿಯನ್ನು ಕಾಪಾಡಬೇಕು, ಕಡೇವರೆಗೂ ನೋಡ್ಕೋಬೇಕು."

"ನೀವು ತುಂಬಾ ಒಳ್ಳೆಯವರು ರಾಧಾ... ಗೌರಮ್ಮನ ಹೆಣ್ಣು ಮಕ್ಕಳಿಗೇ ನಿಮ್ಮಷ್ಟು ಸಹನೆ ಇಲ್ಲ. ಅಂದ್ಹಾಗೇ ನಿಮಗೊಂದು ವಿಷಯ ಗೊತ್ತಾ? ನಿಮ್ಮ

ಭಾವ, ಚಿಕ್ಕವಯಸ್ನಲ್ಲೇ ಮನೆಬಿಟ್ಟು ಹೋದ್ರಂತೆ. ಇದುವರೆಗೂ ಅವರು ಎಲ್ಲಿದಾರೆ ಅಂತ ಗೊತ್ತಿಲ್ವಂತೆ. ಹಾಗಂತ ನಮ್ಮ ಮಾವ ಹೇಳಿದ ನೆನಪು.

ರಾಧಾಳಿಗೆ ಈ ವಿಷಯ ಹೊಸದು. ಕಣ್ಣರಳಿಸಿದಳು. "ಹೌದಾ! ನಂಗೇನೂ ಗೊತ್ತಿಲ್ವಲ್ಲಾ.... ಇವರೂ ಆ ಬಗ್ಗೆ ಹೇಳಿಲ್ಲವಲ್ಲ."

"ಹಾಗಾದ್ರೆ ಸುಳ್ಳಿರಬಹುದು. ನಮ್ಮ ಮಾವ ಯಾರ ಬಗ್ಗೆ ಹೇಳಿದ್ರೋ ನಾನೇನು ಕೇಳಿಸ್ಕೊಂಡ್ನೋ.... ನಿಮ್ಮವರನ್ನ ಕೇಳ್ಬೇಡಿ. ನಿಜವೋ ಸುಳ್ಳೋ ಯಾರಿಗೆ ಗೊತ್ತು? ರಾಧಾ ಕಾಫಿ ಬೆರೆಸಿ, ನಂದಿನಿಗೆ ಕೊಟ್ಟಳು.

"ಮಧುರಂಗೆ ಕೊಟ್ಟು ಬರ್ತೀನಿ."

"ಇಲ್ನೋಡಿ. ನಾನು ಕೊಟ್ಟು, ಹಾಗೇ ಮಾತಾಡ್ಸಿಕೊಂಡು ಬರ್ತೀನಿ. ನೆನ್ನೆ ಅವಳನ್ನು ನೋಡಿದ್ದು. ಒಳಗೇ ಕೂತು ಕೂತು ಬೇಸರವಾಗಿರಬಹುದು" ಎನ್ನುತ್ತಾ ಕಾಫಿಯ ಲೋಟವನ್ನೆತ್ತಿಕೊಂಡು, ಹೊರಬಂದಳು. ಬಾಗಿಲು ಬಡಿದ ಸದ್ದು ಕೇಳಿದ ಕೂಡಲೇ ಮಧುರ ಬಾಗಿಲನ್ನು ತೆರೆದಳು. ನಾಚುತ್ತಾ ನಿಂತಳು.

"ಏನೇ ಹುಡ್ಗಿ ಹೇಗಿದೀಯೆ! ನೆನ್ನೆ ನಿನ್ನನ್ನು ನೋಡಿದ್ದು. ಒಂದು ದಿನದಲ್ಲಿ ಎಷ್ಟು ಕಳೆ ಬಂದುಬಿಟ್ಟಿದೆ ನಿನ್ನ ಮುಖಕ್ಕೆ. ಒಳ್ಳೆ ರಾಜಕುಮಾರಿಯ ಥರ ಕಾಣ್ತೀಯ..." ಕಾಫಿಯ ಲೋಟವನ್ನು ಕೆಳಗಿಟ್ಟಳು.

"ಹೋಗಿ ಆಂಟಿ...." ಮಧುರಳ ಮುಖ ಕೆಂಗುಲಾಬಿಯಂತಾಗಿತ್ತು.

"ರಾತ್ರಿ ನಿದ್ದೆ ಬಂತಾ? ತಿಂಡಿ ಊಟ ಸೇರ್ತಾ?" ವಿಚಾರಿಸಿದಳು.

"ಹುಂ. ಆದರೆ ಒಳಗೇ ಇದ್ದು ಬೋರು. ಸ್ಕೂಲಿಗೆ ಹೋಗಿದ್ರೆ ಚೆನ್ನಾಗಿತ್ತು. ನಾಳೆ ಹೋಗೇ ಹೋಗ್ತೀನಿ."

"ಅಜ್ಜಿ ಬೇಡಾಂತ ಅಂದ್ರೆ ಹೋಗ್ಬೇಡ. ಅವರಿಗೆ ಕೋಪ ಬರುತ್ತೆ."

"ಕ್ಲಾಸ್ ತಪ್ಪುತ್ತೆ ಅಟೆಂಡೆನ್ಸ್ ಹೋಗುತ್ತೆ. ಅಜ್ಜಿಗೆ ಗೊತ್ತಾಗದ ಹಾಗೆ ಹೋಗಿಬರ್ತೀನಿ. ಅವರು ಹೇಗೂ ಒಳಗೇ ಇರ್ತಾರಲ್ಲ."

"ಸರಿ ಹಾಗೇ ಮಾಡು. ಕಾಫಿ ಕುಡಿ ಆರಿ ಹೋಗುತ್ತೆ" ನಂದಿನಿ ಹಿಂತಿರುಗಿ ಬಂದು, ಕಾಫಿ ಕುಡಿದು ತನ್ನ ಮನೆಗೆ ಹೊರಟುಹೋದಳು.

* * * *

"ಅಮ್ಮಾ, ನಾನು ನಾಳೆ ಸ್ಕೂಲ್ಗೆ ಹೋಗ್ತೀನಿ. ಅಜ್ಜಿ ಕೇಳಿದ್ರೆ, ನಂದಿನಿ ಆಂಟಿ ಮನೆಗೆ ಹೋಗಿದಾಳೆ ಅಂತ ಹೇಳಿಬಿಡು."

"ಸರಿ. ಹೇಗೂ ಅರ್ಧ ದಿನದ ಕ್ಲಾಸು. ಅಜ್ಜಿಗೆ ಗೊತ್ತಾಗೋದೇ ಇಲ್ಲ ನಾಡಿದ್ದು ಮಾತ್ರ ಹೋಗ್ಬೇಡ.... ಮನೇಲಿ ಫಂಕ್ಷನ್ ಇರುತ್ತೆ."

"ಏನು ಫಂಕ್ಷನ್ನೂ? ಏನು ಹಬ್ಬ?"

"ಪುರೋಹಿತರು ಬಂದು ಪುಣ್ಯಾಹ ಮಾಡ್ತಾರೆ. ಅಜ್ಜಿ ನಿನ್ನನ್ನ ಕೂರಿಸಿ ಆರತಿ ಮಾಡಿಸಬೇಕೂಂತ ಅಂದ್ಕೊಂಡಿದಾರೆ."

"ಥೂ.... ನಂಗಿದೆಲ್ಲಾ ಇಷ್ಟವಿಲ್ಲ. ನಾನು ಅದನ್ನೆಲ್ಲಾ ಮಾಡಿಸ್ಕೊಳುಲ್ಲ.... ಕೆಟ್ಟ ಮುಖ ಮಾಡಿದಳು.

"ಹಾಗಂದ್ರೆ ಹೇಗೆ? ಎಲ್ಲಾ ಹುಡ್ಗೀರೂ ಮಾಡಿಸ್ಕೊಳ್ತಾರೆ. ಯಾರನ್ನು ಬೇಕಾದ್ರೂ ಕೇಳು."

"ಥೂ.... ಇದನ್ನೆಲ್ಲ ಯಾರಾದ್ರೂ ಕೇಳ್ತಾರಾ? ನನಗೆ ಅವತ್ತು ಟೆಸ್ಟ್ ಇದೆ. ನಾನು ಹೋಗ್ಲೇಬೇಕು. ನಾನು ಮನೇಲಂತೂ ಇರುಲ್ಲ."

"ಸಾಯಂಕಾಲ ಕಣೇ ಆರತಿ. ಆಗ ಮನೇಲಿರ್ತೀಯಲ್ಲ." ಇದೊಂದು ಸಲ ನನ್ನ ಮಾತಿಗೆ ಒಪ್ಕೋ. ಇಲ್ದಿದ್ರೆ ಅಜ್ಜಿಗೆ ಕೋಪ ಬರುತ್ತೆ. ನಾಳೆ ದಿನ ನಿನ್ನ ಅತ್ತೇರೂ ಬರಬಹುದು."

"ಅತ್ತೇಗ್ರೂ ತಿಳಿಸಿದ್ದಾಯ್ತಾ? ಮುಗೀತು ನನ್ನ ಗತಿ. ಆತ್ಮಹತ್ಯೆ ಮಾಡ್ಕೋಬೇಕು ಅಷ್ಟೇ ನಾನು."

"ಥೂ ಹಾಗೆಲ್ಲ ಕೆಟ್ಟ ಮಾತುಗಳನ್ನಾಡಬೇಡ. ಅತ್ತೇರು ಈ ಮನೆಯ ಹೆಣ್ಣು ಮಕ್ಕಳು. ಅವರ ಆಶೀರ್ವಾದ ಬೇಕೇಬೇಕು."

"ನೀನೂ ಇದನ್ನೆಲ್ಲ ನಂಬ್ತೀಯೇನಮ್ಮಾ....

"ಕೆಲವು ಸಾರಿ ನಂಬಲೇಬೇಕಾಗುತ್ತೆ. ಸದ್ಯ ಶಾಂತಿ, ಹೋಮ ಅಂತ ಮಾಡಿಸಬೇಕಾಗಿಲ್ಲ. ಶಾಸ್ತ್ರಿಗಳು ಹೇಳಿದ್ರು ನಿನ್ನ ಭವಿಷ್ಯ ತುಂಬಾ ಚೆನ್ನಾಗಿದೆಯಂತೆ. ನೆನ್ನೆ ದಿನ ವಾರ, ತಿಥಿ ನಕ್ಷತ್ರ ಎಲ್ಲಾ ತುಂಬಾ ಚೆನ್ನಾಗಿದೆಯಂತೆ. ಮಹಾರಾಣಿಯಂತೆ ಸುಖವಾಗಿರ್ತೀಯಂತೆ..."

"ಇದನ್ನೆಲ್ಲ ಕೇಳ್ಕೊಂಡು ಬಾ ಅಂತ ನಿಂಗ್ಯಾರು ಹೇಳಿದ್ರು? ಇದ್ಯಾವ ಮಹಾ ದೊಡ್ಡ ವಿಷಯ! ಇದು ಎಲ್ಲಾ ಹೆಣ್ಣು ಮಕ್ಕಳೂ ನನ್ನ ವಯಸ್ನಲ್ಲಿ ಫೇಸ್ ಮಾಡೋ ವಿಷಯ.... ನಿಂಗೂ ತಿಳುವಳಿಕೆ ಇಲ್ಲ ಅಂತ ನನಗೆ ಇವತ್ತು ಗೊತ್ತಾಯ್ತು... ಹೋಗಮ್ಮ ಊರ ತುಂಬಾ ಹೇಳ್ಕೊಂಡು, ಕೇಳ್ಕೊಂಡು ಬಾ.... ಈಗ ಇದೇ ಮುಖ್ಯವಾದ ಕೆಲಸ... ಹೋಗು ನನ್ಹತ್ರ ಮಾತಾಡ್ಬೇಡ

ಮಧುರ ಮುಖ ಊದಿಸಿಕೊಂಡು ಅತ್ತ ತಿರುಗಿದಾಗ ರಾಧಾಳಿಗೆ ದುಃಖವನ್ನು ತಡೆಯಲಾಗಲಿಲ್ಲ, ಬಿಕ್ಕಿದಳು.

ನನ್ನ ಪರಿಸ್ಥಿತಿ, ನನ್ನ ಹೊಟ್ಟೇಲಿ ಹುಟ್ಟಿದ ಮಕ್ಕಳಿಗೆ ಅರ್ಥವಾಗುಲ್ಲ ಅಂತ ಅಂದ್ಮೇಲೆ, ನನ್ನ ಅತ್ತೆಗೆ, ನನ್ನ ಗಂಡಂಗೆ ಹೇಗೆ ತಿಳಿಯಬೇಕು. ಎಲ್ಲರ ಹತ್ರಾನೂ ಅನ್ನಿಸ್ಕೊಳ್ಳೋದೊಂದೇ ನನ್ನ ಕಸುಬಾಗಿದೆ. ನಿಮ್ಮಜ್ಜಿಗೆ ಅವರದ್ದೇ ಆಸೆ. ಅವರದ್ದೇ ಹಠ. ಎಂತೆಂಥಾ ಮಾತಾಡ್ತಾರೆ ಗೊತ್ತಾ? ನಾನೇನು ಕಡಿಮೆ ಅನುಭವಿಸಿದೀನಾ?.... ನೀನೂ ಹೀಗೆ ಆಡಿದ್ರೆ ನನ್ನ ಗತಿ ಏನು?....

"ನಾನು ಅಜ್ಜಿಹತ್ರ ಮಾತಾಡ್ತೀನಿ. ನೀನು ಸುಮ್ನಿರು..." ಅಳಬೇಡ ಪ್ಲೀಸ್." ಮಧುರ ಇತ್ತ ತಿರುಗಿದ್ದಳು.

"ಅಜ್ಜಿ ಬಾಯಿಗೆ ಬಂದ್ಹಾಗೆ ಮಾತಾಡ್ತಾರೆ. ನಂಗೆ ತಡಕೊಳ್ಳೋಕೆ ಆಗುಲ್ಲ"

"ಅಪ್ಪನ ಕೈಯಲ್ಲಿ ಹೇಳಿಸಿದ್ರೆ.?...

"ನಿಮ್ಮಪ್ಪ ನಿಮ್ಮಜ್ಜಿಯ ಮಾತನ್ನು ತೆಗೆದು ಹಾಕುಲ್ಲ. ಅವರ ಅಕ್ಕಂದಿರು ಬಂದ ಮೇಲೆ, ಅವರೆಲ್ಲಾ ಒಂದು ಮನೇಲಿ ಸುಮ್ನೆ ರಂಪ ರಾದ್ಧಾಂತವಾಗುತ್ತೆ.

"ಇಲ್ಲಮ್ಮ.... ಯಾರು ಏನೇ ಹೇಳ್ಲಿ ನಾನು ಆರತಿ ಮಾಡಿಸ್ಕೊಳ್ಳೋಕೆ ಮಾತ್ರ ಬಿಲ್‌ಕುಲ್ ಒಪ್ಪುಲ್ಲ."

"ಅವರೆಲ್ಲಾ ನನ್ನನ್ನ ಅಂತಾರೆ ಕಣೇ. ನಾನು ಬೈಸಿಕೊಂಡ್ರೂ ಪರವಾಗಿಲ್ಲ ಅಂತಿದ್ರೆ ನಾನುಮತ್ತೆ ನಿನ್ನನ್ನ ಕೇಳಿಕೊಳ್ಳುಲ್ಲ. ಜೀವಮಾನವೆಲ್ಲಾ ಅಜ್ಜಿ ಗೊಣಗ್ತಾನೇ ಇರ್ತಾರೆ. ಇಡೀ ದಿನ ನಾನು ಅವರ ಜೊತೇಲಿ ಇರೋಳು.... ನನ್ನ ಕಷ್ಟ ನಿಮಗೆಲ್ಲ ಏನು ಗೊತ್ತಾಗುತ್ತೆ? ನೀವೆಲ್ಲಾ ಏನು ಬೇಕಾದ್ರೂ ಮಾಡ್ಕೊಳ್ಳಿ. ನಾನು ನಾಳೇನೇ ನಮ್ಮ ಅಮ್ಮನ ಮನೆಗೆ ಹೊರಟುಹೋಗ್ತೀನಿ.

"ನನ್ನನ್ನು ಕರ್ಕೊಂಡ್ಹೋಗು."

"ಹುಂ ಕರ್ಕೊಂಡು ಹೋಗ್ತೀನಿ. ಮಯೂರ, ಮಂದಾರಾನೂ ನನ್ನ ಹಿಂದೆ ಬರ್ತಾರೆ. ಯಾರೂ ಬೇಡ. ನಾನೊಬ್ಬೇ ಹೋಗ್ತೀನಿ. ನಾನು ನನ್ನ ಅಪ್ಪನ ಮನೇಲಿರ್ತೀನಿ. ನೀವು ನಿಮ್ಮಪ್ಪನ ಮನೇಲಿರಿ. ನಿಮ್ಮಪ್ಪಂಗೆ ಹೇಳಿಬಿಟ್ಟು ಹೋಗ್ತೀನಿ ಬೇಕಾದ್ರೆ ಅವರು ಇನ್ನೊಂದು ಮದುವೆ ಮಾಡಿಕೊಳ್ಳಲಿ. ನಿಮಗೆ ಮಲತಾಯಿ ಬಂದಮೇಲೆ ನನ್ನ ಬೆಲೆ ಗೊತ್ತಾಗುತ್ತೆ. ಮಲತಾಯಿ ಕೈಯಲ್ಲಿ ಸಿಕ್ಕಿ ಹಾಕ್ಕೊಂಡು ಕಷ್ಟ ಪಡೋದಕ್ಕಿಂತ, ಈ ಆರತಿ

ಮಾಡಿಸ್ಕೊಂಡ್ರೆ ಲಾಭ ಅಲ್ವೇನೇ... ಹೊಸ ಬಟ್ಟೆ ಕೊಡಿಸ್ತೀನಿ.ಸರ ಮಾಡಿಸಿಕೊಡ್ತೀನಿ. ಬಂದೋರೆಲ್ಲ ಉಡುಗೊರೆ ಕೊಡ್ತಾರೆ. ಎಲ್ಲಾ ನಿಂಗೆ. ಪೂಸಿ ಹೊಡೆದಳು.

"ಈ ಆಸೆ ಎಲ್ಲಾ ತೋರಿಸ್ಬೇಡ."

"ಸರಿ. ನಿನ್ನಿಷ್ಟ ಏನು ಬೇಕಾದ್ರೂ ಮಾಡ್ಕೋ. ಇದುವರೆಗೂ ಹೇಳಿದ್ದೆಲ್ಲ ನಿನ್ನ ಒಳ್ಳೇದಕ್ಕೆ. ನಮ್ಮ ಮನೆ ಒಳ್ಳೇದಕ್ಕೆ. ನನಗೇನಾಗಬೇಕಾಗಿದೆ. ನಾನಂತೂ ಹೀಗಾಡಿರ್ಲಿಲ್ಲ. ಅಮ್ಮಹೇಳಿದ ಹಾಗೆ ಕೇಳಿದ್ದೆ. ನಿಮಗೆಲ್ಲಾ ಭಯಭಕ್ತಿ ಏನಿಲ್ಲ. ನಾನೇ ಹೀಗಾಡಿದ್ಮೇಲೆ ಮಯೂರ ಮಂದಾರ ಸಹ ನನ್ನ ಮಾತನ್ನು ಕೇಳೋದನ್ನ ಬಿಟ್ಟುಬಿಡ್ತಾರೆ. ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ ಅಂತ ನೀನು ಹೇಗೆ ಮಾಡಿದ್ರೆ ಹೇಗೆ ಆಡಿದ್ರೆ ಅದನ್ನೇ ಅವರಿಬ್ರು ಮಾಡ್ತಾರೆ.

"ಒಂದು ಕೆಲ್ಸ ಮಾಡಮ್ಮ. ಮಯೂರನ್ನ ಕೂರಿಸಿ ಆರತಿ ಮಾಡಿಬಿಡಿ. ಯಾರಿಗೂ ಗೊತ್ತಾಗುಲ್ಲ."

ಸರಿ ಹಾಗೇ ಮಾಡ್ತೀನಿ ಉಡುಗೊರೆಗಳ ಆಸೆಗೆ ಅವಳು ಒಪ್ಪಿದರೂ ಒಪ್ಪಬಹುದು. ಆದರೆ ನಿನಗೆ ಮತ್ತೆ ಈ ಅವಕಾಶ ಸಿಕ್ಕುಲ್ಲ. ರಾಧಾ ಮಗಳನ್ನು ದುರುದುರು ನೋಡಿ ಅಲ್ಲಿಂದ ಹೊರಟುಹೋಗಿದ್ದಳು.

* * * *

"ಮಧು, ಸಂಗೀತದ ಟೀಚರ್ ಬಂದಿದಾರೆ ಕಣೇ." ಮಯೂರ ಬಂದು ಹೇಳಿದಾಗ ಮಧು ಪೆಚ್ಚು ಮುಖ ಮಾಡಿದಳು.

"ನಂಗೆ ಸಂಗೀತ ಹೇಳಿಸ್ಕೊಳ್ಳೋ ಮೂಡ್ ಇಲ್ಲ. ಅವಳಿಗೆ ಹುಷಾರಿಲ್ಲ ಅಂತ ಹೇಳಿಬಿಡು."

"ಅಜ್ಜಿ ಆಗ್ಲೇ ಎಲ್ಲಾ ವರದಿ ಒಪ್ಪಿಸಿದ್ದಾಗಿದೆ. ಅವರು ನಿನ್ಹತ್ರ ಮಾತಡ್ಬೇಕು ಅಂತ ಕಾಯ್ತಿದಾರೆ."

"ಈ ಅಜ್ಜಿ ಒಬ್ಬರು. ಊರಿಗೆಲ್ಲಾ ಟಾಂಟಾಂ ಹೊಡ್ಕೊಂಡು ಬರ್ತಿದಾರೆ. ಒಂದು ಚೂರಾದ್ರೂ ಗುಟ್ಟು ಬೇಡ್ವಾ?"

"ಈಗೇನು ಬರ್ತೀಯೋ ಬರುಲ್ಲ ಅಂತ ಹೇಳಲೋ?"

"ಬರ್ತೀನಿ ನಡಿ. ಅಜ್ಜಿಯ ತಪ್ಪಿಗೆ, ಟೀಚರ್‌ಗೆ ಯಾಕೆ ಅವಮಾನ ಮಾಡ್ಬೇಕು?" ಮಯೂರನ ಹಿಂದೆ ಹೆಜ್ಜೆ ಹಾಕಿದಳು. "ನಮಸ್ತೇ ಮೇಡಂ ಟೀಚರ್‌ಗೆ ಕೈ ಮುಗಿದಳು. ಅವರು ಅವಳನ್ನೇ ಮೇಲಿನಿಂದ ಕೆಳಗೆ ನೋಡಿದರು. ಆಕೆಯ ಕಣ್ಣಲ್ಲಿ ಮೆಚ್ಚುಗೆ ಇತ್ತು.

"ಕೂತ್ಕೋ..." ಎಂದರು. ಅವಳು ಕುಳಿತಳು.

"ಇವತ್ತುಸಂಗೀತ ಪಾಠ ಮಾಡ್ಲೋ ಬೇಡ್ವೋ. ನೀನೇ ಹೇಳು." ಮಧುರ ತಬ್ಬಿಬ್ಬಾದಳು.

"ಹೇಳ್ಕೊಟ್ರೆ ಹೇಳ್ತಾಳೆ. ಇವಳ ಧ್ವನಿ ತುಂಬಾ ಇಂಪಾಗಿದೆ. ಅದಕ್ಕೆ ಇವರಪ್ಪ ಮಧುರ ಅಂತ ಹೆಸರನ್ನಿಟ್ಟ. ನಿಮಗೆ ಗೊತ್ತಾ ಟೀಚರ್. ಇವಳು ಚಿಕ್ಕ ಮಗುವಾಗಿದ್ದಾಗ ಎಂದೂ ಕರ್ಕಶವಾಗಿ ಅಳಲಿಲ್ಲ. ಅತ್ತರೂ ಬೇಸರವಾಗುತ್ತಿರಲಿಲ್ಲ."

ಸಂಗೀತದ ಟೀಚರ್ ಅವಳ ಕಡೆ ನೋಡಿ ನಸುನಕ್ಕರು. "ನಿಮ್ಮ ಅಜ್ಜಿಗೆ ನಿನ್ನನ್ನ ಕಂಡರೆ ಎಷ್ಟು ಪ್ರೀತಿ ನೋಡು" ಎನ್ನುವಂತಿತ್ತು ಅವರ ನೋಟ. ಮಧುರ ನಕ್ಕಂತೆ ಮಾಡಿ ಅಜ್ಜಿಯ ಕಡೆ ಕೋಪದಿಂದ ನೋಡಿದಳು.

"ನಮ್ಮ ಮಧು... ಮೊದ್ಲೇ ರೂಪವತಿ. ಈಗಂತೂ ಎರಡು ದಿನದಿಂದ ಕಳೆ ತುಂಬಿದೆ. ಮೈ ಕೈ ತುಂಬಿಕೊಂಡು ನೋಡೋರ ಕಣ್ಣು ತಾಗೋ ಹಾಗೆ ಆಗಿದಾಳೆ. ನಂಗಂತೂ ಎದೆ ತವಕದಿಂದ ಹೊಡೆದುಕೊಳ್ಳುತ್ತೆ. ಬೀದೀಲಿ ಓಡಾಡೋದು ಹೇಗೆ ಅಂತ.

"ಅಜ್ಜೀ.... ನಾನು ಮನೆ ಬಿಟ್ಟು ಎಲ್ಲಿಗೂ ಹೋಗುಲ್ಲ. ಸ್ಕೂಲ್ಗೂ ಹೋಗುಲ್ಲ. ನಿಮ್ಮ ಥರ ಮನೇಲೆ ಕೂರ್ತಿರ್ತೀನಿ. ಯಾರ ಕಣ್ಣು ನನ್ನ ಮೇಲೆ ಬೀಳುಲ್ಲ." ಮಧುರ ಕೋಪದಿಂದ ನುಡಿದಳು.

"ಥೂ ಬಿಡ್ತು ಅನ್ನು. ನನ್ನ ಥರಾ ಕೂತಿರ್ತಾಳಂತೆ. ನಿಮ್ಮಮ್ಮನ ಕಿವಿ ಮೇಲೆ ಬಿದ್ರೆ, ಬಾಯಿಗೆ ಬರೆ ಹಾಕ್ತಾಳೆ ಅಷ್ಟೇ. ನನ್ನ ಕಾಲ ಕೆಟ್ಟುಹೋಯ್ತೇ. ಸ್ಕೂಲಿಗೆ ಹೋಗ್ಲಿಲ್ಲ. ವಿದ್ಯೆ ಕಲೀಲಿಲ್ಲ. ನಾಲ್ಕಕ್ಷರ ಕಲಿತಿದ್ರೆ, ನಾನೂ ಯಾವುದಾದರೂ ನೌಕರಿ ಮಾಡಬಹುದಾಗಿತ್ತು. ಅವರಿವರ ಮನೆಗೆ ಹೋಗಿ ಚಟ್ನಿಪುಡಿ, ಮೆಣಸಿನಪುಡಿ, ಕುಟ್ಟಿ ಸಂಪಾದಿಸಬೇಕಿರಲಿಲ್ಲ." ಮಧುರ ತಲೆ ಬಾಗಿಸಿದಳು. ನೋಡಿ ಟೀಚರ್ ಹೇಗೆ ಮಾತಾಡ್ತಾಳೆ.? ನಾನು ಕಷ್ಟದಲ್ಲಿದ್ದೆ. ನನ್ನ ಹೆಣ್ಣು ಮಕ್ಕಳನ್ನು ಹೆಚ್ಚಿಗೆ ಓದಿಸಲಿಲ್ಲ. ನನ್ನ ಮಗ ಅನುಕೂಲವಾಗಿದಾನೆ, ಹೆಣ್ಣು ಮಕ್ಕಳಿಗೆ ಏನು ಇಷ್ಟವೋ ಅದನ್ನು ಓದಿಸ್ತಾನೆ. ಅವನಿಗೆ ಅವನ ಮಗಳು ಡಾಕ್ಟರಾಗಲಿ ಅಂತ ಆಸೆ. ಖಾಯಿಲೆ ಅಂತ ಬಂದೋರಿಗೆ, ಇವಳ ಮಾತುಗಳಿಂದಲೇ ಅರ್ಧ ಖಾಯಿಲೆ ವಾಸಿ ಆಗಿಬಿಡುತ್ತೆ ಅಂತ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ. ಬೆಳೀತಾ.... ಬೆಳೀತಾ ಒರಟಾಗಿ ಮಾತಾಡೋದನ್ನ ಕಲೀತಿದಾಳೆ ಅಂತ ಕಾಣಿಸುತ್ತೆ. ಇವಳ ಹೆಸರನ್ನು ಬದಲಾಯಿಸಬೇಕು.

"ಅಜ್ಜೀ.... ಪ್ಲೀಸ್.... ನಾನು ಪಾಠ ಹೇಳಿಸ್ಕೋಬೇಕು.

"ನಾನು ಮಾತು ನಿಲ್ಲಿಸ್ಬೇಕು. ಅಷ್ಟೇ ತಾನೇ. ಇವತ್ತು ನಿನಗೆ ಸಂಗೀತ ಪಾಠಬೇಡ... ಇವರು, ನಾಲ್ಕು ದೇವರನಾಮಗಳನ್ನು ಹಾಡಲಿ, ಕೇಳೋಣ.." ಮಧುರ ಸುಮ್ಮನಾದಳು. ಆಕೆ ದೇವರನಾಮವನ್ನು ಹಾಡಲು ಪ್ರಾರಂಭಿಸಿದರು. ಗೌರಮ್ಮ ತಲೆದೂಗುತ್ತಾ ಹಾಡನ್ನು ಆಲಿಸಿದರು. ತನ್ಮಯತೆಯಿಂದ ಹಾಡುತ್ತಿದ್ದ ಟೀಚರ್‌ನೇ ಮಧುರ ನೋಡಿದಳು. ಮಾತಾಪಿತರನು ಬಳಲಿಸುವಾ ಮಗ ಯಾತ್ರೆಯ ಮಾಡಿದರೇನು ಫಲಾ... ಸಟೆಯನ್ನಾಡುವ ಮನುಜರು ಗೀತೆಯನೋದಿದರೇನು ಫಲಾ... ಬೇವು ಬೆಲ್ಲದೊಳಿಡಲೇನು ಫಲಾ.... ಅವರು ತನಗೇ ಹೇಳುತ್ತಿರುವರೆಂದೆನಿಸಿತು. ಕೆಲವೇ ನಿಮಿಷಗಳ ಹಿಂದೆ ತಾನು ತಾಯಿಯನ್ನು ನೋಯಿಸಿದ್ದು ಅರಿವಿಗೆ ಬಂತು.... ತಾನು ಒಳ್ಳೆಯ ಸಂಗೀತಗಾತಿಯೂ ಆಗುವುದಿಲ್ಲ. ಅಥವಾ ಅಪ್ಪನ ಆಸೆಯಂತೆ ಒಳ್ಳೆಯ ಡಾಕ್ಟರೂ ಆಗಲು ಸಾಧ್ಯವಿಲ್ಲ ಎನಿಸಿತು. ಮನದೊಳಗೆ ದುಗುಡ ತುಂಬಿಕೊಂಡಿತು. ಟೀಚರ್ ಹಾಡುತ್ತಲೇ ಇದ್ದರು. ಕೇಶವ, ರಾಜಾ ಇಬ್ಬರೂ ಇಬ್ಬರು ವೆರಾಂಡದಲ್ಲೇ ನಿಂತು ಸಂಗೀತವನ್ನು ಆಲಿಸಿದರು. ನಾಲ್ಕಾರು ದೇವರನಾಮಗಳನ್ನು ಹಾಡಿ, ಮಂಗಳವನ್ನು ಹಾಡಿದರು.

"ನಾನು ಇವತ್ತು ಧನ್ಯಳಾದೆ ಟೀಚರ್..." ಗೌರಮ್ಮ ಮನತುಂಬಿ ಹೇಳಿದಾಗ, ಆಕೆ ಎದ್ದು ಗೌರಮ್ಮನವರ ಕಾಲಿಗೆ ನಮಸ್ಕರಿಸಿದರು.

"ನಿಮ್ಮಂಥ ಹಿರಿಯೋರ ಆಶೀರ್ವಾದದಿಂದ ನಾನು ಇಷ್ಟರಮಟ್ಟಿಗೆ ಕಲಿಯಲು ಸಾಧ್ಯವಾಯಿತು."

"ಭಗವಂತ ನಿಮ್ಮನ್ನು ಸದಾ ಕಾಲಕ್ಕೂ ಚೆನ್ನಾಗಿಟ್ಟಿರಲಿ. ಸಂಗೀತದಲ್ಲಿ ಅಭಿವೃದ್ಧಿಪಡೆಯಿರಿ. ನಮ್ಮ ಮಧುವನ್ನು ಹೀಗೆ ತಯಾರು ಮಾಡಿ" ಆಕೆ ಮನಃಪೂರ್ವಕವಾಗಿ ಹಾರೈಸಿದರು. ಮಧುರ ಅಜ್ಜಿಯನ್ನೇ ವಿಚಿತ್ರವಾಗಿ ನೋಡಿದಳು. ಕೇಶವ, ರಾಜಾ ಇಬ್ಬರೂ ಒಳಗೆ ಬಂದರು.

"ತುಂಬಾ ಚೆನ್ನಾಗಿ ಹಾಡಿದ್ರಿ. ತುಂಬಾ ಸಂತಸವಾಯ್ತು." ಕೇಶವ ಮನದುಂಬಿ ಹೊಗಳಿದ. ರಾಜಾ ಕೈತಟ್ಟಿ ನಿಂತು ಮೆಚ್ಚುಗೆಯ ನೋಟವನ್ನು ಬೀರಿದ. ರಾಧಾ ಎಲ್ಲರಿಗೂ ಬಿಸಿಬಿಸಿ ಕಾಫಿಯನ್ನು ತಂದಿತ್ತಳು. ತಾಯಿ ಅಗತ್ಯಕ್ಕಿಂತ ಹೆಚ್ಚು ಮೌನಿಯಾಗಿರುವುದನ್ನು ಮಧುರ ಗಮನಿಸಿದಳು. ಕೇಶವ ತಾನು ತಂದಿದ್ದ ಫೇಡವನ್ನು ಎಲ್ಲರಿಗೂ ಹಂಚಿದ. ಆಕೆ ಕುಂಕುಮ ತೆಗೆದುಕೊಂಡು ಎದ್ದಾಗ ಗೌರಮ್ಮ ನುಡಿದಳು.

"ನಾಡಿದ್ದು ಸಾಯಂಕಾಲ ನಮ್ಮ ಮಧುರಂಗೆ 'ಆರತಿ' ಕಾರ್ಯಕ್ರಮವನ್ನು ಇಟ್ಟುಕೊಂಡಿದೇವೆ. ನೀವು ಖಂಡಿತಾ ಬಂದು ಆಶೀರ್ವಾದ ಮಾಡಬೇಕು" ಮಧುರ ತಾಯಿಯ ಕಡೆ ನೋಡಿದಳು. ಅವಳು ಎತ್ತಲೋ ನೋಡುತ್ತಿದ್ದಳು.

"ಅವತ್ತು ನೀವು ಮತ್ತಷ್ಟು ಹಾಡುಗಳನ್ನು ಹಾಡಬೇಕು. ಹಸೆಕರೆದ ಹಾಡು, ಮಡಿಲು ತುಂಬಿದ ಹಾಡುಗಳು, ಆರತಿ ಎತ್ತಿದ್ದು ಎಲ್ಲಾ ಹಾಡಬೇಕು.

"ಆಯ್ತು. ನನಗೆ ಬಂದದ್ದನ್ನು ನಿಸ್ಸಂಕೋಚವಾಗಿ ಹಾಡ್ತೀನಿ. ನಾನಿನ್ನು ಬರ್ತೀನಿ. ಆಕೆ, ಕೇಶವನಿಗೆ ಕೈಮುಗಿದು, ಉಳಿದವರಿಗೆ ತಲೆಯಾಡಿಸಿ ಬರ್ತೀನಿ ಎಂದು ಮತ್ತೊಮ್ಮೆ ಹೇಳಿ ಹೊರಟಳು.

"ರಾಜಾ, ಹೋಗು. ಅವರನ್ನು ಮನೆತನಕ ಬಿಟ್ಟು ಬಾ. ಕತ್ತಲಾಗಿದೆ. ಒಬ್ರೇ ಹೋಗ್ತಾರೆ." ಕೇಶವ ರಾಜನಿಗೆ ಆಣತಿ ಮಾಡಿದ. ಆಕೆ ಬೇಡ ಬೇಡ ಎಂದರೂ, ರಾಜ ಅವರೊಡನೆ ಹೊರಟ.

"ನಿಮ್ಮ ಟೀಚರ್ ಸಖತ್ ಆಗಿ ಹಾಡ್ತಾರೆ ಕಣೇ.... ನಂಗೆ ಗೊತ್ತೇ ಇರಲಿಲ್ಲ" ಮಯೂರ ಅಕ್ಕನಿಗೆ ಹೇಳಿದಳು.

"ನೀನು ಗೆಜ್ಜೆ ಕಟ್ಕೊಂಡು ಕುಣಿಯೋ ಕ್ಲಾಸ್‌ಗೆ ಹೊರಟುಹೋಗ್ತೀಯ. ಅದನ್ನು ಬಿಟ್ಟು, ನೀನೂ ಸಂಗೀತದ ಕ್ಲಾಸ್‌ಗೆ ಸೇರ್ಕೋ" ಅಜ್ಜಿ ಉಪದೇಶ ನೀಡಿದಳು.

"ನಾನು ಸಂಗೀತ ಕಲಿತರೆ, ಮಧುಗೆ ಇಷ್ಟವಾಗುಲ್ಲ. ಅವಳು ಹಿಂದೆ ಬಿದ್ದುಬಿಡ್ತಾಳೆ." ಮಯೂರ ತಮಾಷೆ ಮಾಡಿದರೂ ಮಧುರ ನಗಲಿಲ್ಲ.

"ಏನೇ ಮಧು, ಮುಗೀತೇನೇ ನಿನ್ನ ಅಂತಃಪುರವಾಸ. ಹೊರಗೆ ಬಂದು ಬಿಟ್ಟಿದೀಯ. ಕೇಶವನೂ ಗೇಲಿ ಮಾಡಿದ.

"ಅವರ ಟೀಚರ್ ಬಂದ್ರು ಅಂತ ಹೊರಕ್ಕೆ ಬಂದಳು. ಎರಡು ದಿನದಿಂದ ಒಳಗೇ ಕೂತು, ಮುಖವೆಲ್ಲಾ ಬಿಳುಚಿ ಹೋಗಿದೆ..." ಅಜ್ಜಿ ನುಡಿದಾಗ ಅವಳಿಗೆ ನಗೆ ಬಂತು. ಈ ಅಜ್ಜಿ ಒಂದೊಂದು ಸಲ ಒಂದೊಂದು ಥರ ಮಾತಾಡ್ತಾರೆ. ಒಳ್ಳೇ ಜೋಕರ್ ಥರ ಎಂದುಕೊಂಡಳು. ರಾಧಾ ಅವಳನ್ನೇ ಗಮನಿಸುತ್ತಿದ್ದಳು. ಅವಳ ನಸುನಗೆಯನ್ನು ಕಂಡು ಸಮಾಧಾನದ ಉಸಿರನ್ನು ಬಿಟ್ಟಳು.

"ಅಜ್ಜೀ ಫಲಾಹಾರಕ್ಕೆ ಏನು ಮಾಡ್ಕೋತೀರಿ?" ಇದ್ದಕ್ಕಿದ್ದಂತೆ ಮಂದಾರ ಕೇಳಿದಾಗ ಎಲ್ಲರೂ ನಕ್ಕರು.

"ಯಾಕೇ... ಕಷಾಯ ಮಾಡ್ಕೊಳ್ಳೋಣ ಅಂತಿದೀನಿ. ನೀನೂ ಕುಡೀತೀಯಾ?" ಮತ್ತೊಮ್ಮೆ ಎಲ್ಲರೂ ನಕ್ಕರು.

"ಗುಳಪಾವಟೆ ಮಾಡ್ಕೊಂಡು, ನಂಗೂ ಕೊಟ್ರೆ ನನ್ನ ಜೊತೆ ನಿಮ್ಮನ್ನು ಮಲಗಿಸಿಕೊಳ್ತೀನಿ ಇಲ್ದಿದ್ರೆ ಇಲ್ಲ."

"ಗುಳಪಾವಟೆ ತಿನ್ನಬೇಕು ಅಂತ ಆಸೆ ಆಗ್ತಿದೆಯಾ ಪುಟ್ಟಿಗೆ. ನಾಳೆ ನಿಮ್ಮ ಅತ್ತೇರು ಬರ್ತಿದಾರೆ. ಏನಾದ್ರೂ ತಿಂಡಿ ತಂದೇ ತರ್ತಾರೆ. ತಿನ್ನುವಂತೆ."

"ಅತ್ತೇ ಬರ್ತಾರಾ? ಯಾಕೆ?" ಮಯೂರ ಕೇಳಿದಳು.

"ನಿಮ್ಮಕ್ಕಂಗೆ ಆರತಿ ಎತ್ತೋಕೆ" ಆಕೆ ಹಸನ್ಮುಖದಿಂದ ನುಡಿದಾಗ ಮಧುರ ಎದ್ದು ರೂಮನ್ನು ಸೇರಿಕೊಂಡಳು.

"ನಾಚ್ಕೆ ನಿಮ್ಮಕ್ಕಂಗೆ ನಿನ್ನ ಹತ್ರ ಹೊಸಾಬಟ್ಟೆ ಇದೆಯೇನೇ ಮಂದಾರ.

"ಹೂಂ.... ಇದೆ."

"ಸರಿ. ಅದನ್ನು ಉಟ್ಟು ನೀನು ನಿನ್ನಕ್ಕನ ಜೊತೇಲಿ ಕೂತ್ಕೊಳ್ಳುವಂತೆ. ನಿಂಗೂ ಚಕ್ಕುಲಿ ಕೋಡುಬಳೆ, ಪುರಿಉಂಡೆ, ಚಿಗುಳಿ ತಂಬಿಟ್ಟು ಎಲ್ಲಾ ಸಿಗುತ್ತೆ. ಮಂದಾರ ಆಸೆಯ ಕಣ್ಣುಗಳನ್ನು ಅರಳಿಸಿದಳು.

"ಅಷ್ಟೊಂದೆಲ್ಲಾ ಮಾಡ್ತಾರಾ?.... ನೀವು ಯಾವಾಗ ಮಾಡ್ತೀರಿ ಅಜ್ಜಿ?"

"ನಾಳೆ ನಿನ್ನ ಅತ್ತೇರು ಬರಲಿ. ಎಲ್ರೂ ಕೂತು ಮಾಡಿದ್ರಾಯ್ತು. ಕೇಶವಂಗೆ ಹೇಳಿ, ಎಲ್ಲಾ ಸಾಮಾನು ತರಿಸೋಣ.... ನಿಮ್ಮಪ್ಪ ಎಲ್ಲಿ?

"ಅಪ್ಪಾ.... ಅಪ್ಪಾ" ಮಂದಾರ ಕುಳಿತಲ್ಲಿಂದಲೇ ಕೂಗು ಹಾಕಿದಳು.

"ಕೂತಲ್ಲಿಂದ್ಲೇ ಕೂಗ್ತೀಯಲ್ಲ ಎದ್ದು ಹೋಗಿ ನೋಡು ಎಲ್ಲಿದಾನೇಂತ.

"ಅಪ್ಪ, ಅಮ್ಮನ ಹತ್ರ ಮಾತಾಡ್ತಿದಾರೆ." ಮಯೂರ ವರದಿ ಒಪ್ಪಿಸಿದಳು.

* * * *

"ಫಲಾಹಾರಕ್ಕೆ ಏನಾದ್ರೂ ಒಂಚೂರು ಮಾಡ್ಕೊಳ್ತೀನಿ" ಎನ್ನುತ್ತಾ ಗೌರಮ್ಮ ಎದ್ದು ಅಡಿಗೆ ಮನೆ ಕಡೆಗೆ ಬಂದಳು. ರಾಧಾ ಅತ್ತೆಯನ್ನು ಕಂಡೊಡನೆ ಮಾತು ನಿಲ್ಲಿಸಿದಳು. ಕೇಶವ ಅಡಿಗೆ ಮನೆಯಿಂದ ಹೊರಬಂದ.

"ನಾಳೆ ನಿನ್ನ ಅಕ್ಕಂದಿರು ಬರ್ತಿದಾರೆ. ಬಸ್‌ಸ್ಟ್ಯಾಂಡ್‌ಗೆ ಹೋಗ್ಬೇಕು"

"ಎಷ್ಟು ಹೊತ್ಗೇ ಬರ್ತಾರಂತೆ!"

"ಅಲ್ಲಿಂದ ಹೊರಡೋಕ್ಮುಂಚೆ ಫೋನು ಮಾಡ್ತಾರಂತೆ..." ರಾಧ ನುಡಿದಳು.

"ಸಾಮಾನಿನ ಪಟ್ಟಿ ಹಾಕಿಬಿಡ್ತೀನಿ. ನಾಳೆ ಬೆಳಿಗ್ಗೇನೇ ಎಲ್ಲಾ ತರಿಸಿಬಿಡು." ಗೌರಮ್ಮ ಮಗನಿಗೆ ಹೇಳಿದಳು.

"ಏನೇನ್ಬೇಕೋ ಎಲ್ಲಾದನ್ನೂ ಒಂದೇ ಸಲಕ್ಕೆ ಅಂಗಡಿಗೆ ಚೀಟಿಕೊಟ್ಟು ತರಿಸ್ಕೊಂಡು ಬಿಡಿ. ಮತ್ತೆ ಮತ್ತೆ ಹೋಗಿ ತರೋದು ಯಾರು?" ಕೇಶವನೆಂದ.

"ಮಯೂರ ಎಲ್ರಿಗೂ ತಟ್ಟೆ ಹಾಕೇ. ಎಲ್ರಿಗೂ ಒಟ್ಟಿಗೇ ಬಡಿಸಿಬಿಡ್ತೀನಿ" ಮಯೂರ ತಟ್ಟೆಗಳನ್ನು ತರಲೆಂದು ಎದ್ದಳು. ರಾಜನೂ ಸಹಾಯ ಮಾಡಲೆಂದು ಎದ್ದ. "ಮಧುರನ್ನ ಕೇಳ್ಕೊಂಡು ಬಾ. ರೂಂನಲ್ಲೇ ಊಟ ಮಾಡ್ತಾಳಂತೋ... ಅಥವಾ ಎಲ್ಲರ ಒಟ್ಟಿಗೇ ಹಾಲ್ನಲ್ಲಿ ಕೂತ್ಕೊತಾಳಂತೋ..." ರಾಧಾ ಮಯೂರನ್ನ ಕಳಿಸಿದಳು.

"ಇದೇನೇ ಇದು. ಈ ಡಬ್ಬಿ ಇಲ್ಲೇ ಇದೆ. ಆಂಟಿ ಕೊಟ್ಟ ಹುಗ್ಗೀನ ತಿನ್ನಲಿಲ್ವಾ!" ಮುಚ್ಚಳ ತೆಗೆದಳು. ಘಂ ಅಂತಿದೆ. ಚೆನ್ನಾಗೇ ಇದೆ. ಈಗ ತಿಂತೀಯ.

"ನಾನು ಮುಟ್ಟಿಲ್ಲವಲ್ಲ. ಎಲ್ಲರಿಗೂ ಚೂರು ಚೂರು ತಟ್ಟೆಗೆ ಹಾಕಿಬಿಡು. ನಾನೂ ತಟ್ಟೆ ತಗೊಂಡು ಹೊರಕ್ಕೇ ಬರ್ತೀನಿ."

"ಸರಿ ಹೋಯ್ತಾ ಮೂಡು ನಿಂದು."

"ಮತ್ತಿನ್ನೇನು ಮಾಡೋದು. ಅಡ್ಜಸ್ಟ್ ಮಾಡ್ಕೊಳ್ದೇ ಇದ್ರೆ ನಂಗೇ ಕಷ್ಟ."

"ಆ ಹಾ ಹಾ..... ಏನು ನೀನು ಅಡ್ಜಸ್ಟ್ ಮಾಡ್ಕೊಂಡಿರೋದು."

"ಸುಮ್ನಿರು ಮಯೂರ ನನ್ನನ್ನ ರೇಗಿಸ್ಬೇಡ..."

"ರೇಗಿದ್ರೆ ಏನ್ಮಾಡ್ತೀಯ?"

"ಮುಟ್ಟಿಬಿಡ್ತೀನಿ.... ಆಗ ನಿಂಗೆ ಕಷ್ಟ.

"ಏನು ಕಷ್ಟ! ನಾನು ಯಾರಿಗೂ ಹೇಳೋದೇ ಇಲ್ಲ.... ಸುಮ್ನಿದ್ರಾಯ್ತು.

"ನೀನು ಭಂಡಿ ಕಣೇ. ನಿಂಗೆ ಅಜ್ಜಿಯ ಭಯಾನೇ ಇಲ್ವಾ!"

"ನಿಂಗಿದೆಯಾ!...

"ನಿನ್ನಷ್ಟು ಧೈರ್ಯ ನಂಗಿಲ್ಲ ಕಣೇ....

"ಹಾಗೆ ಒಪ್ಕೋ... ಸರಿ ತಟ್ಟೆ ತಗೊಂಡು ಬಾ." ಮಯೂರ ಡಬ್ಬಿಯನ್ನು ಹಿಡಿದು ಹೊರಬಂದಳು. ರಾಜ ಎಲ್ಲರಿಗೂ ತಟ್ಟೆ ಹಾಕಿ ನೀರಿನ ಲೋಟಗಳನ್ನಿಟ್ಟಿದ್ದ. ಊಟದ ಚಾಪೆಗಳನ್ನು ಹಾಕಿದ್ದ. ಅಡಿಗೆ ಪಾತ್ರೆಗಳನ್ನು ತಂದುಬಡಿಸಲು ಪ್ರಾರಂಭಿಸಿದ್ದ. ಮಯೂರ ಅವನ ಕಡೆ ನೋಡಿದಳು. ಅವನು ಕೆಲಸದಲ್ಲಿ ಮಗ್ನನಾಗಿದ್ದ. "ಈ ಡಬ್ಬೀಲಿ ಹುಗ್ಗಿ ಇದೆ. ಇದನ್ನು ಎಲ್ರಿಗೂ ಚೂರು ಚೂರು ಬಡಿಸಿಬಿಡಿ" ಡಬ್ಬಿಯನ್ನು ಅವನು ಕೈಗೆತ್ತಿಕೊಂಡ...."ಥ್ಯಾಂಕ್ಸ್" ಎಂದಳು ನಯವಾಗಿ.

"ಥ್ಯಾಂಕ್ಸ್ ಯಾತಕ್ಕೆ?" ಅವನು ಕತ್ತೆತ್ತಿ ನೋಡಿ ಕೇಳಿದ.

"ತಟ್ಟೆ ಲೋಟ ಎಲ್ಲಾ ಹಾಕಿದೀರಿ.... ನಂಗೆ ಕೆಲಸ ಕಡಿಮೆ ಆಯ್ತಲ್ಲ" ನಸುನಕ್ಕಳು.

"ಮನೆ ಕೆಲ್ಸಾನ ಹಂಚಿಕೊಂಡು ಮಾಡಿದ್ರೆ... ಯಾರ್ಗೂ ಕೆಲ್ಸ ಜಾಸ್ತಿ ಅಂತ ಅನ್ನಿಸೋಲ್ಲ."

"ನೀವು ನಮ್ಮ ಅಜ್ಜಿ ಥರ ಮಾತಾಡ್ತೀರ.." ಕಿಲಕಿಲನೆ ನಕ್ಕಳು.

"ಮಧುರಳೂ ಬಂದು ತಟ್ಟೆ ಬಟ್ಟಲನ್ನಿಟ್ಟುಕೊಂಡಳು. ಮಯೂರ ನಗುನಗುತ್ತಾ ಅವನೊಡನೆ ಮಾತಾಡುತ್ತಿದ್ದುದು ಅವಳಿಗೆ ಸಹನೆಯಾಗಲಿಲ್ಲ. ನೀರಿನ ಲೋಟವನ್ನು ಕುಟ್ಟಿ ಮಯೂರನ ಗಮನವನ್ನೂ ಇತ್ತ ಸೆಳೆದಳು. ಮಯೂರ ನೀರನ್ನು ಬಿಡಿಸಿ, ಅವಳ ಕಡೆ ನೋಡಿ ಅಣಕಿಸಿದಳು.

"ಎಲ್ರೂ ಕೂತ್ಕೊಳ್ಳಿ. ಒಟ್ಟಿಗೇ ಬಿಡಿಸಿಬಿಡ್ತೀನಿ."

"ಅಮ್ಮಾ ನೀವು ಕೂತ್ಕೊಳ್ಳಿ. ನಾನು ಬಿಡಿಸ್ತೀನಿ."

"ಬೇಡ ರಾಜಾ.... ನೀನು ಕೂತ್ಕೋ... ಅವಳು ಬಿಡಿಸ್ತಾಳೆ" ಕೇಶವ ನುಡಿದಾಗ ರಾಜ, ಮಂದಾರಳ ಪಕ್ಕದಲ್ಲಿ ಕುಳಿತ. ಅವನ ಇನ್ನೊಂದು ಪಕ್ಕಕ್ಕೆ ಕೇಶವ, ಮಂದಾರಳ ಎಡ ಮಗ್ಗುಲಲ್ಲಿ ಮಯೂರ ಕುಳಿತಳು. ಸ್ವಲ್ಪ ದೂರದಲ್ಲಿ ಮಧುರ ಕೂತಿದ್ದಳು. ಎದುರಿಗೇ ರಾಜನು ಕೂತಿದ್ದರಿಂದ ಅವಳಿಗೆ ಮುಜುಗರವೆನಿಸಿತ್ತು. ಆಗಾಗ್ಗೆ ಅವನ ಕಡೆ ನೋಡಿದಳು. ಆದರೆ ಅವನು ತಲೆತಗ್ಗಿಸಿ ಊಟವನ್ನು ಮಾಡುತ್ತಿದ್ದ. ಯಾರೂ ಹೆಚ್ಚು ಮಾತಿಲ್ಲದೇ ಬೇಗ ಬೇಗ ಊಟವನ್ನು ಮುಗಿಸಿದರು. ಮಧುರ ತನ್ನ ತಟ್ಟೆಯನ್ನು ತೊಳೆದು, ಅಷ್ಟಕ್ಕೇ ಗೋಮೆ ಹಚ್ಚಿ ಒರೆಸಿ, ತನ್ನ ರೂಮಿಗೆ ಹೊರಟುಹೋದಳು. ರಾಜ, ರಾಧಾಳನ್ನು ಕೂರಿಸಿ ಬಡಿಸಿದ. ಅವಳ ಊಟದ ನಂತರ ಉಳಿದ ಕೆಲಸಗಳಿಗೆ ಸಹಾಯ ಮಾಡಿದ. ಮಯೂರ ಗೋಮೆ ಹಚ್ಚಿದಳು. ಬೇಡ ಬೇಡ ಎಂದರೂ ಅವನು ನೆಲವನ್ನು ಎರಡೆರಡು ಸಾರಿ ಒರೆಸಿದ.

"ಯಾರೋ ಕಂಡೋರ ಮನೆ ಹುಡುಗ.... ಅವನ್ಯಾಕೆ ಈ ಕೆಲಸಗಳನ್ನು ಮಾಡಬೇಕು! ಬೇಡಾಂತ ಹೇಳಿ."

"ಮಾಡ್ಲಿ ಬಿಡು. ಅದರಲ್ಲಿ ತಪ್ಪೇನಿದೆ? ಅವನೂ ಸದ್ಯಕ್ಕೆ ಮನೆಯವನೇ ಕೂತ್ಕೊಂಡು ಏನ್ಮಾಡ್ತಾನೆ? ಈ ವಯಸ್ನಲ್ಲಿ ನಾನೂ ಅಮ್ಮಂಗೆ ಸಹಾಯ ಮಾಡ್ತಿದ್ದೆ."

"ಪುಟ್ಟೀ.... ಪುಟ್ಟೀ" ಗೌರಮ್ಮ ಮೊಮ್ಮಗ್ಳನ್ನು ಕರೆದಳು. ಅವಳಾಗಲೇ ಒಳಗಿನ ರೂಮಿನಲ್ಲಿ ಮಲಗಿಬಿಟ್ಟಿದ್ದಳು.

"ಮಂದಾರ ಏಳೇ... ಅಜ್ಜಿ ಕರೀತಿದಾರೆ." ಕೇಶವ ಹೆಂಡತಿಯ ಕಡೆ ನೋಡಿ, ನಿರಾಸೆಯ ನಗೆಯನ್ನು ನಕ್ಕ.

"ಎಬ್ಬಿಸ್ಬೇಡ. ಮಲಗಿರ್ಲಿ ಬಿಡು" ರಾಧಾ ಎಂದಳು. ಕೇಶವ ತನ್ನ ಹಾಸಿಗೆಯನ್ನು ಹೊರಕ್ಕೆ ತಂದು ಹಾಕಿಕೊಂಡ. ರಾಜ ಸುರಳಿಯನ್ನು ಬಿಚ್ಚಿ ಹಾಸಿಗೆಯನ್ನು ಕೊಡವಿ ಮಗ್ಗುಲು ಹಾಸಿಗೆಯನ್ನು ಹಾಸಿ, ದಿಂಬನ್ನೂ ಇಟ್ಟುಕೊಟ್ಟು ತಾನು ಮಹಡಿಯನ್ನೇರಿದ.

"ಇಲ್ಲಿ ಹೊರಗೆ ಮಲಗ್ತಿದೀಯೇನೋ..." ಗೌರಮ್ಮ ಕೈಯಲ್ಲಿ, ಹುರಿಟ್ಟನ್ನು ಕಲಿಸಿದ್ದ ಪಾತ್ರೆಯೊಂದಿಗೆ ಹೊರಬಂದು ಕೇಳಿದಳು.

"ಹುಂ. ಮಂದಾರ ಅಲ್ಲಿ ಮಂಚದ ಮೇಲೆ ಮಲಗಿಬಿಟ್ಟಿದಾಳೆ.

"ಎಬ್ಬಿಸು ಅವಳನ್ನು. ಹುರಿಟ್ಟು ತಂದಿದೀನಿ. ಕೇಳಿದ್ಲು ಅಂತ ಹೆಚ್ಚೇನೇ ಕಲಿಸಿದ್ದೆ. ಕಾಯಿತುರಿ, ಹಾಲು, ಬೆಲ್ಲ ಎಲ್ಲಾ ಹಾಕಿದೀನಿ. ಸಿಹಿಯಾಗಿ ಚೆನ್ನಾಗಿದೆ. ನೀನೂ ಒಂಚೂರು ತಿಂತೀಯೇನು?...

"ಬೇಡಮ್ಮ ಇಷ್ಟು ಹೊತ್ನಲ್ಲಿ ಇನ್ನೇನು? ಬೇಗನೇ ಕಲಿಸಿದ್ರೆ ಎಲ್ರೂ ತಿನ್ನಬಹುದಾಗಿತ್ತು. ಚೆನ್ನಾಗಿದ್ರೆ ಬೆಳಿಗ್ಗೆ ತಿಂದರಾಯ್ತು."

"ರಾಧಾ, ನೀನೂ ನಿನ್ನ ಮಕ್ಕಳೂ ತಿನ್ನಿ. ಬೆಳಿಗ್ಗೆಗೆ ವಾಸನೆ ಬಂದು ಬಿಡುತ್ತೆ" ಪಾತ್ರೆಯನ್ನು ಅಲ್ಲಿಯೇ ಕಾಣಿಸುವ ಹಾಗೆ ಇಟ್ಟು ಕೈತೊಳೆಯಲು ಹೋದಳು. ರಾಧಾ ಪಾತ್ರೆಯನ್ನೆತ್ತಿಕೊಂಡು ಮುಂದಿನ ರೂಮಿಗೆ ಬಂದಳು.

"ಮಯೂರ, ಕೈ ಹಿಡಿಯೇ, ಅಜ್ಜಿ ಹುರಿಟ್ಟು ಕಲಿಸಿಟ್ಟಿದಾರೆ."

"ನಂಗೆ ಬೇಡಮ್ಮ... ನಂಗೆ ಹುರಿಟ್ಟು ಇಷ್ಟವಿಲ್ಲ.

"ದಂಡ ಆಗುತ್ತೆ. ಸುಮ್ನೆ ತಿನ್ನು. ನೀನೂ ಹಿಡಿ.... ಮಧುರಳ ಮುಂದೆ ಉಂಡೆ ಹಿಡಿದಳು. ಅವಳು ಕೈಯನ್ನು ಚಾಚಿದಳು.

"ಇನ್ನೂ ಕೋಪಾನ ನನ್ಮೇಲೆ.

"ಕೋಪವೂ ಇಲ್ಲ; ತಾಪವೂ ಇಲ್ಲ. ಬಿದ್ಕೊಂಡ್ರೆ ಸಾಕು ಎನಿಸಿದೆ. ಬೆಳಗ್ನಿಂದ ಒಂದು ಗಳಿಗೆ ಬಿಡುವಿಲ್ಲ...." ಹುರಿಟ್ಟಿನ ಉಂಡೆಯನ್ನು ಮಕ್ಕಳಿಬ್ಬ ಕೈಗೂ ಹಾಕಿ ಅಲ್ಲಿಂದ ಹೊರಬಂದಳು.

"ರಾಧಾ ಬಾಯಿಲ್ಲಿ. ಕೂತ್ಕೋ.... ಹಾಸಿಗೆಯ ಮೇಲೆ ಕೂತಿದ್ದ ಕೇಶವ ಹೆಂಡತಿಯನ್ನು ಕರೆದ.

"ಇಷ್ಟು ಹೊತ್ನಲ್ಲಿ ಇನ್ನು ಏನು ನಿಮ್ಮದು..." ಹತ್ತಿರ ಬಂದವಳ ಕೈಹಿಡಿದೆಳೆದು ತನ್ನ ಪಕ್ಕ ಕೂರಿಸಿಕೊಂಡ.

"ನಿಮ್ಮಮ್ಮ ಇನ್ನು ಎಚ್ಚರವಾಗಿಯೇ ಇದಾರೆ.

"ಹುಂ. ಇರಲಿ ಬಿಡು. ನಾಳೆ ಅಕ್ಕಂದಿರು ಬರ್ತಾರಲ್ಲ. ಅವರಿಗೆ ಸೀರೆ ಏನಾದ್ರೂ ಕೊಡ್ಬೇಕಾ?"

"ಸೀರೇನ? ಈಗ್ಯಾಕೆ? ಮದುವೇನಾ? ಮುಂಜೀನಾ? ಏನೂ ಬೇಡ. ಮಧುರಂಗೆ ಒಂದು ಸೀರೆ ತಂದ್ರಾಯ್ತು. ತರದಿದ್ರೂ ಆಯ್ತು. ನನ್ನದೇ ಬೇಕಾದಷ್ಟು ಸೀರೆಗಳಿವೆ.

"ಆದರೂ ತವರು ಮನೆಗೆ ಬಂದ ಹೆಣ್ಣು ಮಕ್ಕಳಿಗೆ ಉಡುಗೊರೆ ಕೊಡಬೇಕು ಅಂತ ಆಸೆ ಇರುತ್ತೆ ಅಮ್ಮಂಗೆ."

"ಸರಿ ಕೊಡಿ... ಎಲ್ರಿಗೂ ಹೊಸ ಸೀರೆ, ಬಟ್ಟೆತನ್ನಿ. ನನ್ನ ಗಂಟೇನು ಹೋಗುತ್ತೆ?"

"ಯಾಕೇ ಕೋಪಾ?"

"ಮತ್ತೆ? ಉಂಡೆ ಚಕ್ಕುಲಿ ಆರತಿ ಅಂತ ನಿಮ್ಮಮ್ಮ ಸಂಭ್ರಮ ಪಡ್ತಿದಾರೆ. ಇದೆಲ್ಲ ನಂಗಿಷ್ಟವಿಲ್ಲ. ನಂಗೆ ಬೇಡ ಅಂತ ನಿಮ್ಮ ಮಗಳು ಮುರಿತುಗೊಂಡು ಕೂತಿದಾಳೆ. ನನ್ನ ಕರ್ಮ.... ನಾನು ಇಬ್ಬರ ಮಧ್ಯೆ ಸಾಯಬೇಕು."

"ಹಾಕ್ತೇನಿ ನೋಡು ಬಾಯ್ಮೇಲೆ. ಸಾಯೋ ಮಾತು ಯಾಕೀಗ...?"

"ಮತ್ತಿನ್ನೇನ್ರೀ. ನನ್ನ ಪರಿಸ್ಥಿತಿ ಯಾರ್ಗೂ ಅರ್ಥವಾಗುಲ್ಲ. ನಾಳೆ ನಿಮ್ಮ ಅಕ್ಕಂದಿರು ಬರ್ತಾರೆ. ನಿಮ್ಮಮ್ಮ ನನ್ಮೇಲೆ ಚಾಡಿ ಹೇಳ್ತಾರೆ. ಅಮ್ಮಂಗೆ ಪಡಲಾರದ ಕಷ್ಟ ಅಂತ ಅವರಿಬ್ರೂ ಪರಿತಪಿಸ್ತಾರೆ. ನಿಮಗೆ ಇದೆಲ್ಲಾ ಏನಾದ್ರೂ ಅರ್ಥ ಆಗುತ್ತಾ? ಇನ್ನು ಮಧುರ... ಅವಳಿಗೆ ಈ ಸಂಭ್ರಮ ಬೇಕಿಲ್ಲ. ಮಯೂರ ಎಡಬಿಡಂಗಿ. ಮಂದಾರ ಚಿಕ್ಕೋಳು

"ಅಬ್ಬಬ್ಬಾ.... ಏನು ಮಾತಾಡ್ತೀಯೇ... ಹಾಗೇ ಲೋಚ ಲೋಚ ಅಂತ ಮುತ್ತು ಕೊಡೋಣ ಅಂತ ಅನ್ನಿಸ್ತಿದೆ."

"ಇದಕ್ಕೇ ಕರೆದಿದ್ದು ಅಂತ ನಂಗೆ ಗೊತ್ತಾಯ್ತು. ಬಿಡಿ ನಾನು ಹೋಗ್ತೀನಿ."

"ನಾಳೆ ಅಕ್ಕಂದಿರು ಬಂದ್ಮೇಲೆ ಸರಸವಾಗಿ ಮಾತನ್ನಾಡೋಕೂ ಆಗುಲ್ಲ. ಕೂತ್ಕೋ ನಿನ್ನ ಗಂಟೇನೂ ಕರಗಿ ಹೋಗುಲ್ಲ."

"ನಂಗೆ ನಿದ್ದೆ ಬರ್ತಿದೆ. ಸುಸ್ತಾಗಿದೆ.

"ಕಾಲು ನೋವಾ? ಒತ್ತಲಾ?.... ಮಂದಾರನ್ನ ಒಳಗೆ ಮಲಗೋಕೆ ಯಾಕೆ ಬಿಟ್ಟೆ?.... ಅವಳ ಕಾಲುಗಳ ಮೇಲೆ ಕೈಯಾಡಿಸಿದ.

"ನೀವು ಭಂಡರು, ಗಂಡಸ್ರು ನಿಮಗೆ ಯಾವ ನಾಚಿಕೆಯೂ ಇಲ್ಲ..." ಎನ್ನುತ್ತಾ ರಾಧಾ ಎದ್ದು ರೂಮಿಗೆ ಬಂದು, ತನ್ನ ಹಾಸಿಗೆಯ ಮೇಲೆ ಮಲಗಿದಳು. ಒಂಟಿಯಾಗಿ ಮಲಗಿದವಳಿಗೆ ಬೇಸರವೂ ಆಗಿತ್ತು. ಮಂದಾರಳ ಮೇಲೆ ಸ್ವಲ್ಪ ಕೋಪವೂ ಬಂದಿತ್ತು. ಗಂಡನ ಆಸೆಗಳನ್ನು ಎಂದೂ ವಿರೋಧಿಸಿದವಳಲ್ಲ.... ಇನ್ನೊಂದು ರೂಮು ಇದ್ದಿದ್ದರೆ ಚೆನ್ನಾಗಿತ್ತೆನಿಸಿತು. ಕೆಲವಾರು ವರ್ಷಗಳಿಂದ ಗಂಡ ಮುಂದಿನ ರೂಮಿನಲ್ಲಿ ಮಲಗುತ್ತಿದ್ದ. ಮಂದಾರ ತಾಯಿಯೊಡನೆ ಒಳಗಿನ ರೂಮಿನಲ್ಲಿ ಮಲಗುತ್ತಿದ್ದಳು. ಹಾಲಿನಲ್ಲಿ ಮಯೂರ, ಮಧುರ ಮಲಗುತ್ತಿದ್ದರು. ಮಕ್ಕಳಿಗೆ ನಿದ್ದೆ ಬಂದ ಮೇಲೆ ಗಂಡ ಬಂದು ಕರೆದಾಗ ರಾಧಾ ಎದ್ದು ಅವನ ರೂಮಿಗೆ ಹೋಗುತ್ತಿದ್ದಳು. ಈಗ ಅದಕ್ಕೂ ಅವಕಾಶವಿಲ್ಲ. ಹೀಗೇ ಮುಂದುವರೆದರೆ, ಗಂಡನಿಗೆ, ತನ್ನ ಮೇಲೆ ನಿರಾಸಕ್ತಿ ಮೂಡಬಹುದು ಅಂತನ್ನಿಸಿದಾಗ, ಏನಾದರೂ ವ್ಯವಸ್ಥೆ ಮಾಡಬೇಕೆಂದುಕೊಂಡಳು.

* * * *

"ನನ್ನ ಅಕ್ಕಂದಿರು ಊರ್ನಿಂದ ಬರ್ತಿದಾರೆ. ಬಸ್‌ಸ್ಟ್ಯಾಂಡ್‌ಗೆ ಹೋಗಿ ಕರ್ಕೊಂಡು ಬಾ..." ಕೇಶವ ರಾಜನಿಗೆ ಹೇಳಿದಾಗ ರಾಧಾ ತಡೆದಳು.

"ಈ ಹುಡ್ಗಂಗೆ ಅವರ ಪರಿಚಯ ಇಲ್ಲ. ಅದ್ಹೇಗೆ ಗುರುತಿಸ್ತಾನೆ? ನೀವೇ ಹೋಗ್ಬನ್ನಿ."

"ಅದೇನು ಕಷ್ಟ... ತುಮಕೂರಿನಿಂದ ಬರೋ ಬಸ್‌ನ ವಿಚಾರಿಸಿ, ಯಾರು ಅಂತ ತಿಳ್ಕೊಂಡು ಕರ್ಕೊಂಡು ಬರ್ತಾನೆ.

"ಏನಾದ್ರೂ ಎಡವಟ್ಟಾದರೆ, ಎಲ್ರೂ ನಿಮ್ಮನ್ನೇ ಬೈತಾರೆ.

"ನನ್ನನ್ನ ತಾನೇ.... ನಿಂಗ್ಯಾಕೆ ಯೋಚ್ನೆ...? ಹಾಗೇ ಸಾಮಾನಿನ ಲಿಸ್ಟ್ ರೆಡಿಯಾಗಿದ್ದರೆ ಕೊಡು. ಶೆಟ್ಟಿ ಅಂಗಡಿಗೆ ಕೊಟ್ಟು ಬರ್ತಾನೆ.

"ಎಲ್ಲಾ ಅವನ್ಯಾಕೆ ಮಾಡ್ಬೇಕು. ಅವನಿಗೇನು ಗೊತ್ತಿದೆ. ಇನ್ನೂ ಹೊಸಬ"

"ಕಲಿತ್ಕೊಳ್ಳಲಿ.... ಒಂದೊಂದಾಗಿ ಪರಿಚಯ ಮಾಡಿಕೊಳ್ಳಲಿ." ರಾಜನ ಕಡೆ ನೋಡಿದಾಗ ಅವನು ನಸುನಕ್ಕ ಚೀಟಿಯನ್ನು ಆತನಿಗೆ ಕೊಟ್ಟು ಕಳಿಸಿದ ಮೇಲೆ ರಾಧ ಗೊಣಗಿದಳು.

"ಕಂಡೋರ ಮನೆ ಹುಡುಗ, ಅವನ್ಯಾಕೆ ಎಲ್ಲವನ್ನೂ ಮಾಡ್ಬೇಕು. ಅವನು ಇಲ್ಲಿ ಪೇಯಿಂಗ್ ಗೆಸ್ಟ್ ಥರ ಇರ್ತಾನೆ ಅಂತ ಅಂದ್ಕೊಂಡಿದ್ದೆ."

"ಪೇಯಿಂಗ್ ಗೆಸ್ಟ್ ಥರ ಇರೋರು, ಮನೆ ಕೆಲಸ ಮಾಡ್ಬಾರ್ದು ಅಂತ ಏನೂ ಇಲ್ಲ.... ನಿನಗೂ ಅನುಕೂಲವಾಗುತ್ತೆ. ಎಷ್ಟೋ ಕೆಲಸ ಕಡಿಮೆ ಆಗುತ್ತೆ."

"ಅವನು ಗಂಡು ಹುಡುಗ ಕಣ್ರೀ.... ಮನೇಲಿ ಬೆಳೆದ ಹೆಣ್ಣು ಹುಡುಗಿಯರಿದಾರೆ. ಅವನಿಗೆ ಹೆಚ್ಚು ಸಲುಗೆ ಕೊಡಬೇಡಿ."

"ಛೆ.... ಇಂಥದ್ದನ್ನೆಲ್ಲ ಯಾಕೆ ಯೋಚಿಸ್ತೀಯ.... ಅವನೂ ನಮ್ಮ ಮನೆಯ ಹುಡುಗನಿದ್ದಂತೆ. ನಮ್ಮ ಮನೆ ಮಕ್ಕಳ ಮೇಲೆ ನಂಬಿಕೆ ಇರಬೇಕು ನಮಗೆ..."

"ಇದು ನಂಬಿಕೆ ಪ್ರಶ್ನೆ ಅಲ್ಲ. ಕಾಲದ ಪ್ರಶ್ನೆ. ಕಾಲ ಒಂದೇ ಥರ ಇರುಲ್ಲ. ನಿಮಗ್ಯಾಕೆ ಇದೆಲ್ಲ ಅರ್ಥವಾಗುಲ್ಲ?"

"ನಂಗೆ ಎಲ್ಲಾ ಅರ್ಥವಾಗುತ್ತೆ. ಮತ್ತೆ ಮತ್ತೆ ಈ ಚರ್ಚೆ ಬೇಡ. ಸುಮ್ಮನಿರು."

"ಯಾರ್ರೀ ಈ ಹುಡ್ಗ? ನಿಮ್ಗೂ ಇವನ್ಗೂ ಏನ್ರೀ ಸಂಬಂಧ?.... ಅವನು ಇಲ್ಲಿಯೇ ಇರಬೇಕು ಅಂತ ಇದ್ರೆ, ಮಹಡಿ ಮೇಲೆ ಇರಲಿ.... ಕೆಳಗೆ ಇಳಿದು ಬರೋದೂ ಬೇಡ. ನನಗೆ ಸಹಾಯ ಮಾಡೋದೂ ಬೇಡ....

"ಸರಿ ಹಾಗಾದ್ರೆ ಅವನಿಗೆ ಹಾಸ್ಟೆಲ್‌ನಲ್ಲಿ ಇರೋಕೆ ವ್ಯವಸ್ಥೆ ಮಾಡ್ತೀನಿ....“

"ಹಾಗೇ ಮಾಡಿ..."

"ಹಾಸ್ಪೆಲ್ಲಿನ ರೂಮು ಸಿಗೋವರ್ಗೂ ಅವನು ಇಲ್ಲಿರ್ತಾನೆ. ನೀನು ಮುಖ ಧುಮುಧುಮು ಅಂತ ಮಾಡ್ಕೊಂಡು ತಿರುಗಬೇಡ... ನಂಗೆ ಬೇಜಾರಾಗುತ್ತೆ."

"ನಿಮಗ್ಯಾರಿಗೂ ನನ್ನ ಬೇಸರದ ಬಗ್ಗೆ ಚಿಂತೇನೇ ಇಲ್ವಾ!"

"ನಿನ್ನ ಚಿಂತೆ.... ನಿನ್ನ ಕಷ್ಟ ಕಡಿಮೆ ಆಗ್ಲಿ ಅಂತಾನೇ ನಾನು ಯೋಚಿಸೋದು. ನಿನಗೆ ಅದು ಅರ್ಥವಾಗುಲ್ಲ ಅಷ್ಟೇ... ಮಧುರ ಸ್ಕೂಲ್ಗೆ ಹೋದ್ಲಾ?"

"ಹುಂ. ಕಳಿಸ್ದೆ ಮನೇಲೇ ಕೂತು ಏನ್ಮಾಡ್ತಾಳೆ? ಅರ್ಧದಿನದ ಕ್ಲಾಸು ಬೇಗ ಬಂದುಬಿಡ್ತಾಳೆ.

"ಮಕ್ಕಳ ಎದುರಿಗೆ, ರಾಜನ ಬಗ್ಗೆ ನಿನಗೆ ಅನ್ನಿಸಿದ್ದನ್ನು ಆಡಬೇಡ. ಪ್ಲೀಸ್. ಮಕ್ಕಳ ಮನಸ್ನಲ್ಲೂ ಅವನ ಬಗ್ಗೆ ಒಳ್ಳೆ ಭಾವನೆ ಬರುಲ್ಲ..." ರಾಧಾ ಉತ್ತರಿಸಲಿಲ್ಲ. "ನಾನು ಬ್ಯಾಂಕಿಗೆ ಹೋಗಿಬರ್ತೀನಿ. ಏನಾದ್ರೂ ತರೋದಿತ್ತಾ?"

"ಸಾಯಂಕಾಲ ತಂದರೆ ಆಯ್ತು. ಹೂವು, ಹಣ್ಣು, ಎಲೆ ಅಡಿಕೆ ಎಲ್ಲಾ ತರಬೇಕು..."

"ಹುಂ. ಹಾಗೇ ಆಯ್ತು. ಸ್ವಲ್ಪ ಕಾಫಿ ಇದ್ದರೆ ಕೊಡ್ತೀಯ."

"ಅದೆಷ್ಟು ಸಾರಿ ಕುಡೀತೀರಿ. ಅದೆಷ್ಟು ಸಾರಿ ಕುಡಿಯೋದು. ಹಾಗೆ ಹೇಳಿದರೂ ಕಾಫಿ ಬೆರೆಸಲು ಅಡಿಗೆ ಮನೆಗೆ ಹೋದಳು.

* * * *

ಮನೆ ಮುಂದೆ ಆಟೋರಿಕ್ಷಾ ನಿಂತ ಸದ್ದಾಯಿತು. ಕೇಶವ ಮುಂಬಾಗಿಲಿಗೆ ಬಂದ. ಇನ್ನೂ ಒಂದು ಆಟೋ ಬಂದು ನಿಂತಿತು. ಒಂದು ರಿಕ್ಷಾದಿಂದ ಪ್ರಭಾವತಿ ಹಾಗೂ ಅವಳ ಮಗಳು ಸುನೀತಾ ಇಳಿದರು. ಇನ್ನೊಂದರಿಂದ ಸತ್ಯವತಿ ಹಾಗೂ ರಾಜ ಇಳಿದರು.

"ಹೇಗಿದ್ದೀಯೋ ಕೇಶವಾ? ಇಬ್ಬರೂ ಅಕ್ಕಂದಿರೂ ಒಟ್ಟಿಗೇ ಕೇಳಿದರು.

"ಹೂಂ ಚೆನ್ನಾಗಿದೀನಿ... ಬನ್ನಿ..." ಒಳಕ್ಕೆ ಸ್ವಾಗತಿಸಿದ.

"ಬಸ್ ಸ್ಟಾಂಡ್‌ಗೆ ನೀನೇ ಬರ್ತೀಯ ಅಂತ ಅಂದುಕೊಂಡಿದ್ದೆ. ಯಾರು ಈ ಹುಡುಗ... ಅವನೇ ಬಂದು ಕೇಳಿದ್ದರಿಂದ ಗೊತ್ತಾಯ್ತು."

ಪ್ರಭಾವತಿ ನುಡಿದಾಗ ಒಳಗಿನಿಂದ ರಾಧಾ ಬಂದು ಅವರುಗಳನ್ನು ಸ್ವಾಗತಿಸಿ ನುಡಿದಳು.

"ನಾನು ಇವರಿಗೆ ಹೇಳ್ದೆ.... ನೀವೇ ಹೋಗಿ ಅಂತ..."

"ಪರವಾಗಿಲ್ಲ ಬಿಡು ರಾಧಾ. ನಮಗೇನು ಊರು ಹೊಸದೇ. ಒಂದು ರಿಕ್ಷಾ ಮಾಡ್ಕೊಂಡು ಸೀದಾ ಬಂದು ಮನೆ ಮುಂದೆ ಇಳಿಯುತ್ತಿದ್ದೆವು. ನಮ್ಮ ಮನೇಲೆ ಇದಾನಂತೆ" ಸತ್ಯವತಿ ಕೇಳಿದಾಗ, ಕೇಶವ ತಲೆಯಾಡಿಸಿ ಹುಂ ಎಂದ. ರಾಜ ಆಟೋದವರನ್ನು ಕಳಿಸಿ, ಲಗೇಜುಗಳನ್ನು ಒಳಕ್ಕೆ ತಂದಿಟ್ಟ.

"ಲಗೇಜು ಸರಿಯಾಗಿದ್ಯಾ ನೋಡ್ಕೊಳ್ಳಿ. ಹೋಗಿ ಕೈಕಾಲು ತೊಳ್ಕೊಂಡು ಬನ್ನಿ. ಕಾಫಿ ತಗೊಂಡು ಬಾ ರಾಧಾ..."

"ಮಕ್ಕಳು ಎಲ್ಲಿ? ಸದ್ದೇ ಇಲ್ಲ..." ಸತ್ಯವತಿ ಕಣ್ಣಾಡಿಸಿದಳು.

"ಸ್ಕೂಲ್ಗೆ ಹೋಗಿದಾರೆ. ಇನ್ನೇನು ಬರುವ ಹೊತ್ತಾಯ್ತು..."

"ಮಧೂನೂ ಹೋಗಿದಾಳಾ?" ಇಬ್ಬರೂ ಒಟ್ಟಿಗೇ ಕೇಳಿದರು.

"ಹುಂ. ಟೆಸ್ಟ್ ಇತ್ತೂ ಹೋಗ್ಲೇ ಬೇಕಾಗಿತ್ತು." ರಾಧಾ ತಟ್ಟನೆ ನುಡಿದಳು.

"ಏನೇ ಚುನ್ನೀ... ಯಾವ ಕ್ಲಾಸೇ ನೀನೀಗ? ಕೇಶವ ತನ್ನ ಅಕ್ಕನ ಮಗಳನ್ನು ಕೇಳಿದ.

"ಫಸ್ಟ್ ಪಿ.ಯು.ಸಿ...

"ಗುಡ್ ನಿನ್ನ ತಮ್ಮ... ಅವನು ಯಾವ ಕ್ಲಾಸ್ನಲ್ಲಿ ಓದ್ತಿದಾನೆ.?"

"ಅವನು ನೈನ್ತ್ ಸ್ಟ್ಯಾಂಡರ್ಡ್ ಅವನಿಗೆ ಗೊತ್ತಿಲ್ಲ ನಾವಿಬ್ರೂ ಬಂದಿರೋದು. ಸ್ಕೂಲ್ನಿಂದ ಬಂದ್ಮೇಲೆ ಸಖತ್ ಗಲಾಟೆ ಮಾಡ್ತಾನೆ" ಸುನೀತಾ ನಕ್ಕಳು.

"ಅದನ್ನು ಕರ್ಕೊಂಡು ಬರ್ಬೇಕಾಗಿತ್ತು..." ಗೌರಮ್ಮ ಬಂದು ನಿಂತು ನುಡಿದಳು. ಹೆಣ್ಣು ಮಕ್ಕಳಿಬ್ಬರೂ ಎದ್ದು ತಾಯಿಯ ಬಳಿಗ ಬಂದರು. ಗೌರಮ್ಮ ಸೀರೆಯನ್ನು ಮುದುರಿಕೊಂಡು ಹಿಂದೆ ಸರಿದಳು. ನಾನಿನ್ನು ಮಡಿಲಿದೀನಿ. ನಂದಿನ್ನು ಊಟ ಆಗಿಲ್ಲ. ಪ್ರಯಾಣದ ಮೈಲಿಗೆ ದೂರ ನಿಂತ್ಕೊಳ್ಳಿ."

"ನಾನೇನು ಮುಟ್ಟುಲ್ಲ. ನಮಗೆ ಗೊತ್ತಿಲ್ವೇ.... ನೀನು ಹೇಗಿದೀಯ?"

"ನೋಡಿ ಹೀಗಿದೀನಿ... ಕಲ್ಲು ಗುಂಡು ಇದ್ದ ಹಾಗೆ..."

"ಯಾಕಮ್ಮ ಹೀಗೆಲ್ಲಾ ಮಾತಾಡ್ತೀಯ. ನೀನು ಸದಾಕಾಲ ಆರೋಗ್ಯವಾಗಿರಬೇಕು. ನಮಗೆಲ್ಲ ಹಿರೇ ದಿಕ್ಕು ನೀನೊಬ್ಬಳೇ..." ಕೇಶವ ತಲೆಯಾಡಿಸಿದ.

"ಹುಂ. ಹಿರೇದಿಕ್ಕು...ಯಾರಿಗ್ಬೇಕು... ಇದೀನಿ ಹೊರೆಯಾಗಿ..."

"ಸರಿ. ನಿನ್ನ ಮಾತಿನ ಲಕ್ಷಣವೇ ಹೀಗೆ. ಹೋಗ್ಲಿ ಏನಡಿಗೆ ಮಾಡಿದೀಯ...?

"ಸಿಹಿ ಕುಂಬಳಕಾಯಿ ಹುಳಿತೊವ್ವೆ, ಅನ್ನ, ಸಾರು, ಚಟ್ನಿ, ಹಪ್ಪಳ, ಸಂಡಿಗೆ.

"ಅಬ್ಬಬ್ಬಾ.... ಇವತ್ತೇ ಸಂಭ್ರಮದ ಹಬ್ಬ ಇದ್ದ ಹಾಗಿದೆ."

"ನನ್ನ ಕೈಲಾಗುವವರೆಗೂ ಮಾಡ್ತೀನಿ. ಆಮೇಲೆ ನೀವುಂಟು. ನಿಮ್ಮ ನಾದಿನಿ ಉಂಟು..."

"ಹೇಗಿದೀಯ ರಾಧಾ... ಯಾಕೆ ಸಪ್ಪಗಿದೀಯ... ಹುಷಾರಾಗಿದೀಯ ತಾನೇ?" ಸತ್ಯವತಿ ವಿಚಾರಿಸಿದಳು.

"ಹುಂ... ಹುಷಾರಾಗಿಯೇ ಇದೀನಿ. ಎರಡು ದಿನದಿಂದ ಸ್ವಲ್ಪ ನಿದ್ದೆ ಕಮ್ಮಿ ಅಷ್ಟೇ... ಸ್ವಲ್ಪ ಆತಂಕವೂ ಆಗಿತ್ತು. ಇನ್ನೂ ನೀವುಗಳು ಬಂದ್ರಲ್ಲ... ನಿರಾತಂಕ" ರಾಧಾ ನಗುತ್ತಾ ನುಡಿದಾಗ ಸತ್ಯವತಿ ವಿಶ್ವಾಸದಿಂದ ಬೆನ್ನ ಮೇಲೆ ಕೈಯಾಡಿಸಿದಳು. "ನೀವುಗಳು ಸುಧಾರಿಸಿಕೊಳ್ಳಿ. ಕಾಫಿ ತರ್ತೀನಿ" ರಾಧಾ ಒಳಗೆ ನಡೆದಳು. ರಾಜ ಅವಳ ಹಿಂದೆ ನಡೆದ.

"ಯಾರೀ ಹುಡುಗ.... ನಿಮ್ಮ ಮನೇಲೇ ಇದಾನಂತೆ."

"ಹುಂ. ಇಲ್ಲಿಯ ಇಂಜನಿಯರಿಂಗ್ ಕಾಲೇಜ್ನಲ್ಲಿ ಸೀಟು ಸಿಕ್ಕಿದೆ. ಸದ್ಯಕ್ಕೆ ನಮ್ಮ ಮನೇಲೆ ಇರ್ತಾನೆ." ಮಾವನ ಸ್ನೇಹಿತರ ಮೊಮ್ಮಗ."

"ಹುಡುಗ ಸಭ್ಯನ ಹಾಗೆ ಕಾಣ್ತಾನೆ. ಆದ್ರೂ ವಿಪರೀತ ಸಲುಗೆ ಕೊಡ್ಬೇಡಿ. ಪ್ರಭಾವತಿ ಎಚ್ಚರಿಸಿದಳು. ಕೇಶವ ಸುಮ್ಮನೆ ಮೇಲುನಗೆ ನಕ್ಕ. ರಾಜ ಎಲ್ಲರಿಗೂ ಕಾಫಿಯನ್ನು ತಂದಿತ್ತ. ಯಾವಾಗಲೋ ಮಹಡಿಯನ್ನೇರಿ ತನ್ನ ರೂಮನ್ನು ಸೇರಿದ್ದ.

* * * *

ಹೂಗಳನ್ನು ಬಿಚ್ಚಿಸೆದು, ಚೀಲವನ್ನು ಅಲ್ಲಿಯೇ ನೆಲದ ಮೇಲಿಟ್ಟು ಮಂದಾರ, ಅತ್ತೇ.... ಎನ್ನುತ್ತಾ ಪ್ರಭಾವತಿಯ ಬಳಿಗೆ ಧಾವಿಸಿ ಬಂದು

ತಬ್ಬಿಕೊಂಡಳು. ಏನೇ ಪುಟ್ಟೀ ಹೇಗಿದೀಯ... ಆಯ್ತಾ ಸ್ಕೂಲು, ಪ್ರಭಾವತಿ ಮೈದಡವಿ ಕೇಳಿದಳು. "ಹೂಂ." ಎಂದಳು ಮಂದಾರ. ಸತ್ಯವತಿಯ ಕಡೆ ನೋಡಿ ಮುಗುಳ್ನಕ್ಕಳು ಅವಳ ಪಕ್ಕ ಕುಳಿತಿದ್ದ ಸುನೀತಳನ್ನು ಕಂಡಳು.

"ಏನೇ ಚುನ್ನೀ.... ನೀನೂ ಬಂದ್ಬಿಟ್ಯಾ?"

"ಯಾಕೆ? ಬರಬಾರದಾಗಿತ್ತಾ? ಅವಳು ಸವಾಲೆಸೆದಳು.

"ಅವಳು ನಿಂಗಿಂತ ದೊಡ್ಡೋಳು. ಚುನ್ನಿಗಿನ್ನಿ ಅಂತ ಕರೀಬಾರ್ದು ಅಕ್ಕಾ ಅಂತ ಕರೆಯಬೇಕು" ರಾಧಾ ಮಗಳಿಗೆ ತಿಳುವಳಿಕೆ ಹೇಳಿದಳು.

"ವಿನೀತ ಬರಲಿಲ್ವಾ?....

"ಗಂಡನಿಗ್ಯಾಕೆ ಗೌರೀ ದುಃಖ ಅಂತ, ಈ ಹೆಂಗಸರ ಸಂಭ್ರಮದಲ್ಲಿ ಅವನಿಗೇನು ಕೆಲಸ?" ಸತ್ಯವತಿ ನಗುತ್ತಾ ನುಡಿದಳು.

"ಅಂದ್ರೇ...."

"ಏನಿಲ್ಲ...." ನೀನು ಹೋಗಿ ಯೂನಿಫಾರಂ ಬಿಚ್ಚಿ ಕೈಕಾಲು ತೊಳ್ಕೋ" ಮಂದಾರ ಅಲ್ಲಿಂದ ಸರಿದಳು. ಮಯೂರ, ಮಂದಾರ ಒಟ್ಟಾಗಿ ನಡೆದು ಬಂದರು. ಒಳಬಾಗಿಲಿನ ಬಳಿ ಬಂದ ಮಯೂರ ಬಾಗಿ ನೋಡಿದಳು ಅತ್ತೇರು ಇಬ್ರೂ ಬಂದಿದ್ದಾರೆ. ಎಂದು ಪಿಸುದನಿಯಲ್ಲಿ, ಹೊರಬಾಗಿಲಲ್ಲಿ ನಿಂತಿದ್ದ ಮಧುರಳಿಗೆ ಹೇಳಿದಳು.

"ನೀನು ಒಳಬಾಗಿಲಿಗೆ ಅಡ್ಡವಾಗಿ ನಿಂತ್ಕೋ. ನಾನು ಸರ್ರಂತೆ ರೂಮಿಗೆ ಹೋಗಿಬಿಡ್ತೀನಿ" ಮಯೂರ ಅಡ್ಡ ನಿಂತಳು. ಮಧುರ ರೂಮಿನೊಳಗೆ, ಓಡಿಹೋಗಿ ಸೇರಿಕೊಂಡು ಬಾಗಿಲನ್ನು ಹಾಕಿಕೊಂಡಳು.

"ಅಬ್ಬಾ.... ಏನೇ ಮಯೂರ ಇಷ್ಟು ಎತ್ತರ ಬೆಳೆದು ಬಿಟ್ಟಿದೀಯಲ್ಲೇ..." ಅತ್ತೆಯರಿಬ್ಬರೂ ಅವಳನ್ನೇ ಮೆಚ್ಚುಗೆಯಿಂದ ನೋಡಿದರು.

"ಬಟ್ಟೆ ಬದಲಾಯಿಸಿ ಬಿಟ್ಟುಬರ್ತೀನಿ" ಮಯೂರ ನಸುನಕ್ಕು ಒಳಗಿನ ಕೋಣೆಗೆ ಬಂದಳು.

"ಮಧುರ ಎಲ್ಲೇ.... ನಿನ್ನ ಜೊತೆ ಬರಲಿಲ್ವಾ?" ಪಿಸುದನಿಯಲ್ಲಿ ರಾಧಾ ಆತಂಕದಿಂದ ಕೇಳಿದಳು.

"ಬಂದ್ಲಮ್ಮಾ.... ಅತ್ತೇರಿಗೆ ಕಾಣದ ಹಾಗೆ ರೂಮಿಗೆ ಓಡಿದಳು." ಮಯೂರ ಕಿಸಕಿಸ ನಗುತ್ತಾ ನುಡಿದಳು.

"ಎಲ್ಲೀ ನಮ್ಮ ಸ್ಪೆಷಲ್ ಹುಡುಗಿ. ಅವಳಿನ್ನೂ ಬರಲಿಲ್ಲವಲ್ಲ..." ಸತ್ಯವತಿ ರಾಗವಾಗಿ ಕೇಳಿದಳು.

"ರೂಂನಲ್ಲಿದ್ದಾಳೆ. ಅವಳಿಗೆ ನಾಚಿಕೆ."

"ನಾಚಿಕೆ ಎಂಥದು? ಹೋಗೇ ಚುನ್ನೀ ಅವಳನ್ನೂ ಮಾತಾಡ್ಸಿಕೊಂಡು ಕರ್ಕೊಂಡು ಬಾ.... ಅವಳಿಗೋಸ್ಕರವೇ ನಾವು ಬಂದಿರೋದು..." ಚುನ್ನಿ ಏಳಲಿಲ್ಲ.

"ಅವಳಿಗೆ ಏನು ತಂದಿದೀರಿ ಅತ್ತೇ..." ಮಂದಾರ ಕುತೂಹಲದಿಂದ ಕೇಳಿದಳು.

"ಏನೇನೋ ತಂದಿದೀವಿ. ಮೊದಲು ಅವಳು ಹೊರಗೆ ಬರಲಿ..."

"ಅವಳು ಮೊನ್ನೆಯಿಂದ ರೂಂನ ಒಳಗೇ ಇದಾಳೆ. ರೂಂನಿಂದ ಆಚೆ ಹೆಚ್ಚು ಬರೋದೇ ಇಲ್ಲ. ಅವಳು ಮಡಿ.... ನಿಮ್ಗೆ ಗೊತ್ತಾ?" ಅವರುಗಳು ಕಿಸಿಕಿಸಿ ನಕ್ಕರು. ರಾಧಾ ರೇಗಿದಳು.

"ಮಂದಾರನನ ಇತ್ಲಾಗೆ ಎಳ್ಕೊಂಡು ಬಾ. ಏನೇನೋ ಆಡ್ತಾಳೆ."

"ಹುಂ.... ನಾನು ಬರುಲ್ಲ" ಅತ್ತೆಯ ಬೆನ್ನ ಹಿಂದೆ ನಿಂತಳು.

"ಅಮ್ಮ ಎಲ್ಲಿ? ಸದ್ದೇ ಇಲ್ಲ."

"ಅವರು ಊಟಕ್ಕೆ ಕೂತಿದಾರೆ. ಇನ್ನೇನು ಆಯ್ತು ಅಂತ ಕಾಣುತ್ತೆ. ಮಯೂರ ಎಲ್ರಿಗೂ ತಟ್ಟೆ ಹಾಕು..."

"ಏಳೇ ಚುನ್ನಿ ಎದ್ದು ಸಹಾಯ ಮಾಡೇ."

ಕೇಶವ ಮಹಡಿಯ ರೂಮಿನ ಕಾಲಿಂಗ್ ಬೆಲ್‌ನ್ನು ಒತ್ತಿದ. ಕೆಲವೇ ನಿಮಿಷಗಳಲ್ಲಿ ರಾಜ ಕೆಳಗಿಳಿದು ಬಂದ.... ಊಟದ ಮನೆಯಲ್ಲಿ ಕೆಲವರಿಗೆ, ಹಾಲಿನಲ್ಲಿ ಕೆಲವರಿಗೆ ತಟ್ಟೆಯನ್ನು ಹಾಕಲಾಯಿತು. ಕೇಶವ, ರಾಜನ ಕೈಗೆ ಹಣವನ್ನು ಕೊಟ್ಟು ಹೊರಕ್ಕೆ ಎಲ್ಲಿಗೋ ಕಳಿಸಿದ. ಗೌರಮ್ಮನ ಊಟ ಮುಗಿದಿತ್ತು. ತೇಗುತ್ತಾ ಎಲೆಯನ್ನು ಮುದುರಿ ಎತ್ತಿ, ಕೈಯಲ್ಲಿ ನೀರಿನ ಚೊಂಬನ್ನು ಹಿಡಿದು, ಕೈತೊಳೆಯಲು ಹಿತ್ತಿಲಿಗೆ ಹೋದಳು. ರಾಧಾ, ಎಲ್ರೂ ಬನ್ನಿ... ಎಂದು ಕರೆದಳು.

"ಅತ್ತೇ.... ನಿಮ್ಮ ಮಡೀ ಕೆಲ್ಸ ಮುಗೀತಾ? ಮಧುರನ್ನ ಊಟಕ್ಕೆ ಕರೆಯೋದಾ?" ರಾಧಾ ಕೇಳಿದಾಗ, ಇದ್ದಕ್ಕಿದ್ದಂತೆ ಎಲ್ಲರೂ ಮೌನಿಗಳಾದರೂ. ಒಬ್ಬೊಬ್ಬರ ಮನದಲ್ಲಿ ಒಂದೊಂದು ಆಲೋಚನೆ.

"ಹುಂ. ಧಾರಾಳವಾಗಿ ಕರಿ. ನಂದು ಇನ್ನೇನಿದೆ?... ರಾತ್ರಿ ಫಲಾರದವರೆಗೂ ನನಗೆ ಯಾವ ಮಡೀ ಕೆಲಸವೂ ಇಲ್ಲ." ಗೌರಮ್ಮ ಎಂಜಲೆಲೆಯನ್ನು ತೆಗೆದ ಜಾಗಕ್ಕೆ, ಹಸುವಿನ ಸೆಗಣಿಯನ್ನು ಹಾಕಿ ಸಾರಿಸಿ, ಒರೆಸಿದಳು. ಹೊರಬಂದು, ಎಲ್ಲರಿಗೂ ಕಾಣುವಂತೆ, ನೆಲದ ಮೇಲೆ ಕೈಯೂರಿ ಕುಳಿತಳು.

"ಹೋಗೇ ಮಯೂರ, ಮಧುರನ್ನ ಊಟಕ್ಕೆ ಬಾ ಅಂತ ಕರಿ...." ರಾಧಾ ಬಡಿಸಲು ಮುಂದಾದಳು. ರಾಜ ಅವಳಿಗೆ ಸಹಾಯಕನಾಗಿ ಬಂದ. ಅಕ್ಕತಂಗಿಯರಿಬ್ಬರೂ ಅವನ ಚಲನವಲನಗಳನ್ನೇ ಗಮನಿಸುತ್ತಿದ್ದರು. ರಾಧಾಳಿಗೆ ಗಮನಕ್ಕೆ ಬಂದು, ಅತ್ತಿಗೆಯರಿಬ್ಬರೂ, ಅವನ ಬಗ್ಗೆ ವಿಚಾರಿಸದೇ ಬಿಡುವವರಲ್ಲ ಎಂದುಕೊಂಡಳು.

ಮಧುರ ಹೊರಗೆ ಬಂದು ಊಟಕ್ಕೆ ಕುಳಿತುಕೊಳ್ಳಲು ಒಪ್ಪಲಿಲ್ಲ. ತನಗೆ ನಾಚಿಕೆ ಆಗುತ್ತದೆಂದು ಹೇಳಿದಳು. ಹಿರಿಯ ಅತ್ತೆ ರೂಮಿಗೇ ಬಂದಳು.

"ನಿನಗೋಸ್ಕರವೇ ಬಂದಿದೀವಿ. ನಮ್ಮ ಹತ್ರ ನಿನಗೇನು ನಾಚ್ಕೆ... ಸುಮ್ಮನೆ ಬಾ" ಮಧುರ ಮುಖಕ್ಕೆ ಕೈ ಮುಚ್ಚಿ ಕುಳಿತಿದ್ದಳು. ನೀನೀಗ ನಮ್ಮ ಜೊತೆ ಊಟಕ್ಕೆ ಕೂತ್ಕೊಳ್ದೇ ಇದ್ರೆ, ನಾವು ಇವತ್ತೇ ಊರಿಗೆ ವಾಪಸ್ಸು ಹೊರಟುಹೋಗ್ತೀವಿ ಅಷ್ಟೇ." ಮಧುರ ಪೇಚಿಗೆ ಸಿಕ್ಕಿಬಿದ್ದಳು. ತನ್ನ ತಟ್ಟೆ, ಬಟ್ಟಲುಗಳನ್ನು ಹಿಡಿದು ಹೊರಬಂದಳು. ಯಾರ ಕಡೆಗೂ ನೋಡದೇ, ಒಂದು ಕಡೆ ಊಟಕ್ಕೆ ಕುಳಿತಳು. ರಾಜ ಬಡಿಸಲು ಮುಂದಾದ. ಎಲ್ಲರೂ ನಿಧಾನವಾಗಿ ಊಟವನ್ನು ಮಾಡಿದರು. ಕಡೆಯಲ್ಲಿ ರಾಜ, ಎಲ್ಲರಿಗೂ ಜಿಲೇಬಿಯನ್ನು ತಂದು ಬಡಿಸಿದ. ಎಲ್ಲರೂ ಎರಡೆರಡನ್ನು ಹಾಕಿಸಿಕೊಂಡು ತಿಂದರು. ಅಲ್ಲಿಯೇ ಕುಳತಿದ್ದ ಗೌರಮ್ಮ ಪ್ರಶ್ನಿಸದೇ ಬಿಡಲಿಲ್ಲ.

"ಅದೇನು ಜಿಲೇಬಿನೇ...! ನೀನು ತಂದ್ಯೇನೇ ಪ್ರಭಾವತಿ!" ಮಗಳನ್ನು ಕೇಳಿದಳು.

"ಇಲ್ಲಮ್ಮಾ ನಾನು ತರಿಸ್ದೆ" ಕೇಶವನೆಂದ.

"ನಂಗೆ ಹೇಳೋ ಇಲ್ಲ ನೀನು.... ನಂಗೆ ಮೊದ್ಲೇ ಹೇಳಿದ್ರೆ, ನಾನೇ ಮನೇಲಿ ಮಾಡ್ತಿದ್ದೆ. ನಾನೂ ತಿನ್ನಬಹುದಾಗಿತ್ತು." ಜಿಲೇಬಿ ತಿನ್ನುತ್ತಿದ್ದವರ ಕೈಬಾಯಿ ಹಾಗೆ ಸ್ತಬ್ಧವಾಯಿತು. ಹಿರಿಯರಲ್ಲಿ ಅಳುಕು; ಕಿರಿಯರಲ್ಲಿ ಬೇಸರ.

"ನಾಡಿದ್ದು ಮಾಡಿಸಿದರಾಯ್ತು. ಅಡಿಗೆಯವರು ಚೆನ್ನಾಗಿ ಮಾಡ್ತಾರೆ." ಕೇಶವ ಮತ್ತೆ ನುಡಿದಾಗ ಯಾರೂ ಮಾತಾಡಲಿಲ್ಲ. ಆದರೂ ಜಿಲೇಬಿಯ ಸಿಹಿಯ ಸವಿ, ಒಗಟಾಗಿ ಸಪ್ಪೆ ಎನಿಸಿತು.

"ತುತ್ತು ಗಂಟಲಲ್ಲಿ ಇಳೀದ ಹಾಗೆ ಮಾತಾಡ್ತಾರೆ" ರಾಧ ಗೊಣಗಿದಳು. ಮನಸ್ಸು ಕಹಿಯಾಗಿತ್ತು. ತನ್ನ ಊಟದ ಸಮಯದಲ್ಲಿ ಬೇಕೆಂತಲೇ ತಿನ್ನಲಿಲ್ಲ. ಇರಲಿ ಬಿಡಿ. ಸಾಯಂಕಾಲ ಮಕ್ಕಳಿಗೇ ಆಗುತ್ತೆ" ಎಂದು ಹೇಳಿ ಕೈ ಅಡ್ಡಿ ಹಿಡಿದಳು.

"ಅಮ್ಮ ಹಾಗೆ ಮಾತಾಡಿದ್ದು ಅಂತ ನಿಂಗೆ ಬೇಸರ ಅಲ್ವಾ! ಈಗ ನೀನು ತಿನ್ನದೆ ಇದ್ರೆ ನಮಗೆಲ್ಲಾ ಬೇಸರ ಆಗುತ್ತೆ" ಸತ್ಯವತಿ ಹೇಳಿದಳು.

"ಅಮ್ಮ ಮಾತ್ರ ಬದಲಾಗಿಲ್ಲ. ಬದಲಾಗೋದೂ ಇಲ್ಲ. ಸಮಯ ಸಂದರ್ಭ ಒಂದನ್ನು ನೋಡದೇ ಮಾತಾಡಿಬಿಡ್ತಾಳೆ." ಪ್ರಭಾವತಿಯೂ ದನಿಗೂಡಿಸಿದಳು. ಅವರಿಬ್ಬರ ಬಲವಂತಕ್ಕೆ ರಾಧಾ, ಒಂದೆರಡು ಚೂರು ತಿಂದಳು.

* * * *

ಸಾಯಂಕಾಲದ ಹೊತ್ತಿಗೆ, ಅಂಗಡಿಯಿಂದ ದಿನಸಿ ಪದಾರ್ಥಗಳು ಬಂದವು. ರಾಧಾ, ಎಲ್ಲವನ್ನು ತೆಗೆದಿರಿಸಿದಳು. ರಾಜ ಎಲ್ಲವನ್ನು ಒಳಗೆ ತಗೆದುಕೊಂಡು ಹೋಗಿ ಜೋಡಿಸಿಟ್ಟ. ಅಕ್ಕತಂಗಿಯರಿಬ್ಬರೂ, ಜವುಳಿ ಅಂಗಡಿಯ ಕಡೆ ಹೊರಟರು. ಕೇಶವನೂ ಅವರೊಂದಿಗೆ ಹೊರಟ.

"ಒಂದಿಷ್ಟು ಪುರಿ ಉಂಡೆ ಕಟ್ಟೋಣ. ಹೇಗೂ ಅವರಿಬ್ರೂ ಬಂದಿದಾರೆ. ಅವಲಕ್ಕಿ ಪುರಿಯನ್ನು ತರಿಸಿಬಿಡು." ಗೌರಮ್ಮ ಹೇಳಿದಾಗ ರಾಧಾ ರಾಜನ ಕಡೆ ನೋಡಿದಳು.

"ಈಗ ಪುರೀನ ತರೋರು ಯಾರು? ನಿಮ್ಮ ಮಗನೂ ಹೊರಗೆ ಹೋಗಿದಾರೆ."

"ನಾನು ತಗೊಂಡು ಬರ್ತೀನಿ" ರಾಜ ತಟ್ಟನೆ ನುಡಿದಾಗ, ರಾಧ ಅವನ ಕಡೆ ನೋಡಿದಳು.

"ಭಟ್ಟಿ ಎಲ್ಲಿದೆ ಅಂತ ನಿಂಗೇನು ಗೊತ್ತು? ತುಂಬಾ ದೂರದಲ್ಲಿದೆ..."

"ಮಂದಾರನ್ನ ಜೊತೆಗೆ ಕರ್ಕೊಂಡು ಹೋಗು. ಅವಳಿಗೆ ದಾರಿ ಗೊತ್ತಿದೆ."

ಗೌರಮ್ಮ ನುಡಿದಾಗ ರಾಧಾ, ಅತ್ತೆಯನ್ನೇ ವಿಚಿತ್ರವಾಗಿ ನೋಡಿದಳು. ರಾಜ ಎದ್ದು ನಿಂತ. ಗೌರಮ್ಮ ಮಂದಾರನನ್ನು ಕೂಗಿದಳು. ರಾಧಾ ಅವನ ಕೈಗೆ ಚೀಲವನ್ನು ಕೊಟ್ಟು, ಹಣವನ್ನು ಕೊಟ್ಟಳು.

"ಒಂದೈದಾರು ಲೀಟರ್ ತಗೊಂಡು ಬಾ. ಸಾಕು... ಹುಷಾರು ಕಣೇ ಮಂದಾ. ತೀರ ಕತ್ತಲು ಮಾಡ್ಕೋಬೇಡಿ. ಬೇಗ ಬಂದ್ಬಿಡಿ."

"ಹೂಂನಮ್ಮ" ಮಂದಾರ ಅವನೊಂದಿಗೆ ಖುಷಿಯಿಂದ ಹೊರಟಾಗ, ರಾಧಾ ಆತಂಕಗೊಂಡಿದ್ದಳು. ಇಬ್ಬರೂ ಗೇಟನ್ನು ದಾಟಿದ ಮೇಲೆ ಒಳಬಂದಳು.

"ಅತ್ತೇ ನಾನು ಹೀಗಂತೀನೀ ಅಂತ ಕೋಪ ಮಾಡ್ಕೋಬೇಡಿ. ಉಂಡೆ ಕಟ್ಟಲೇಬೇಕಾ? ಹೆಣ್ಣು ಹುಡುಗೀನ, ಊರು ಗೊತ್ತಿಲ್ಲದೋನ ಜೊತೆ ಕಳಿಸೋಕೆ ನಂಗೆ ಸುತರಾಂ ಇಷ್ಟವಿರಲಿಲ್ಲ."

"ಹಾಗಂತ ಮೊದಲೇ ಹೇಳಬೇಕಾಗಿತ್ತು."

"ಈಗ ಕಳಿಸಿದ್ದಾಯ್ತಲ್ಲ. ವಾಪಸ್ಸು ಬರೋವರೆಗೂ ಎದೆ ತವಕದಿಂದ ಹೊಡೆದುಕೊಳ್ಳುತ್ತಿರುತ್ತೆ."

"ಸರಿ ನಾನು ಏನು ಮಾಡಿದ್ರೂ ನಿಮಗೆಲ್ಲಾ ತಪ್ಪಾಗಿ ಕಾಣುತ್ತೆ" ಗೌರಮ್ಮ ಗೊಣಗಿದಾಗ ರಾಧಾ ಉತ್ತರಿಸಲಿಲ್ಲ. ಗೌರಮ್ಮ ಎದ್ದು ಮುಂಬಾಗಿಲಿನಲ್ಲಿ ಬಂದು ನಿಂತಳು. ಅತ್ತೆಗೆ ಅಸಮಾಧಾನವಾಗಿದೆ. ಹೆಣ್ಣು ಮಕ್ಕಳೊಂದಿಗೆ ತನ್ನ ಮೇಲೆ ಚಾಡಿ ಹೇಳದೇ ಇರುವುದಿಲ್ಲ ಅಂತ ಅನ್ನಿಸಿದರೂ, ಹೇಳಿದರೆ ಹೇಳಿಕೊಳ್ಳಲಿ ನಾನು ಈ ಮನೆಯ ಸೊಸೆ.... ನನಗೂ ಮಾತನ್ನಾಡಲು ಹಕ್ಕಿದೆ ಎಂದು ತನಗೆ ತಾನೇ ಹೇಳಿಕೊಂಡಳು. ಆಗಾಗ್ಗೆ ಗಡಿಯಾರದ ಕಡೆ ನೋಡತೊಡಗಿದಳು.

ರೂಮಿನ ಒಳಬಾಗಿಲಲ್ಲೇ ನಿಂತು, ಮಧುರ ತಾಯಿಯನ್ನು ಕರೆದಳು. "ಏನೇ.... ಏನಾದ್ರೂ ಬೇಕಾ?" ಕೇಳಿದಳು ರಾಧಾ.

"ನಾಳೆ, ನೀನೇ ನಂಗೆ ನೀರು ಹಾಕ್ಬೇಕು. ಅಜ್ಜಿಯಾಗ್ಲೀ, ಅತ್ತೆಯರಾಗ್ಲೀ ಅಲ್ಲಿರಕೂಡದು. ಆ ವಿಷಯಕ್ಕೆ ಬಾಯಿ ಹಾಕಕೂಡ್ದು." ಆ ಹೊತ್ನಲ್ಲೂ ರಾಧಳಿಗೆ ನಗುಬಂತು.

"ಸರಿ, ಬೆಳಿಗ್ಗೆ ಬೇಗ ಎಬ್ಬಿಸಿಬಿಡ್ತೀನಿ. ಎಲ್ರೂ ಏಳುವ ಮೊದಲೇ ನಿಂಗೆ ನೀರನ್ನು ಹಾಕಿಬಿಡ್ತೀನಿ."

"ಬೇಗ ಎಬ್ಬಿಸಬೇಡಮ್ಮ ಚಳಿ ಇರುತ್ತೆ..."

"ನಂಗೂ ಬೇಕಾದಷ್ಟು ಕೆಲಸ ಇರುತ್ತೆ. ಈ ಕೆಲಸ ಬೇಗ ಆದರೆ ನನಗೆ ಅನುಕೂಲ ಆಗುತ್ತೆ."

"ಸರಿ. ಈ ಬಚ್ಚಲು ಮನೇಲೇ ಸ್ನಾನ ಮಾಡ್ತೀನಿ. ಅಲ್ಲಿಗೆ ಈ ಬಟ್ಟೆಗಿಟ್ಟೆ ಎಲ್ಲಾ ತಂದು ನೆನೆಸೋಕೆ ಸಾಧ್ಯವಿಲ್ಲ."

"ನಿನ್ನದೊಳ್ಳೇ ತಕರಾರು. ಅದೇನು ಮಾಡ್ತೀಯೋ ಮಾಡು."

"ನಿನ್ನನ್ನ ತಬ್ಕೋ ಬೇಕೂಂತ ಅನ್ನಿಸ್ತಿದೆ. ತಬ್ಬಿಕೊಳ್ಲಾ...?" ಮಧುರ ಕಿಸಕ್ಕನೆ ನಗುತ್ತಾ ಕೇಳಿದಳು.

"ಹುಂ. ನಿಮ್ಮಜ್ಜಿಗೆ ಗೊತ್ತಾದ್ರೆ ಏನಿಲ್ಲ. ಊರೆಲ್ಲಾ ಡಂಗೂರ ಹೊಡ್ಕೊಂಡು ಬರ್ತಾರೆ. ಇಲ್ಲೇ ಗೇಟಿನ ಹತ್ರ ನಿಂತಿದಾರೆ."

"ಅತ್ತೇರೆನ್ನ ಫೋನು ಮಾಡಿ ಕರೆಸ್ದೋರು ಈ ಅಜ್ಜೀನೇ ತಾನೇ.... ಅವರಿಗೆಲ್ಲಾ ಯಾಕಮ್ಮ ಈ ವಿಷಯ ತಿಳಿಯಬೇಕು? ನಂಗಂತೂ ಅಳೂನೆ ಬಂತು."

"ಅದೂ ಈ ಮನೆಯ ಪದ್ಧತಿ. ಅಜ್ಜಿಯ ಆಸೆ"

"ನೀನೂ ಈ ಮನೆಯೋಳೇ.... ನಿನ್ನ ಮನೆಯೋರಿಗೆಲ್ಲಾ ತಿಳಿಸಿದ್ಯಾ?.

"ಇಲ್ಲ ಕಣೇ. ನನ್ನ ತಾಯಿ ಕಡೆಯವರ್ಯಾರಿಗೂ ಏನೂ ತಿಳಿಸಿಲ್ಲ. ಆಮೇಲೆ ಗೊತ್ತಾದ್ರೆ ಅವರುಗಳೂ ನನ್ನನ್ನೇ ಬೈತಾರೆ."

"ಹೋಗಿ, ಊರ್ನೆಲ್ಲಾ ಟಾಂ ಟಾಂ ಹೊಡ್ಕೊಂಡು ಬನ್ನಿ. ನಾನು ನಿಮಗ್ಯಾರಿಗೂ ಹೇಳ್ದೆ ಮುಚ್ಚಿಡಬೇಕಾಗಿತ್ತು."

"ಹಾಗೆಲ್ಲಾ ಮುಚ್ಚಿಡೋಕೆ ಆಗುತ್ತಾ ಮಧು...? ಎಲ್ರಿಗೂ ಅನುಮಾನ ಬಂದಿರೋದು. ಆಗ ಇನ್ನೂ ಎಡವಟ್ಟಾಗಿರ್ತಿತ್ತು."

"ಇದೇ ಸಮಯಕ್ಕೆ ಅಪ್ಪ ಈ ರಾಜನ್ನ ಬೇರೆ ಎಲ್ಲಿಂದ್ಲೋ ಕರ್ಕೊಂಡು ಬಂದಿದಾರೆ. ಅವನ್ಯಾರೋ ಏನೋ, ಅವನ ಎದುರಿಗೆ ಹೇಗಮ್ಮ ಓಡಾಡೋದು?"

"ಇದೆಲ್ಲಾ ನಿಮ್ಮಪ್ಪಂಗೆ ತಿಳೀಬೇಕು. ನಾನೇನ್ಮಾಡ್ಲಿ? ಈಗ ನೋಡು, ಮಂದಾರ ಅವನ ಜೊತೆ ಭಟ್ಟಿಗೆ ಹೋಗಿ ಅರ್ಧಗಂಟೆ ಮೇಲಾಯ್ತು. ಇನ್ನೂ ಬಂದಿಲ್ಲ."

"ಮಯೂರ ಎಲ್ಲಿ?"

"ಅವಳು ಅತ್ತೇರ ಜೊತೆ ಅಂಗಡಿಗೆ ಹೋಗಿದಾಳೆ." ಗೌರಮ್ಮನ ಧ್ವನಿ ಕೇಳಿಸಿತು. ರಾಧಾ ಇತ್ತಬಂದಳು. ರಾಜ, ಅವಲಕ್ಕಿ ಪುರಿಯ ಚೀಲದೊಂದಿಗೆ ಒಳಗೆ ಬಂದ. ರೂಮಿನ ಬಾಗಿಲ ಬಳಿ ನಿಂತಿದ್ದ ಮಧುರಳ ಕಡೆ ನೋಡಿದ. ಮಧುರ ಸರ‍್ರನೆ ತಲೆಯನ್ನು ಹಿಂದಕ್ಕೆ ಎಳೆದುಕೊಂಡಳು.

ಅಂಗಡಿಗೆ ಹೋಗಿದ್ದವರೆಲ್ಲ ಹಿಂತಿರುಗಿದ್ದರು. ತಾನು ತಂದಿದ್ದ ವಸ್ತುಗಳನ್ನು ಹೊರತೆಗೆದು ಚರ್ಚೆಯಲ್ಲಿ ತೊಡಗಿದ್ದರು. ಕುತೂಹಲವನ್ನು ತಾಳಲಾರದೇ ಮಧುರ ಒಳಬಾಗಿಲಲ್ಲಿ ಬಂದುನಿಂತಳು.

"ಅತ್ತೇರು ನಿಂಗೆ ಅಂತ ಸೀರೆ ತಂದಿದಾರೆ." ಮಂದಾರ ವರದಿ ಒಪ್ಪಿಸಿದಳು. ಮಧುರ ಮುಜುಗರಗೊಂಡರೂ, ಕಣ್ಣುಗಳು ಮಿಂಚಿದವು. ಮಯೂರ ಸೀರೆಗಳನ್ನು ಎತ್ತಿ ತೋರಿದಳು. ಸೀರೆಯ ಬದಲು ಚೂಡಿದಾರ್ ಸೆಟ್ ತಂದಿದ್ರೆ ಚೆನ್ನಾಗಿತ್ತೆನಿಸಿತ್ತು. ಆದರೆ ಅದನ್ನಾಡಲಿಲ್ಲ.

"ಇದೆಲ್ಲಾ ಯಾಕೆ ತರೋಕೆ ಹೋದ್ರೀ ಅತ್ತಿಗೆ.... ಇದೇನು ಮದುವೇನೆ?"

"ಮದುವೇಲೂ ಭಾರಿ ಸೀರೆ ತರೋಣವಂತೆ...ಈಗ ಇದು ವಾಡಿಕೆ. ತಂದೆವು. ನಿಂಗೆ ಇಷ್ಟು ಆಯ್ತೇನೇ ಮಧುರ. ಇಲ್ದಿದ್ರೆ ಆಮೇಲೆ ಎಕ್ಸ್‌ಚೇಂಜ್ ಮಾಡ್ಕೋ ಅಷ್ಟೇ."

"ಅಪ್ಪಾ.... ನೀನೇನು ತಂದ್ರಿ?..." ಮಂದಾರ ಕೇಶವನ ಕೈಹಿಡಿದು ಎಳೆದಳು.

"ಕೈ ಬಿಡು. ತೋರಿಸ್ತೀನಿ. ಕೇಶವ ತಾನು ತಂದಿದ್ದ ಸೀರೆ ಬಟ್ಟೆಗಳನ್ನು ಹೊರತೆಗೆದ. ಈ ಸೀರೆ ನಿಮ್ಮಮ್ಮಂಗೆ....

"ಈಗ ನಂಗೆ ಸೀರೆ ತರೋ ಅಗತ್ಯವೇನಿತ್ತು?...

"ತಡೀ ಮಧ್ಯೇ ಬಾಯಿ ಹಾಕಬೇಡ. ಈ ಎರಡು ಸೀರೆಗಳು ನನ್ನ ಅಕ್ಕಂದಿರಿಗೆ, ಈ ನಾಲ್ಕು ಚೂಡಿದಾರ್ ಸೆಟ್ ಬಟ್ಟೆಗಳಿವೆ. ಯಾರಿಗೆ ಯಾವುದು ಬೇಕೋ ಅದನ್ನು ಇಟ್ಕೊಳ್ಳಿ. ಈ ಸೀರೆ ಅಮ್ಮಂಗೆ.... ಈ ಷರ್ಟು ಪ್ಯಾಂಟಿನ ಬಟ್ಟೆ ರಾಜಂಗೆ...." ಎಲ್ಲರೂ ರಾಜನ ಕಡೆ ತಿರುಗಿದರು.

"ನಂಗೆ ಬೇಡ ಸಾರ್..." ರಾಜ ವಿನಯದಿಂದ ಕೇಳಿದ.

"ತಂದ್ಮೇಲೆ ಆಯ್ತು..."

"ನಿನಗೇನೂ ತಗೊಳ್ಳಲಿಲ್ವೇನೋ?" ಗೌರಮ್ಮ ಕೇಳಿದಳು.

"ಇಲ್ಲಮ್ಮ. ನಂಗೆ ತಗೊಳ್ಳಲಿಲ್ಲ."

"ಇದೇ ಹಿಡಿಸುಲ್ಲ ನಂಗೆ. ನಾಳೇನೇ ಹೋಗಿ ನಿನಗೂ ಒಂದು ಸೆಟ್ ಬಟ್ಟೆ ತಗೋ. ದುಡ್ಡಿಲ್ಲದಿದ್ರೆ ಹೇಳು ನಾನು ಕೊಡ್ತೀನಿ" ಎಲ್ಲರೂ ನಕ್ಕರು.

"ಯಾಕ್ರೀ ಯಾಕ್ರೀ ನಗೋದು? ಅವನು ಎಲ್ಲರಿಗೂ ಹೊಸ ಬಟ್ಟೆ ಕೊಡಿಸಿದಾನೆ. ನಾನು ಅವನಿಗೂ ಹೊಸಬಟ್ಟೆ ಕೊಡಿಸ್ತೀನಿ. ತಪ್ಪೇನಿದೆ?"

"ತಪ್ಪೇನಿಲ್ಲ. ನಿನ್ನ ಮಾತು ತಮಾಷೆಯಾಗಿ ಕಾಣಿಸ್ತು ಅದಕ್ಕೇ ನಕ್ಕೆವು. ಈಗ ನಮಗೆಲ್ಲಾ ಯಾಕೆ ಸೀರೆ, ಬೇಡಾಂತ ಎಷ್ಟೋ ಹೇಳಿದ್ವಿ. ಆದರೆ ಅವನು ಕೇಳಲಿಲ್ಲ. ತವರು ಮನೇಯವರು ಸೀರೆ ಕೊಟ್ಟರೆ, ಉಡಲು ನಮಗೂ ಸಂತೋಷವೇ.... ಆದರೆ ಈಗ ಅಗತ್ಯವಿರಲಿಲ್ಲ. ಮದುವೆ ಮಾಡ್ದಾಗ ಕೊಟ್ಟಿದ್ದರಾಗ್ತಿತ್ತು. ಮೂರು ಹೆಣ್ಣು ಮಕ್ಕಳ ಮದುವೇಲಿ ನಮಗೆ ಮೂರು ಸೀರೆ..." ಸತ್ಯವತಿ ನಗುತ್ತಾ ನುಡಿದಾಗ, ರಾಧಳಿಗೆ ಪಿಚ್ಚೆನ್ನಿಸಿತು. ಮೂರು ಹೆಣ್ಣು ಮಕ್ಕಳು ಅಂತ ಒತ್ತಿ ಹೇಳ್ತಿದಾಳೇನೋ ಅಂತ ಅನ್ನಿಸಿತ್ತು.

"ಮಯೂರ, ಎಲ್ಲವನ್ನೂ ಹಿಂದಕ್ಕೆ ತೆಗೆದಿಟ್ಟು, ಕಸ ಗುಡಿಸಿ, ತಟ್ಟೆ ಹಾಕು. ಊಟಕ್ಕೆ ಬಡಿಸ್ತೀನಿ. ಈಗ ಬೇಗ ಮಲಗಿದ್ರೆ ಬೇಗ ಏಳಬಹುದು. ಮಯೂರ ಕಾಲ್ಗೆಜ್ಜೆಗಳ ಸದ್ದು ಮಾಡುತ್ತಾ ಸರಿದಾಡುವಾಗ ಸತ್ಯವತಿ ನುಡಿದಳು.

"ಮಯೂರ, ನಿನ್ನ ಹೆಸರು ನನಗೆ ತಕ್ಕನಾಗಿದೆ. ನಿನ್ನ ಕಾಲ್ಗೆಜ್ಜೆಗಳ ಸದ್ದು, ನೀನು ಡ್ಯಾನ್ಸ್ ಕಲೀತಿದೀಯ ಅನ್ನೋದನ್ನು ಹೇಳ್ತಾ ಇದೆ. ಎಲ್ಲರ ಊಟ ಆದ್ಮೇಲೆ ನೀನೊಂದು ಡ್ಯಾನ್ಸ್ ಮಾಡ್ಲೇಬೇಕು."

"ನಾನು ಡ್ಯಾನ್ಸ್ ಕಲಿತಿದೀನಿ ಅಂತ ನಿಮಗ್ಯಾರು ಹೇಳಿದ್ರು?"

"ನಾನು ಹೇಳ್ದೆ." ಮಂದಾರ ತಟ್ಟನೆ ನುಡಿದಳು.

"ಯಾಕೆ ಹೇಳ್ದೆ ಮಂಗಾ?" ಮಯೂರ ಅವಳಿಗೆ ಒಂದೇಟು ಹಾಕಿದಳು. ಮಂದಾರ ಅವಳಿಂದ ದೂರ ಸರಿದು ನಿಂತು, ಅವಳನ್ನು ಅಣಕಿಸಿದಳು.

"ನಿಂಗೆ ಮಂಗಾ ಅಂತ಼್ೇ ಹೆಸರನ್ನಿಡ್ಬೇಕಾಗಿತ್ತು. ಮಂದಾರ ಅನ್ನೋ ಹೆಸರು ನಿಂಗೊಂದು ಚೂರೂ ಒಪ್ಪಲ್ಲ." ಅವಳೂ ಪ್ರತಿಯಾಗಿ ನುಡಿದಳು.

"ಯಾಕ್ರೀ ಜಗಳ ಆಡ್ತೀರಿ?.... ಮಯೂರ, ಇತ್ಲಾಗೆ ಪೊರಕೇನ ಕೊಡು ನಾನು ಗುಡಿಸ್ತೀನಿ". ಪ್ರಭಾವತಿ ಹೇಳಿದಳು. ಮಯೂರ ಸರಸರನೆ

ಗುಡಿಸಿದಳು. ನಿಧಾನವಾಗಿ ಊಟದ ಕಾರ್ಯಕ್ರಮ ಮುಗಿಯಿತು. ರಾಧಾಳ ಊಟ ಮುಗಿದು, ಅಡಿಗೆ ಮನೆಯಿಂದ ಹೊರಬಂದಾಗ ಹನ್ನೆರಡು ಗಂಟೆಯಾಗಿತ್ತು. ಅಷ್ಟರಲ್ಲಿ ಎಲ್ಲರೂ ಹಾಸಿಗೆಗಳನ್ನು ಹಾಸಿಕೊಂಡು ಮಲಗುವ ಸಿದ್ಧತೆ ನಡೆಸಿದ್ದರು.

* * * *

ಹೊಸ ಜಾಗ, ಸ್ಥಳ ಬದಲಾವಣೆ ಆದುದರಿಂದ, ಅಕ್ಕತಂಗಿಯರಿಗೆ ಬೇಗ ನಿದ್ದೆ ಹತ್ತಿರಲಿಲ್ಲ. ಬೆಳಗ್ಗೆಯ ಹೊತ್ತಿಗೆ ನಿದ್ದೆ ಹತ್ತಿತ್ತು. ಆತಂಕದಿಂದ ರಾಧಳಿಗೆ ನಿದ್ದೆ ಬರಲಿಲ್ಲ. ಐದು ಗಂಟೆ ಹೊಡೆಯುವ ಮೊದಲೇ ಎದ್ದು ಬಚ್ಚಲು ಮನೆಯ ಹಂಡೆಯ ಉರಿಯನ್ನು ಹಾಕಿದಳು. ಎಲ್ಲರೂ ಮಲಗಿದ್ದಾಗಲೇ ಎರಡು ಬಕೆಟ್ ಬಿಸಿನೀರನ್ನು ತಂದು ರೂಮಿನ ಬಚ್ಚಲು ಮನೆಯಲ್ಲಿಯೇ ಮಧುರಂಗೆ ನೀರನ್ನೂ ಹಾಕಿದಳು. ತಲೆಗೆ ಬಿಗಿಯಾಗಿ ಟವೆಲನ್ನು ಸುತ್ತಿದಳು. ಬಿಸಿಬಿಸಿ ಕಾಫಿಯನ್ನು ತಂದು ಮಗಳಿಗೆ ಕೊಟ್ಟಳು.

"ಇಲ್ಲೇ ಒಳಗೆ ಓಡಾಡಿಕೊಂಡಿರು. ಅಡಿಗೆ ಮನೆ ತನಕ ಬರಬೇಡ. ನಾಳೆ ಐದು ನೀರು ಆದ್ಮೇಲೆ ಏನನ್ನು ಬೇಕಾದ್ರೂ ಮುಟ್ಟಬಹುದು. ಎಲ್ಲಿಗೆ ಬೇಕಾದ್ರೂ ಓಡಾಡಬಹುದು."

"ನಂಗೇನು ಗೊತ್ತಿಲ್ವೇನಮ್ಮ ನಿನ್ನಿಂದ ಯಾವ ಕೆಲಸವನ್ನು ಕಲಿಯದಿದ್ದರೂ, ಈ ಮಡಿ ಕೆಲಸ ಮಾತ್ರ ಕಲಿತಿದೀನಿ." ಇಬ್ಬರೂ ನಕ್ಕರು. ತಲೆಗೆ ಟವೆಲನ್ನು ಸುತ್ತಿಕೊಂಡಿದ್ದರೂ, ಕೆನ್ನೆಗೆ ಅರಿಶಿನ ಹಚ್ಚಿಕೊಂಡಿದ್ದರೂ, ಮಗಳ ಮುಖದ ಕಳೆ ಇಮ್ಮಡಿಸಿರುವುದನ್ನು ರಾಧಾ ಗಮನಿಸಿದಳು. ಅಬ್ಬಾ.... ಹೆಣ್ಣು ಮಕ್ಕಳಿಗೆ ಈ ದಿನಗಳಲ್ಲಿ ಅದೇನು ಲಾವಣ್ಯ ಬಂದುಬಿಡುತ್ತೋ.... ಮಳೆಯಲ್ಲಿ ತೊಳೆದ ಹೂವಿನಂತಾಗಿದಾಳೆ. ಮಗಳನ್ನೇ ಮೇಲಿನಿಂದ ಕೆಳಗೆ ನೋಡಿದಳು.

"ಅಮ್ಮ ಯಾಕಮ್ಮಾ ಹೀಗೆ ನೋಡ್ತಿದೀಯ ನಂಗೆ ನಾಚ್ಕೆ ಆಗುತ್ತೆ."

"ತಾಯಿ ಹತ್ರ ಏನು ನಾಚಿಕೆ? ಮಹಡಿ ಮೇಲೆ, ಬಿಸಿಲು ಬಂದ ಮೇಲೆ ಹೋಗಿ ತಲೆ ಕೂದಲನ್ನು ಒಣಗಿಸಿಕೋ, ಶೀತ ಆಗುತ್ತೆ."

"ನಾನು ಅಲ್ಲಿಗೆ ಹೋಗುಲ್ಲಮ್ಮ ಆ ಹುಡ್ಗ ಇರ್ತಾನೆ."

"ಸರಿ. ನಮ್ಮ ಮನೇ ಮಕ್ಕಳಿಗೇ ಬಂಧನ... ಇದ್ದರೆ ಇದ್ದ.... ನಿನ್ನ ಪಾಡಿಗೆ ನೀನು ಹೋಗು. ಬೇಕಾದ್ರೆ ಮಂದಾರನ್ನ ನಿನ್ನ ಜೊತೆ ನಿಲ್ಲಿಸ್ಕೋ."

"ಇವತ್ತು ಸ್ಕೂಲಿಗೆ ರಜ. ಅವಳೆಲ್ಲಿ ಸಿಗ್ತಾಳೆ ನಂಗೆ. ಬಿಡಮ್ಮ ಹಾಗೇ ಒಣಗುತ್ತೆ. ಇಲ್ಲೇ ಒಣಗಿಸಿಕೊಳ್ತೀನಿ."

"ಮೂರು ದಿನದಿಂದ ಈ ರೂಮ್ನಲ್ಲೇ ಕೂತು ಬೇಜಾರಾಗಿಲ್ವೇನೆ! ರೂಮಿನಿಂದ ಹೊರಕ್ಕೆ ಬಾ..." ಮಗಳನ್ನು ನಯವಾಗಿ ಗದರಿ ಹೊರಬಂದಳು. ಕೆಲಸದವಳು ಬಂದು ಕೆಲಸವನ್ನು ಪ್ರಾರಂಭ ಮಾಡಿದ್ದಳು. ಮಲಗಿದ್ದವರೆಲ್ಲ ಒಬ್ಬೊಬ್ಬರಾಗಿ ಎದ್ದರು. ರಾಧಾ ಕಾಫಿಯ ತಯಾರಿನಲ್ಲಿ ತೊಡಗಿದಳು. ರಾಜ ಕೆಳಗಿಳಿದು ಬಂದ. ಅವನು ಕೆಳಗೆ ಬಂದುದನ್ನು ಗಮನಿಸಿ, ಮಧುರ, ಮೆಲ್ಲನೆ ಹೊರಬಂದು ಮಹಡಿಯನ್ನೇರಿದಳು.

"ಅಮ್ಮಾ... ಬೇಗ ಅಡಿಗೆ ಮಾಡಿ, ಅಡಿಗೆ ಮನೆಯನ್ನು ಬಿಟ್ಟುಕೊಡು. ತಿಂಡಿ ಮಾಡಿಬಿಡೋಣ." ಪ್ರಭಾವತಿ ಹೇಳಿದಳು.

"ಊಟದ ಮನೇಲೇ ಒಂದು ಸ್ಟೌವ್ ಇಟ್ಕೊಂಡು ಮಾಡ್ರೇ.... ನನ್ನ ಅಡಿಗೆ, ಊಟ, ಮುಗಿಯೋಕೆ ಎರಡು ಗಂಟೆ ಆಗುತ್ತೆ."

"ನಾನು ಸ್ನಾನ ಮಾಡ್ಕೊಂಡು ಬಂದು ಎಲ್ಲರಿಗೂ ತಿಂಡಿ ಮಾಡಿಕೊಡ್ತೀನಿ. ಆಮೇಲೆ ಏನೇನು ಬೇಕೋ ಮಾಡಿದ್ರಾಯ್ತು" ರಾಧಾ ನುಡಿದಳು.

"ಮಧುರಂಗೆ ನೀರು ಹಾಕಬೇಡ್ವಾ ರಾಧಾ.... ನೀನು ಆ ಕೆಲಸ ನೋಡ್ಕೋ ನಾವಿಬ್ಬರೂ ಈ ಕಡೆ ನೋಡಿಕೊಳ್ತೀವಿ."

"ಅವಳಿಗೆ ನೀರು ಹಾಕುವ ಕೆಲಸ ಆಗ್ಲೇ ಆಯ್ತು..." ರಾಧಾ... ಸ್ವಲ್ಪ ಗರ್ವದಿಂದ ಹೇಳಿಕೊಂಡಳು.

"ಆಯ್ತಾ? ಯಾವಾಗ್ಲೇ... ನಮಗ್ಯಾರಿಗೂ ಗೊತ್ತಾಗ್ಲೇ ಇಲ್ಲ."

"ಎಲ್ಲರೂ ಏಳೋಕೆ ಮುಂಚೇನೇ ಹಾಕಿದ್ದಾಯ್ತು. ಆಮೇಲೆ ನಂಗೆ ಬಿಡುವಾಗುಲ್ಲ. ಆಮೇಲೆ ಅವಳು ಎಲ್ಲರೆದುರಿಗೆ ಬರ್ತಾನೂ ಇರ್ಲಿಲ್ಲ."

"ನಮ್ಮನ್ಯಾರನ್ನಾದ್ರೂ ಎಬ್ಬಿಸಬಾರ್ದಾಗಿತ್ತಾ ರಾಧಾ... ಯಾಕೆ ಎಬ್ಬಿಸಲಿಲ್ಲ.?"

"ನನ್ನೊಬ್ಬಳ ಕೈಲೇ ಆಗ್ದೇ ಇದ್ದಿದ್ರೆ ಎಬ್ಬಿಸ್ತಿದ್ದೆ. ಈಗೇನಾಯ್ತು?.... ಅವಳೂ ತಿಳುವಳಿಕೆಯುಳ್ಳವಳು. ಅವಳಿಗೆ ಎಲ್ಲಾ ಗೊತ್ತಿತ್ತು. ಎಷ್ಟೋ ಸಾರಿ ಅವಳೇ ನನಗೆ ನೀರನ್ನು ಹಾಕಿದಾಳೆ."

"ಸರಿ. ಅರಿಶಿನ ಹಚ್ಕೊಂಡು ಸ್ನಾನ ಮಾಡಿದ್ಲಾ? ಓಕುಳಿ ಮಾಡಿ ಒಂದಾರತಿ ಎತ್ತಿ ಬಚ್ಚಲಿಗೆ ಸುರಿಯಬೇಕಾಗಿತ್ತು." ಗೌರಮ್ಮ ಬಾಯಿ ಹಾಕಿದಳು.

"ಎಲ್ಲಾ ಮಾಡಿದ್ದಾಯ್ತು."

"ನೀನು ತುಂಬಾ ಜಾಣೆ ರಾಧಾ.... ಮಗಳಿಗೆ ಬೇಸರವಾಗದಿರಲಿ, ಸಂಕೋಚವಾಗದಿರಲಿ, ಅಂತ, ನೀನೇ ಒಬ್ಬಳೇ ಕಷ್ಟಪಟ್ಟಿದೀಯ."

"ಕಷ್ಟ ಪಡಲಿಲ್ಲ. ಎಲ್ಲಾ ಅಭ್ಯಾಸಬಲ. ಇದು ನಮ್ಮ ಮನೆ ಕೆಲಸ. ನಾನಲ್ಲದೇ ಇನ್ಯಾರು ಮಾಡ್ತಾರೆ? ನಿಮ್ಮನ್ನೆಲ್ಲ ಎಬ್ಬಿಸಿ ತೊಂದರೆ ಕೊಡೋದ್ಯಾಕೆ ಅಂತ ಅನ್ನಿಸ್ತು. ಹೊಸ ಜಾಗ, ನಿಮಗೆಲ್ಲ ಸರಿಯಾಗಿ ನಿದ್ದೆ ಬಂತೋ ಇಲ್ವೋ."

"ನಂಗೆ ಬರಲಿಲ್ಲ. ಇವಳು ವಿಪರೀತ ಜೋರಾಗಿ ಗೊರಕೆ ಹೊಡೀತಿದ್ಲು." ಅಕ್ಕತಂಗಿಯನ್ನು ಆಕ್ಷೇಪಿಸಿದಳು.

"ನಾನು ಗೊರಕೇನೇ ಹೊಡೆಯುಲ್ಲ. ಇನ್ಯಾರು ಹೊಡೆದ್ರೋ..."

"ನೀನು ನಿದ್ದೇಲಿ ಗೊರಕೆ ಹೊಡೀತೀಯೇ. ಕನವರಿಸ್ತೀಯೋ ನಿಂಗೆ ಹೇಗೆ ಗೊತ್ತಾಗುತ್ತೆ! ಎಚ್ಚರವಾಗಿರೋರ್ಗೆ ಗೊತ್ತಾಗುತ್ತೆ" ಎಲ್ಲರೂ ನಕ್ಕರು.

"ಎಳ್ರೀ... ಬೆಳಗಾಗೆದ್ದು ನಗ್ತಾ ಕೂತ್ರೆ ಕೆಲಸ ಆಗುಲ್ಲ.." ಗೌರಮ್ಮ ದಬಾಯಿಸಿದಳು.

"ರಾಧಾ... ಸ್ವಲ್ಪ ಕಾಫಿ ಕೊಡ್ಬಿಡಮ್ಮಾ... ಇನ್ನೆಂದು ಡೋಸ್ ಪೆಟ್ರೋಲ್ ಬಿದ್ರೇ... ಗಾಡಿ ಸ್ಟಾರ್ಟ್ ಆಗೋದು" ರಾಧಾ ಮುಖ ಸಿಂಡರಿಸದೇ ಬಿಸಿ ಕಾಫಿಯನ್ನು ತಯಾರಿಸಿದಳು. ಆದರೆ ಮುಖದಲ್ಲಿ ಮಂದಹಾಸ ಇರಲಿಲ್ಲ. ಏನೋ ಬೇಸರ. ರಾಜನನ್ನು ತಾನಾಗಿಯೇ ಕರೆದು ಎಲ್ಲರಿಗೂ ಕಾಫಿ ಕೊಡುವಂತೆ ಹೇಳಿದಳು. ತಿಂಡಿಯ ತಯಾರಿಗೆ ಪ್ರಾರಂಭಿಸಿದಳು.

ಒಬ್ಬೊಬ್ಬರಾಗಿ ಸ್ನಾನ ಮಾಡಿ ಮುಗಿಸಿದರು. ನಾಲ್ಕು ಜನ ಹಿರಿಯ ಹೆಂಗಸರ ಹೊರತು ಉಳಿದವರಿಗೆಲ್ಲಾ ತಿಂಡಿ ಆಯಿತು. "ಮಕ್ಕಳೆಲ್ಲಾ ಹೊರಗೆ ಹೋಗಿ" ಎಂದು ಕಳಿಸಿ, ಚಕ್ಕುಲಿ, ಪುರಿ ಉಂಡೆಯನ್ನು ತಯಾರಿಸಲು ಕುಳಿತರು. ಗೌರಮ್ಮ ಅಡಿಗೆ ಕೆಲಸದಲ್ಲಿ ತೊಡಗಿದಳು. ಕೇಶವ, ಪುರೋಹಿತರಿಗೆ ಹೇಳಿ ಬರುತ್ತೀನೆಂದು ಹೊರಟ. ಚಿಕ್ಕವರೆಲ್ಲ ಹಾಲಿನಲ್ಲಿ ಮಾತನಾಡುತ್ತಾ ಕುಳಿತಿದ್ದರು.

"ಏನಾದ್ರೂ ಆಟ ಆಡೋಣ. ಬೇಜಾರಾಗ್ತಿದೆ" ಮಂದಾರ ರಾಗ ತೆಗೆದಳು.

"ಏನು ಸದಾ ಆಟ. ಓದ್ಕೋ ಸುಮ್ನೆ" ಮಯೂರ ಬೈದಳು. ಚುನ್ನಿ ಅವರಿಬ್ಬರ ಜಗಳವನ್ನೂ ನೋಡುತ್ತಾ ಕುಳಿತಳು. ಮಧುರ ಏನನ್ನೋ ಗಹನವಾಗಿ ಯೋಚಿಸುತ್ತಾ ಕುಳಿತಿದ್ದಳು.

"ಏನು ಯೋಚಿಸ್ತಿದೀಯೇ ಮಧು? ಅಂತ್ಯಾಕ್ಷರಿ ಆಡೋಣ್ವಾ?" ಮಂದಾರ ಅವಳ ಕೈ ಎಳೆದಳು.

"ನಿನಗೆ ಗೊತ್ತಿರೋದು ಅದೊಂದೇ. ಅಂತ್ಯಾಕ್ಷರಿ.... ಅಂತ್ಯಾಕ್ಷರಿ... ಸೋಲೋಳು ನೀನೇ" ಮಯೂರ ಮತ್ತೆ ಹಂಗಿಸಿದಳು.

"ನಾನು ಸೋತರೆ ನಿಂಗೇನು? ಸುನೀತಾ ಬಾರೇ ಅಮ್ಮಾ..." ಮಂದಾರ ಅವಳ ದುಂಬಾಲು ಬಿದ್ದಳು.

"ನಂಗೂ ಬೋರ್ ಹೊಡೀತಿದೆ... ಸರಿ ಶುರು ಮಾಡು. ನಾನು ನೀನು ಇಬ್ಬರೇ ಆಡೋಣ..." ಚುನ್ನಿ ಒಪ್ಪಿಗೆ ಕೊಟ್ಟಳು.

ಮಂದಾರ ಹುಮ್ಮಸ್ಸಿನಿಂದ ಪ್ರಾರಂಭಿಸಿದಳು. ಮಂದಾರ ಹೊಸ ಹೊಸ ಕನ್ನಡ ಸಿನಿಮಾ ಹಾಡುಗಳನ್ನೂ ಹೇಳಿದರೆ, ಚುನ್ನಿ ಹಳೇ ಹಿಂದಿ ಸಿನಿಮಾ ಹಾಡುಗಳನ್ನು ಹಾಡಿದಳು. ಅವರಿಗೆ ಅರಿವಿಲ್ಲದೇ, ಮಯೂರ ಮಧುರ ಕೂಡಾ ಆಟಕ್ಕೆ ಸೇರಿಕೊಂಡುಬಿಟ್ಟಿದ್ದರು.

"ಇದು ಮೋಸ.... ನೀವಿಬ್ರೂ ನಿನ್ನ ತಂಗೀಗೆ ಹೇಳಿಕೊಡ್ತಿದೀರಿ. ನಾನು ಬರುಲ್ಲ" ಚುನ್ನಿ ಮೂತಿ ಉದ್ದ ಮಾಡಿದಳು.

"ನಾನು ನಿಮಗೆ ಹೆಲ್ಪ್ ಮಾಡ್ತೀನಿ" ಅಲ್ಲೇ ಬಾಗಿಲ ಬಳಿ ನಿಂತಿದ್ದ ರಾಜ ಮುಂದೆ ಬಂದ. "ಹೇ" ಅಂತ ಮಯೂರ ಮಂದಾರ ಕೂಗು ಹಾಕಿದರು. ಚುನ್ನಿ ನಾಚಿದರೂ ಅವನನ್ನು ತನ್ನ ಪಕ್ಷಕ್ಕೆ ಸೇರಿಕೊಂಡಳು. ಸ್ಪರ್ಧೆ ತೀವ್ರಗತಿಗೆ ಇಳಿದು ಗಲಾಟೆ ಪ್ರಾರಂಭವಾದಾಗ, ಒಳಗಿನಿಂದ ಪ್ರಭಾವತಿ ಕೂಗುಹಾಕಿದಳು.

"ಅದೇನು ಗಲಾಟೆ... ಹೀಗಾ ಆಡೋದು?"

"ನೀನು ಸುಮ್ನಿರಮ್ಮ. ನಾನು ಗೆಲ್ತಾ ಇದೀನಿ" ಚುನ್ನಿ ಸಂಭ್ರಮದಿಂದ ಹೇಳಿದಳು. ಕಡೆಯ ಸುತ್ತಿನಲ್ಲಿ ಚುನ್ನಿ ಗೆದ್ದಳು. ಮಂದಾರ ಮುನಿಸಿಕೊಂಡು ಎದ್ದಾಗ, ರಾಜ ಅವಳ ಕೈ ಹಿಡಿದು ಕೂರಿಸಿದ.

"ನಿಮ್ಮ ಟೀಂ ಸೋತಿದೆ. ನಾವು ಹೋಗಿ ಅಂತ ಹೇಳೋವರೆಗೂ ನೀವುಗಳು ಎದ್ದು ಹೋಗುವಂತಿಲ್ಲ."

"ಇದು ಮೋಸ.... ನೀವ್ಯಾಕ್ರೀ ಅವಳ ಟೀಂಗೆ ಸೇರಿಕೊಂಡ್ರಿ?"

"ನೀವು ಮೂರು ಜನ ಇದ್ರಲ್ಲಾ.... ನಾವು ಇಬ್ರೇ ಇದ್ದದ್ದು."

"ಇದು ಮೋಸ. ಬರೀ ಚೀಟಿಂಗ್..."

"ಏನು ಚೀಟಿಂಗ್! ನೀವೇ ಹೇಳಿ ಮಧುರ. ನಾವು ಮೋಸ ಮಾಡಿದ್ವಾ?" ಅವನು ಮೊಟ್ಟ ಮೊದಲ ಬಾರಿಗೆ ಮಧುರಳೊಡನೆ ನೇರವಾಗಿ ಮಾತಾಡಿದ್ದ. ಅವಳು ತಬ್ಬಿಬ್ಬಾದಳು. ಇಲ್ಲ ಎನ್ನುವಂತೆ ತಲೆಯಾಡಿಸಿದಳು.

"ಇವಳು ಯಾವಾಗ್ಲೂ ಹೀಗೇ. ಬರೀ ತರಲೆ. ಸೋತು ಬಿಡೋದು... ಚೀಟಿಂಗ್ ಅಂತ ಕಿರುಚೋದು..." ಮಯೂರ ತಿರಸ್ಕಾರದಿಂದ ನುಡಿದಳು.

"ನೀನು ನನ್ನ ಟೀಂನಲ್ಲಿದ್ದುದರಿಂದ್ಲೇ ಸೋತಿದ್ದು. ಸೋತರೂ ನನ್ನನ್ನೇ ಅಂತೀಯಲ್ಲ..."

"ಹೌದು ಕಣೇ.... ನಾನು ಬೇಕೂಂತ್ಲೇ ನಿನ್ನನ್ನ ಸೋಲಿಸಿದ್ದು. ಏನೇ ಮಾಡ್ತೀಯಾ?"

"ಏ ಮಯೂರೀ.... ದೊಡ್ಡೋಳಾಗಿ ನೀನೂ ಜಗಳ ಆಡ್ತೀಯಲ್ಲಾ. ಸುಮ್ಮನಿರೋಕೆ ಆಗುಲ್ವಾ! ಅದಕ್ಕೆ ಅಮ್ಮ ಹೇಳೋದು.... ನೀವು ಆಡೋದು ಆಟ ಅಲ್ಲ, ಜಗಳ ಅಂತ. ಆಟ ಸಾಕು. ಇನ್ನೂ ಎಲ್ರೂ ಏಳೋಣ...

"ಹ್ಞಾಂ... ಹ್ಞಾಂ.... ನಾವು ಏಳಿ ಅಂತ ಹೇಳ್ದೇ ನೀವು ಏಳುವ ಹಾಗಿಲ್ಲ" ರಾಜ ವ[illegible] ತಡೆದ. ಮಧುರಳ ಮುಖ ಕೆಂಪಾಯಿತು.

"ಇದೆಂಥಾ [illegible]ಡೀಷನ್ನೂ? ನಾನು ಎಲ್ಲೂ ಕೇಳಿರಲಿಲ್ಲ. ಏನೇ ಚುನ್ನಿ ನೀನು ಎಲ್ಲಾದ್ರೂ ಕೇಳಿದ್ಯಾ!"

"ಇಲ್ಲ ಕೇಳಿರಲಿಲ್ಲ ನಂಗೆ ಗೊತ್ತಿಲ್ಲ"

"ಮತ್ತೆ ಹೇಳು ನಿನ್ನ ಪಾರ್ಟ್‌ನರ್‌ಗೆ..."

"ಒಂದ್ನಿಮಿಷ ತಡೀರಿ. ಈಗ ನಾವು ಗೆದ್ದಿದೀವಿ. ನಮಗೆ ಏನಾದ್ರೂ ಬಹುಮಾನ ಕೊಡಬೇಕು ತಾನೇ.... ಏನು ಕೊಡ್ತೀರಿ!" ಅಕ್ಕ ತಂಗಿಯರ ಮುಖ ಪೆಚ್ಚಾಗಿತ್ತು ಮುಖ ಮುಖ ನೋಡಿಕೊಂಡರು.

"ಹೆದರಬೇಡಿ.... ನಾನು ಏನನ್ನೂ ಕೇಳುವುದಿಲ್ಲ. ಸುನೀತಾರವರೇ.... ನಿಮಗೆ ಏನಾದ್ರೂ ಬೇಕಾ?.... ಈಗಲೇ ಕೇಳಿಬಿಡಿ."

"ನನಗೆ ಏನೂ ತೋಚ್ತಿಲ್ಲ. ನಾವು ಎಂದೂ ಸೋತವರನ್ನೂ ಏನನ್ನೂ ಕೇಳಿಲ್ಲ."

"ಎಂದಾದ್ರೂ ಗೆದ್ದಿದ್ರೆ ತಾನೇ ಸೋತವರನ್ನ ಕೇಳೋದು."

"ಅದು ಸರಿ. ಆದರೆ ಗೆದ್ದವರು ಕೇಳಿದ್ದನ್ನ ನಡೆಸಿಕೊಡ್ತಿದ್ದೆವು."

"ಅದೇನದು. ಪೆನಾಲ್ಟೀನ? ಗೆದ್ದ ಟೀಂನವರು ಏನು ಕೇಳ್ತಿದ್ರು?"

"ಹ್ಞಾಂ. ನನಗೆ ಈಗ ನೆನಪಾಯ್ತು... ವೆರಿ ಸಿಂಪಲ್.... ಮಧುರ.... ನೀನು ಒಂದು ಹಾಡನ್ನು ಹಾಡಿಬಿಡು. ಮಯೂರ ನೀನು ಒಂದು ಡ್ಯಾನ್ಸ್ ಮಾಡಿಬಿಡು. ಅಲ್ಲಿಗೆ ಕಾರ್ಯಕ್ರಮ ಮುಕ್ತಾಯ. "ಚುನ್ನಿ ಖುಷಿಯಿಂದ ಹೇಳಿದಳು.

"ಇಲ್ಲಮ್ಮ. ಇದೆಲ್ಲಾ ಅಂತ್ಯಾಕ್ಷರಿ ಆಟದ ರೂಲ್ಸ್‌ನಲ್ಲಿ ಇಲ್ಲ. ನಾನು ಹಾಡೋದಿಲ್ಲ. ಮಧುರ ತಲೆಯಾಡಿಸಿದಳು.

"ಹೋಗ್ಲಿ ಬಿಡು. ಮಯೂರ ನೀನು ಮಾತ್ರ ಡ್ಯಾನ್ಸ್ ಮಾಡ್ಲೇಬೇಕು." ಚುನ್ನಿ ಒತ್ತಾಯಿಸಿದಳು.

"ಏನೇ ಚುನ್ನಿ ನೀನು.... ಇಂಥಾ ರೂಲ್ಸು ಎಲ್ಲಿಯೂ ಇಲ್ಲ."

"ಇಲ್ದಿದ್ರೇನಾಯ್ತು! ಈಗ ನಾವು ಮಾಡಿದೀವಿ. ಒಂದು ಹಾಡು ಒಂದು ಡ್ಯಾನ್ಸು ಆಮೇಲೆ ನಿಮ್ಮ ಟೀಂ ಫ್ರೀ...."

"ಈ ಮಂಗನ ಸಂಗ ಮಾಡಿದ್ದಕ್ಕೆ ಇದೆಲ್ಲಾ ಪೆನಾಲ್ಟೀ... ಏಳೇ ನೀನೇ ಒಂದು ಹಾಡನ್ನು ಬೊಗಳಿ, ಒಂದು ಕುಣಿತವನ್ನೂ ಕುಣಿ." ಮಯೂರ ತಂಗಿಯ ಜುಟ್ಟನ್ನು ಹಿಡಿದು ಒದರಿ ನುಡಿದಾಗ, ರಾಜ ಗಂಭೀರನಾಗಿ ನುಡಿದ.

"ಸಾರಿ.... ನನ್ನ ಈ ಕಂಡೀಷನ್‌ನಿಂದ ನಿಮಗೆಲ್ಲಾ ಬೇಸರವಾಗಿರಬಹುದು. ಒಂದು ಹಾಡನ್ನು ಕೇಳುವ, ಒಂದು ಡ್ಯಾನ್ಸನ್ನು ನೋಡುವ ಆಸೆಯಿಂದ ನಾನು ಹೀಗೆ ಹೇಳಿದೆ. ನಿಮಗೆ ಇಷ್ಟವಿಲ್ಲದಿದ್ರೆ ಬೇಡ ಬಿಡಿ." ಅವನು ಎದ್ದ. ಚುನ್ನಿ ಅವನ ಕೈಹಿಡಿದು ಎಳೆದು ಕೂರಿಸಿದಳು.

"ನೀವು ಕೇಳಿದ್ದರಲ್ಲಿ ಏನೂ ತಪ್ಪಿಲ್ಲ ರಾಜ. ಮಧುರ ಸಂಗೀತವನ್ನು ಕಲಿಯುತ್ತಿದ್ದಾಳೆ. ಸೊಗಸಾಗಿ ಹೊಡ್ತಾಳೆ. ಈಗ ನಮಗಾಗಿ ಹಾಡಿದರೆ, ಅವಳ ಗೌರವ ಹೆಚ್ಚುತ್ತದೆ. ಇಲ್ಲದಿದ್ದರೆ ಬಲವಂತ ಮಾಡುವುದು ಬೇಡ." ಮಧುರ, ಚುನ್ನಿಯನ್ನು ದುರುದುರನೆ ನೋಡಿದಳು. ಚುನ್ನಿ ಮುಗುಳ್ನಕ್ಕಳು. ಮೆಲ್ಲನೆ

ರಾಜನ ಕಡೆ ನೋಡಿದಳು. ಅವನು ಪೆಚ್ಚಾಗಿದ್ದ. ಅಯ್ಯೋ ಅಂತೆನ್ನಿಸಿತು. ಗಂಟಲನ್ನು ಸರಿ ಮಾಡಿಕೊಂಡು ಒಂದು ಜನಪದ ಗೀತೆಯನ್ನು ಹಾಡಿದಳು. ಪಾಡು ಮುಗಿದನಂತರ ಅವರುಗಳು ಸಂತೋಷದಿಂದ ಚಪ್ಪಾಳೆ ತಟ್ಟಿದರು.

"ಥ್ಯಾಂಕ್ಸ್ ಮಧುರಾ.... ಬೇಸರವಾಗಿದ್ದರೆ ನನ್ನನ್ನ ಕ್ಷಮಿಸಿ. ತುಂಬಾ ಚೆನ್ನಾಗಿ ಹಾಡಿದಿರಿ..." ಅವನು ಬಾಯಿ ತುಂಬಾ ಹೊಗಳಿದಾಗ ಅವಳು ನಾಚಿಕೆಯಿಂದ ಕೆಂಪಾಗಿದ್ದಳು. ಆದರೆ ಮಾತಾಡಲಿಲ್ಲ.

"ನಾನು ಚಿಕ್ಕ ವಯಸ್ಸಿನಿಂದ ಒಂಟಿಯಾಗಿ ಬೆಳೆದವನು. ನನಗೆ ನಿಮ್ಮ ಮನೆಯ ವಾತಾವರಣ ತುಂಬಾ ಹಿಡಿಸಿತು. ಬಂದು ಕೆಲವೇ ದಿನಗಳಾದರೂ ನಿಮ್ಮ ಮನೆಯವರಲ್ಲಿ ಒಬ್ಬನಾಗಿ ಬಿಟ್ಟಿದ್ದೀನಿ. ಈ ಸಲುಗೆಯಿಂದ, ಹಾಡು ಹೇಳುವಂತೆ ಕೇಳಿಕೊಂಡೆ. ದಯವಿಟ್ಟು ತಪ್ಪು ತಿಳ್ಕೋಬೇಡಿ" ಅವನು ವಿನೀತನಾಗಿ ನುಡಿದಾಗ, ಮಧುರ, ಗಲಿಬಿಲಿಗೊಂಡಳು. ಅವನು ಎದ್ದು ನಿಂತು ಮಯೂರಳ ಕಡೆ ನೋಡಿ "ಸಾರಿ...." ಎಂದು ಹೇಳಿ ಅಲ್ಲಿ ನಿಲ್ಲದೇ ವರಾಂಡಕ್ಕೆ ಬಂದ. ಅವಳು ಅವಮಾನದಿಂದ ಕೆಂಪಾದಳು. ಅವನ ಹಿಂದೆಯೇ ಬಂದಳು.

"ಯಾಕ್ರೀ? ನನಗ್ಯಾಕೆ ಅವಮಾನ ಮಾಡ್ತೀದೀರಿ...?" ನೇರವಾಗಿ ಕೇಳಿದಳು.

"ಅವಮಾನ? ನಾನೇನು ಮಾಡ್ದೇ?".... ನನ್ನದೇನಾದ್ರೂ ತಪ್ಪಿದ್ರೆ ಕ್ಷಮಿಸಿ."

"ನಾನು ಕ್ಷಮಿಸೋಲ್ಲ. ಈ ದಿನವನ್ನು ನೆನಪಿನಲ್ಲಿಟ್ಟುಕೊಳ್ತೀನಿ." ಅವನಿಗೆ ತೋರುಬೆರಳನ್ನು ತೋರಿ ನುಡಿದು, ದಬದಬ ಹೆಜ್ಜೆ ಹಾಕುತ್ತಾ ಅವನನ್ನು ದಾಟಿಕೊಂಡು ಹೊರಬಂದು ನಿಂತಳು. ಅವನೂ ಅವಳ ಬದಿಗೆ ಬಂದುನಿಂತ.

"ಸಾರಿ ಮಯೂರ.... ನಾನು ಏನು ಅವಮಾನ ಮಾಡ್ದೆ ಅಂತ ನಂಗೆ ಅರ್ಥವಾಗಲಿಲ್ಲ. ಆದರೆ ನೀವು ಹೀಗೆ ಕೋಪ ಮಾಡ್ಕೋಬೇಡಿ. ಡ್ಯಾನ್ಸ್ ಮಾಡೋರ್ಗೆ ಕೋಪ ತಾಪ ಒಂದೂ ಇರುಲ್ಲ ಅಂತ ಕೇಳಿದೀನಿ" ಅವನು ನಗಿಸಲು ನೋಡಿದ.

"ನಾನು ಚಿಕ್ಕೋನಾಗಿದ್ದಾಗ, ಡ್ಯಾನ್ಸ್ ಕಲಿಯಬೇಕು. ಸಂಗೀತ ಕಲಿಯಬೇಕು ಅಂತೆಲ್ಲಾ ಆಸೆ ಇತ್ತು. ನನ್ನ ಆಸೆ ನೆರವೇರಲಿಲ್ಲ. ನೀವುಗಳು ನನ್ನ ಸಹೋದರಿಯರಿದ್ದ ಹಾಗೆ. ಆ ಸಲುಗೆಯಿಂದ ನಾನು ಸ್ವಲ್ಪ ಹೆಚ್ಚು

ಮಾತಾಡಿದೆ. ದಯವಿಟ್ಟು ತಪ್ಪು ತಿಳ್ಕೋಬೇಡಿ." ಅವನು ಅಷ್ಟು ನುಡಿದು ಮಹಡಿಯನ್ನೇರಿದ. ಮಯೂರ ಅವನ ಬೆನ್ನನ್ನೇ ನೋಡಿದಳು. ತನ್ನ ಬಗ್ಗೆಯೇ ಹೀನಾಯವಾಗಿತ್ತು. ಇವನಂತೆ ಒಬ್ಬ ಅಣ್ಣನೋ, ತಮ್ಮನೋ ತಮಗೆ ಇದ್ದಿದ್ದರೆ ಚೆನ್ನಾಗಿತ್ತೆನಿಸಿತ್ತು. ಮೂರು ದಿನಗಳ ಹಿಂದೆ ತಮ್ಮ ಮನೆಗೆ ಬಂದವನು. ಮನೆಯವನಂತೆ ಓಡಾಡಿಕೊಂಡು ನಮಗೆಲ್ಲಾ ಸಹಾಯಕನಾಗಿದ್ದ. ಸ್ನೇಹಿತನಂತೆ ಇದ್ದ. ಅವನ ಮೇಲೆ ತಾನು ಕೋಪಿಸಿಕೊಂಡೆನಲ್ಲ. ಅವಳಿಗ ನಾಚಿಕೆ ಆಗಿತ್ತು. ಒಳಗೆ ಬರುವ ಮನಸ್ಸಿಲ್ಲದೆ ಅಲ್ಲೇ ಗೇಟಿನ ಬಳಿ ನಿಂತಳು.

"ಮಯೂರ ಒಳಗ್ಬಾರೇ ಅಲ್ಲೇನ್ಮಾಡ್ತಿದೀಯ ಗೇಟಿನ ಹತ್ರ ನಿಂತ್ಕೊಂಡು?" ರಾಧಾ ಒಳಗಿನಿಂದಲೇ ಕರೆದಳು.

"ಅವಳಿಗೆ ಕೋಪ ಬಂದಿದೆ" ಮಂದಾರ ನುಡಿದಳು.

"ಆಟ ಅಂತ ಶುರು ಮಾಡೋದು, ಜಗಳ ಆಡೋದು. ಬೇರೆ ಕೆಲಸ ಇಲ್ಲ ನಿಮಗೆ. ಮನೇಲಿ ಇಷ್ಟು ಕೆಲ್ಸ ಬಿದ್ದಿದೆ. ನಿಮ್ಮ ಜಗಳಾನಾ ಬೇರೆ ಪರಿಹರಿಸಬೇಕಾ? ಅವಳನ್ನು ಕರಿ ಒಳಕ್ಕೆ."

"ನಾನು ಕರೆಯುಲ್ಲಪ್ಪಾ... ಬಂದ್ರೆ ಬರ್ಲಿ. ಬರದಿದ್ರೆ ಅಲ್ಲೇ ಇರ್ಲಿ."

"ನಾನು ಕರ್ಕೊಂಡು ಬರ್ತೀನಿ ಅತ್ತೇ." ಚುನ್ನಿ ಹೊರಬಂದು ಮಯೂರಳ ಮಗ್ಗುಲಲ್ಲಿ ನಿಂತಳು. "ನನ್ಮೇಲೆ ಕೋಪಾನೇನೇ ಸಾರಿ ಕಣೇ." ಮಯೂರಳ ಹೆಗಲ ಮೇಲೆ ಕೈಯನ್ನಿಟ್ಟಳು. ಮಯೂರ ಕಣ್ಣೀರ ಹನಿಯನ್ನು ಒರೆಸಿಕೊಂಡಳು. "ಅಳ್ತಾ ಇದೀಯೇನೇ.... ಇಷ್ಟಕ್ಕೆಲ್ಲಾ ಯಾರಾದ್ರೂ ಅಳ್ತಾರೇನೇ?. ನಾನು ವಿನೀತ ದಿನಕ್ಕೆ ಎಷ್ಟು ಬಾರಿ ಜಗಳ ಆಡ್ತೀವೋ. ಗಂಡು ಹುಡುಗ ಅವನು ಅಳೋದೇ ಇಲ್ಲ. ನಾನೂ ಅಳಬಾರದು ಅಂತ ಗಟ್ಟಿ ಮನಸ್ಸು ಮಾಡ್ಕೊಳ್ತೀನಿ."

"ನಮ್ಮಮನೇಲಿ ಯಾರೂ ಗಂಡು ಮಕ್ಕಳೇ ಇಲ್ವಲ್ಲಾ."

"ಅದಕ್ಕೆ ಅಳು ಬರ್ತಿದೆಯಾ? ಹುಚ್ಚಿ ಅದಕ್ಕೇನು ಮಾಡೋಕಾಗುತ್ತೆ. ಅತ್ತೆ ಕರೀತಿದಾರೆ ಒಳಕ್ಕೆ ಬಾ." ಮಯೂರಳ ಕೈ ಹಿಡಿದು ಒಳಕ್ಕೆ ಕರೆದುಕೊಂಡು ಬಂದಳು.

ಪುರಿ ಉಂಡೆಗಳನ್ನು ಕಟ್ಟಿದ್ದಾಗಿತ್ತು. ಗಟ್ಟಿಯಾಗಲೆಂದು ಆರಿಹಾಕಿಟ್ಟಿದ್ದರು. ಮಂದಾರ ಆಸೆಗಣ್ಣಿಂದ ನೋಡಿದಳು. "ಯಾರೂ ಮುಟ್ಬೇಡಿ ಮಡಿ...." ಪ್ರಭಾವತಿ ಹೇಳಿದಳು.

"ಅತ್ತೆ ಒಂಚೂರು ಕೊಡಿ. ಚೆನ್ನಾಗಿದೆಯಾ ನೋಡ್ತೀನಿ."

"ನೀನೇನು ನೋಡೋದು. ಎಲ್ಲಾ ಸರಿಯಾಗಿದೆ. ಆಮೇಲೆ ಕೊಡ್ತೀವಿ. ನೀನು ಎದ್ದು ಹೋಗು" ರಾಧಾ ಮಗಳನ್ನು ಬೈದಳು.

"ಅದೇನದು ಕರಿ ಉಂಡೆಗಳು!"

"ಅದಾ? ಚಿಗುಳಿ ಅಂತ. ಅದನ್ನು ಹೆಣ್ಣು ಮಕ್ಕಳು ತಿನ್ನಲೇಬಾರದು." ಪ್ರಭಾವತಿ ನಗುತ್ತಾ ನುಡಿದಳು.

"ಮತ್ಯಾಕೆ ಮಾಡಿದೀರಿ? ನಮ್ಮ ಮನೇಲಿ ಯಾರೂ ಗಂಡು ಮಕ್ಕಳೇ ಇಲ್ಲವಲ್ಲ."

"ತಲೆ ಹರಟೆ ಎದ್ದು ಹೋಗದಿದ್ರೆ, ಹೊಡೀತೀನಿ ನೋಡು."

"ಮಡಿಲಿದೀಯ... ಮುಟ್ಟಿ ಹೊಡೀ ನೋಡೋಣ."

"ಇದಂತೂ ಎಲ್ರನ್ನೂ ಮೀರಿಸಿದ್ದು. ಕೈಕೂಸು ಅಂತ ಮುದ್ದು ಮಾಡಿಬಿಟ್ಟಿದಾರೆ ಇಬ್ರೂ" ಗೌರಮ್ಮ ನುಡಿದಳು.

"ಮುದ್ದೂ ಇಲ್ಲ. ಗಿದ್ದೂ ಇಲ್ಲ. ನಮಗೆ ಮೂರು ಜನವೂ ಒಂದೇ ತರಹ ಮೊದ್ಲೇ ಮಯೂರಂದು ಇದೇ ಗಲಾಟೆ. ನೀವು ಮಕ್ಕಳ ಎದುರಿಗೆ ಇಂಥದ್ದನ್ನೆಲ್ಲಾ ಆಡ್ಲೇಬೇಡಿ."

"ಇವಳ ಹಿಂದೆ ಇನ್ನೆರಡು ಇದ್ದಿದ್ರೆ, ಇವಳು ಮಧ್ಯದವಳಾಗಿರುತ್ತಿದ್ಲು. ಆಗ ಸರಿಯಾಗಿರುತ್ತಿದ್ಲು."

"ಈ ಕಾಲದಲ್ಲಿ ಎರಡೇ ಮಕ್ಕಳು. ಅಂಥಾದ್ದರಲ್ಲಿ ನಮಗೆ ಮೂರು ಮಕ್ಕಳು. ಇನ್ನು ಎರಡು ಅಂತ ಇದ್ದಿದ್ರೆ. ಐದು ಮಕ್ಕಳು. ಹೇಗೆ ಸಾಕಿ ಬೆಳೆಸೋದು...?"

"ನನಗೆ ಆದದ್ದು ಐದು. ಉಳಿದೋವು ನಾಲ್ಕು. ನನ್ನ ಕಣ್ಣ ಮುಂದೆ ಇರೋರು ನೀವೇ ಮೂರು ಜನ. ನೀವಿಬ್ರೂ ಮದುವೆ ಮಾಡ್ಕೊಂಡು ಹೋದ್ರಿ. ನಾನು ಕೇಶವ ಇಬ್ಬರೇ. ಅವನೂ ಎಲ್ಲಾದ್ರೂ ಹೊರಟುಹೋಗಿದ್ದಾಗ, ನಾನು ಒಬ್ಬಳೇ, ಮನೆ ಬಿಕೋ ಅಂತಿತ್ತು. ಅದಕ್ಕೇ ಅವನಿಗೆ ಬೇಗ ಮದುವೆ ಮಾಡಿಬಿಟ್ಟೆ. ಈಗ ಮನೆ ತುಂಬಿದ ಹಾಗಿದೆ. ಮನೆ ಗಲಗಲ ಅಂತಿದೆ. ಆದ್ರೆ ನಂಗೆ ಒಂದೇ ಬೇಸರ.... ಈ ಹೆಣ್ಣು ಮಕ್ಕಳಿಗೆ ಮದುವೆ ಆಗಿ ಹೊರಟುಹೋದರೆ ಆಗ ಮತ್ತೆ ಮನೆ ಭಣ ಭಣ...."

"ಅದಕ್ಕೆ ನೀನ್ಯಾಕಮ್ಮ ಯೋಚ್ನೆ ಮಾಡ್ತೀಯ. ಕೇಶವ, ರಾಧ, ನಿನ್ನ ಮುಂದೆ ಇರ್ತಾರೆ. ಹೆಣ್ಣು ಮಕ್ಕಳು ಅಳಿಯಂದ್ರು ಬರ್ತಾ ಇರ್ತಾರೆ.

'ಬರ್ತಾರೆ ಹೋಗ್ತಾರೆ, ಗಂಡು ಮಗ ಅಂತ ಒಬ್ಬ ಇದ್ದಿದ್ರೆ ಮಗ ಸೊಸೆ ಮನೇಲೇ ಇರ್ತಿದ್ರು...."

"ನೀನು ಯಾವ ಕಾಲದಲ್ಲಿ ಇದೀಯಮ್ಮ? ಈಗ ಅತ್ತೆ ಸೊಸೆ ಒಂದೇ ಮನೇಲಿ ಒಟ್ಟಿಗೆ ಇರುವುದು ಅಪರೂಪ ಆಗ್ತಿದೆ. ಗಂಡು ಮಕ್ಕಳು ಓದಿ, ಬೇರೆ ಊರುಗಳಲ್ಲಿ ಕೆಲಸಕ್ಕೆ ಸೇರಿಕೊಳ್ತಾರೆ. ಮದುವೆ ಮಾಡ್ಕೊಂಡು ಹೆಂಡ್ತೀನ ತಮ್ಮ ಜೊತೆ ಕರ್ಕೊಂಡು ಹೋಗ್ತಾರೆ. ಯಾರೂ, ಅಪ್ಪ ಅಮ್ಮನ ಸೇವೆಗೆ ಅಂತ ಬಿಟ್ಟು ಹೋಗುಲ್ಲ."

"ಒಂದ್ವೇಳೆ ಜೊತೇಲೆ ಇದ್ರು, ಮದುವೆಯಾದ ಕೆಲವೇ ತಿಂಗಳುಗಳಲ್ಲಿ ಬೇರೆ ಮನೆ ಮಾಡ್ಕೊಂಡು ಹೋಗ್ತಾರೆ. ಯಾವ ಸೊಸೆಗೂ ಅತ್ತೆ ಮಾವನ ಸೇವೆ ಮಾಡ್ಬೇಕು ಅನ್ನೋ ಮನಸ್ಸಿಲ್ಲ. ಅವಳ ತಾಳಕ್ಕೆ ಗಂಡ ಕುಣೀತಾನೆ. ಅವರ ಪಾಡಿಗೆ ಅವರು ಆರಾಮವಾಗಿರ್ತಾರೆ. ಈಗ ಕಾಲ ಬದಲಾಗಿದೆ." ಸತ್ಯವತಿಯೂ ದನಿಗೂಡಿಸಿದಳು.

"ನಂಗೂ ಗೊತ್ತು. ಪ್ರವಚನಕ್ಕೆ ಬರೋ ಹೆಂಗಸರೆಲ್ಲಾ, ಒಂದಲ್ಲ ಒಂದು ರೀತೀಲಿ, ಮಗ ಸೊಸೆಯರ ಮೇಲೆ ಚಾಡಿ ಹೇಳ್ತಾನೇ ಇರ್ತಾರೆ."

"ಪ್ರವಚನದಲ್ಲಿ ಸಂಸಾರದ ಕತೆ ಮಾತಾಡ್ತೀರಾ?" ಇಬ್ಬರೂ ನಕ್ಕರು.

"ಹುಂ. ಹೆಂಗಸ್ರೆಲ್ಲಾ ಒಟ್ಟಿಗೆ ಸೇರೋದು ಅಲ್ಲೇ. ಸಂಸಾರ ತಾಪತ್ರಯ ಯಾರಿಗಿಲ್ಲ? ಅದರ ಪಾಡಿಗೆ ಅದು, ಇದರ ಪಾಡಿಗೆ ಇದು. ಸತ್ಸಂಗದ ನೆವದಲ್ಲಿ, ನಮಗೂ ಒಂದಿಷ್ಟೇ ಕಾಲ ಹೋಗುತ್ತೆ."

"ಸ್ವಾಮಿ ಕಾರ್ಯ, ಸ್ವಕಾರ್ಯ ಅಂತನ್ನು ಹಾಗಾದ್ರೆ."

"ಮತ್ತೆ?... ಪ್ರವಚನ ನಡೆಸಿಕೊಡೋರು ಬರೋತನಕ ಮಾತಾಡ್ತೀವಿ. ಆಮೇಲೆ ಪ್ರವಚನ ಕೇಳ್ಕೊಂಡು, ಮಂಗಳಾರತಿ ನೋಡ್ಕೊಂಡು, ಪ್ರಸಾದ ಇಸ್ಕೊಂಡು ಬರ್ತೀವಿ. ಅಲ್ಲಿಗೆ ಆ ದಿನ ಕಳೀತು."

"ಅಜ್ಜಿ ಪ್ರಸಾದಾನ ತಿನ್ನೋದೇ ಇಲ್ಲ. ನಮಗೇ ಕೊಟ್ಬಿಡ್ತಾರೆ."

"ನಿಮಗೆ ಅಂತ್ಲೇ ತರೋದು. ನಿಮಗೆ ಪುಣ್ಯ ಬರ್ಲಿ ಅಂತ. ನೀವೆಲ್ಲಾ ಪರೀಕ್ಷೇಲಿ ಪಾಸಾಗ್ಬೇಕೋ ಬೇಡ್ವೋ?"

"ಪ್ರಸಾದ ತಿಂದಿದ್ದಕ್ಕೆಲ್ಲ ಅಜ್ಜಿ ನಾವು ಪಾಸಾಗೋದು. ನಾವೂ ಕಷ್ಟಪಟ್ಟು ಓದ್ತೀವಿ."

ಕಷ್ಟಪಟ್ಟು ಓದೋಕೆ ಬುದ್ಧಿ ಶಕ್ತಿ ಬೇಕೋ ಬೇಡ್ವೋ. ಅದು ಆ ಪ್ರಸಾದದಲ್ಲಿರುತ್ತೆ."

"ಸರಿ. ಶುರುವಾಯ್ತು ಅಜ್ಜಿ ಮೊಮ್ಮಗಳ ವಾದವಿವಾದ. ಇದು ಇನ್ನು ಮುಗಿಯೇದೇ ಇಲ್ಲ" ರಾಧಾ ಗೊಣಗುತ್ತಾ, ಅವರುಗಳ ಮಧ್ಯೆಯಿಂದ ಹೊರಬಂದಳು. ರೂಮಿನ ಮಂಚದ ಮೇಲೆ ಮಧುರ ಮಲಗಿದ್ದಳು.

"ಯಾಕೇ ಮಲಗಿದೀಯಾ? ತಲೆನೋವಾ?"

"ಏನಿಲ್ಲಮ್ಮ ಸುಮ್ಮನೇ ಮಲಗಿದ್ದೆ. ಮೂರು ದಿನದಿಂದ ಅದೇ ಅಭ್ಯಾಸವಾಗಿತ್ತಲ್ಲ. ಅಷ್ಟೇ" ಮಧುರ ಎದ್ದು ಕೂತಳು. ಏನಾದ್ರೂ ತಿಂಡಿ ಇದೆಯಾ ತಿನ್ನೋಕೆ ಬೇಜಾರಾಗ್ತಿದೆ."

"ಊಟ ಮಾಡೋರಂತೆ ನಿಮ್ಮಪ್ಪನೂ ಬರಲಿ. ರಾಜ ಎಲ್ಲಿ ಕಾಣ್ತಾ ಇಲ್ಲವಲ್ಲ. ಮೇಲೆ ಹೋದ್ನಾ?"

"ಹೋದ್ನೇನೋ.... ಅವನ್ಯಾಕಮ್ಮ ಇಲ್ಲೇ ಇದಾನೆ?..."

"ನಿಮ್ಮಪ್ಪ ಕರ್ಕೊಂಡು ಬಂದು ಇಟ್ಕೊಂಡಿದಾರೆ. ನಾನು ಏನು ಹೇಳ್ಲಿ! ಇನ್ನು ನಾಲ್ಕು ದಿನ ಕಳೆದ್ಮೇಲೆ ಹಾಸ್ಟೆಲ್ಲಿಗೆ ಸೇರಿಸ್ತಾರಂತೆ."

"ಮಧುರ ಈಗ್ಲಾದ್ರೂ ಹೊರಗ್ಬಾರೆ ಬಂದಾಗ್ನಿಂದ ನಿನ್ನನ್ನ ಸರ್ಯಾಗಿ ನೋಡೇ ಇಲ್ಲ." ಸತ್ಯವತಿ ಕರೆದಳು. ಮಧುರ ನಾಚಿದರೂ ಹೊರಬಂದಳು. ಇದೆಲ್ಲಾ ಹೆಣ್ಣು ಮಕ್ಕಳಿಗೆ ಸಹಜ. ಹಾಗಂತ ಮರೇಲೇ ಇರೋಕೆ ಆಗುತ್ತಾ? ನಾವೆಲ್ಲಾ ಮನೆಯೋರೇ. ನಿನಗ್ಯಾಕೆ ಸಂಕೋಚ?

"ಹಾಗೇನಿಲ್ಲ ಅತ್ತೆ..."

"ಹಾಗಾದ್ರೆ ಕೂತ್ಕೋ. ಸಂಗೀತ ಕಲೀತಿದೀಯಂತೆ. ಒಂದೆರಡು ದೇವರ ನಾಮಗಳನ್ನು ಹಾಡು..."

"ಈಗ ಬೇಡ. ಹೊಟ್ಟೆ ಹಸೀತಿದೆ.

"ನಿನಗೋಸ್ಕರಾನೇ ತಿಂಡಿ ಮಾಡಿದ್ದು. ಅಮ್ಮ ಏನಂತಾಳೋ.? ಅವಳಿಗೆ ಗೊತ್ತಿಲ್ಲದ ಹಾಗೆ ತಂದ್ಕೊಡ್ತೀನಿ" ಸತ್ಯವತಿಯನ್ನೂ ರಾಧಾ ತಡೆದಳು. ರಾಧಾ ಒಳಗಿನಿಂದ ಬಿಸ್ಕತ್ತಿನ ಪೊಟ್ಟಣವನ್ನು ತಂದು ಅವಳ ಕೈಗೆ ನಾಲ್ಕಾರು ಬಿಸ್ಕತ್ತನ್ನು ಕೊಟ್ಟಳು. ಮಂದಾರ, ಮಯೂರ, ಚುನ್ನಿಯ ಕೈಗೂ ಎರಡೆರಡು ಬಿಸ್ಕತ್ತನ್ನು ಕೊಟ್ಟಳು.

"ಇದೆರಡು ರಾಜಂಗೆ. ಅವನೂ ಹುಡುಗನೇ" ಎನ್ನುತ್ತಾ ತೆಗೆದಿಟ್ಟಳು. ಊಟ ಮಾಡ್ಬಿಟ್ಟು, ಹತ್ತಿರದ ನಾಲ್ಕಾರು ಮನೆಯ ಮುತ್ತೈದೆಯರನ್ನು ಕರೆದು ಬರಬೇಕು. ನೀವು ಹೋಗಿಬರ್ತೀರಾ ಸತ್ಯವತಿ? ಮಯೂರನ್ನೋ ಮಂದಾರನ್ನೋ ಕರ್ಕೊಂಡು ಹೋಗ್ಬನ್ನಿ."

"ನಾನು ಬರ್ತೀನಿ" ಮಂದಾರ ಜಿಗಿದು ನುಡಿದಳು.

"ನಿಮ್ಮ ತಾಯಿಯ ಮನೆಯೋರ್ಗೆ ವಿಷಯ ತಿಳಿದಿಲ್ವಾ? ಅವರ್ಯಾರೂ ಬರ್ಲೇ ಇಲ್ಲ." ನಿನ್ನ ಅಣ್ಣಂದಿರು ಬರಬೇಡ್ವೆ ಸಂಪ್ರದಾಯದ ಪ್ರಕಾರ."

'ಇಲ್ಲ ಸತ್ಯವತಿ. ನಾನು ತಿಳಿಸ್ಲಿಲ್ಲ. ಹೇಗೂ ಅವರ್ಯಾರೂ ಊರ್ನಿಂದ ಬರುಲ್ಲ. ನಿಧಾನವಾಗಿ ತಿಳಿಸಿದ್ರಾಯ್ತು." ಅವರುಗಳು ಏನೂ ಅಂದ್ಕೊಳುಲ್ಲ."

"ಇದು ತಪ್ಪಲ್ವಾ? ಅವರುಗಳೂ ಬಂದು ಆಶೀರ್ವಾದ ಮಾಡಬೇಡ್ವೇ?"

"ತಪ್ಪೇನಾಗುಲ್ಲ. ಅವರ್ಯಾರೂ ತಪ್ಪು ತಿಳ್ಕೊಳ್ಳುಲ್ಲ" ರಾಧಾ ಸಮರ್ಥಿಸಿಕೊಂಡಳು.

"ಅವರ ಮನೆಯೋರ್ಗೆ ಈ ಸಂಭ್ರಮಗಳೆಲ್ಲಾ ಬೇಕಾಗಿಲ್ಲ. ಇದೇನು ದೊಡ್ಡ ವಿಷಯ ಅನ್ನೋ ಧೋರಣೆ" ಗೌರಮ್ಮನೆಂದಳು.

"ಈ ಕಾಲ್ದಲ್ಲಿ ಇದನ್ನೆಲ್ಲಾ ಯಾರೂ ಆಚರಿಸುಲ್ಲ ಕಣಮ್ಮಾ."

"ನಂಗೂ ಗೊತ್ತು. ನಾನಿನ್ನು ಇರೋದ್ರಿಂದ, ಮನೇಲಿ ಇಷ್ಟಾದರೂ ಸಂಭ್ರಮ. ಮಯೂರ ಮೈ ನೆರೆಯುವ ಹೊತ್ತಿಗೆ ಏನೇನು ಬದಲಾವಣೆಗಳಾಗಿರುತ್ತೋ ಯಾರಿಗ್ಗೊತ್ತು.... ನಡೆದಷ್ಟು ದಿನ ನಾಣ್ಯ."

"ಅಜ್ಜೀ ನೀವು ಹೀಗೆಲ್ಲಾ ನನ್ನ ವಿಷಯ ಹೇಳ್ಬೇಡಿ" ಮಯೂರ ಎಂದಳು.

"ಏನೇ ಹೇಳ್ದೆ? ನಾನು ಹೇಳ್ದೇ ಇದ್ರೇನು. ನಡೆಯೋದೆಲ್ಲ ನಡದೇ ನಡೆಯುತ್ತೆ. ನೀನೇನು ಹೀಗೇ ಇದ್ದುಬಿಡ್ತೀಯ. ಈಗಾಗ್ಲೇ ಮಧುರಳ ಸಮಕ್ಕೆ ಬೆಳೆದಿದೀಯ.... ಅದಿರಲಿ, ಅದ್ಯಾಕೆ ಸತ್ಯಾ, ನಿನ್ನ ಮಗಳು ಹೀಗೆ ಸೊರಗಿದಾಳೆ? ನೀನು ಸರಿಯಾಗಿ ಆರೈಕೆ ಮಾಡ್ಲಿಲ್ಲ ಅಂತ ಕಾಣುತ್ತೆ. ಹಾಲು, ಹಣ್ಣು, ಜೇನುತುಪ್ಪ, ಮೊಸರು ಎಲ್ಲಾ ಚೆನ್ನಾಗಿ ಸೇವಿಸಬೇಕು. ಇಲ್ಲಿ ಒಂದು

ತಿಂಗಳು ಬಿಟ್ಟುಹೋಗು. ಇನ್ನೊಂದು ತಿಂಗಳಲ್ಲಿ ನಿನಗೇ ಗುರುತು ಸಿಗದಷ್ಟೇ ಬದಲಾಗಿರ್ತಾಳೆ."

"ಒಂದು ತಿಂಗಳು ರಜ ಹಾಕಿ ಇಲ್ಲಿ ಇರುಕ್ಕಾಗುತ್ತೇನಮ್ಮ. ಕಾಲೇಜಿಗೆ ಹೋಗಿ ಬರ್ರೋದು, ಓದುವುದು ಇವೆಲ್ಲಾ ಇಲ್ಲದೇ ಮನೇಲೇ ಇದ್ದಾಗ ಸ್ವಲ್ಪ ಗುಂಡಗಾಗಿದ್ದಳು. ಅಲ್ದೇ ತಿನ್ನೋದು ಅವಾಂತರದಲ್ಲಿ, ನಿದ್ದೆಗೆಟ್ಟು ಓದೋದು. ಮೈ ಎಲ್ಲಿ ಬರುತ್ತೆ?"

"ಅದಕ್ಕೇ ಹೇಳೋದು ಹೆಣ್ಣು ಮಕ್ಕಳಿಗೆ ಓದುವಿದ್ಯೆ ಯಾಕೆ ಅಂತ. ಹಾಯಾಗಿ ತಣ್ಣಗೆ ಮನೇಲಿರಬಾರ್ದಾ. ಮನೆಗೆಲಸ ಕಲಿತುಕೊಳ್ಳಲಿ. ಕೆಲಸಕ್ಕೆ ಸೇರಿ ಸಂಪಾದಿಸಬೇಕಾದ್ದು ಏನಿಲ್ಲವಲ್ಲ."

"ಅಮ್ಮಾ ಇದು ನಿನ್ನ ಕಾಲವಲ್ಲ. ನೀನು ನಮ್ಮ ಓದನ್ನು ಬಿಡಿಸಿ ಮನೇಲೇ ಇಟ್ಕೊಂಡು ಮನೆ ಕೆಲಸ ಮಾಡಿಸ್ತಿದ್ದೆ. ಈಗ ಯಾರೂ ಹಾಗೆ ಮಾಡುಲ್ಲ. ಹೆಣ್ಣು ಮಕ್ಕಳೂ ಓದ್ತಾರೆ. ಕೆಲಸಕ್ಕೆ ಸೇರಿಕೊಂಡು ಸಂಪಾದಿಸ್ತಾರೆ. ಮಜವಾಗಿರ್ತಾರೆ. ನಮ್ಮ ಕೈಗೆ ಒಂದಾಣೆ ಕೊಡೋಕೆ ನೀನು ಹಿಂದುಮುಂದು ನೋಡ್ತಿದ್ದೆ. ನಮಗೆ ಎಷ್ಟೇ ಆಸೆ ಇದ್ದರೂ, ಮನದಲ್ಲೇ ಅದುಮಿಟ್ಟುಕೊಂಡಿರುತ್ತಿದ್ದೆವು. ಆಮೇಲೆ ಗಂಡನ ಮನೇಲೂ ಅದೇ ಹಣೇಬರಹ... ನಾಲ್ಕಾಣೆ ಬೇಕಾದ್ರೂ ಅವರನ್ನು ಕೇಳಬೇಕಾಗುತ್ತಿತ್ತು."

"ಅಂದ್ರೆ.... ಈ ಕಾಲದ ರೀತಿ ನೀತಿ ಸರಿ ಅಂತೀಯಾ?"

"ಹೂಂ. ಸರೀನೇ. ಓದ್ತಾರೆ. ಸಂಪಾದಿಸ್ತಾರೆ. ಅವರ ವಿದ್ಯೆಗೆ ತಕ್ಕಂಥ ಗಂಡ ಸಿಗ್ತಾನೆ. ಇಬ್ರೂ ಸಂಪಾದಿಸೋದ್ರಿಂದ ಕಣ್ಣಿಗೆ ಇಷ್ಟವಾದದನ್ನು ಕೊಂಡ್ಕೋತಾರೆ. ಆಸ್ತಿಪಾಸ್ತಿ ಮಾಡ್ಕೋತಾರೆ. ಆಸೆಗಳನ್ನು ಪೂರೈಸಿಕೊಳ್ತಾರೆ. ನಮ್ಮಗಳ ಹಾಗೆ ಅತ್ಲಾಗೆ ಎಳೆದರೆ, ಇತ್ಲಾಗೆ ಇಲ್ಲ. ಇತ್ಲಾಗೆ ಎಳೆದರೆ ಅತ್ಲಾಗಿಲ್ಲ ಅನ್ನೋ ಪರದಾಟ ಇರುಲ್ಲ" ಮಗಳು ಆಕಳಿಸಿದಳು.

"ಸರಿ ನನ್ನ ಮಾತು ನಿಂಗೆ ಸರಿ ಹೋಗ್ತಿಲ್ಲ. ಕೇಶವ ಬಂದಿದ್ರೆ ಊಟಕ್ಕೇಳಬಹುದಾಗಿತ್ತು. ಶಾಸ್ತ್ರಿಗಳ ಮನೆಗೆ ಹೋಗಿ ಬರ್ತೀನಿ ಅಂತ ಅಂದೋನು ಇನ್ನೂ ಬಂದಿಲ್ಲ. ಇನ್ನೂ ಮಾವಿನ ಸೊಪ್ಪು ತರಬೇಕು... ರಾಜಂಗೆ ಹೇಳಿದ್ರೆ ತರ್ತಾನೆ. ಅವನೆಲ್ಲಿಗೆ ಹೋದ?....

"ಮಹಡಿ ಮೇಲಿನ ರೂಮಿನಲ್ಲಿದ್ದಾನೆ. ಕರೆದು ಬರ್ಲಾ!" ಮಂದಾರವಿದ್ದಳು.

"ಈಗ್ಲೇ ಬೇಡ. ಊಟದ ಹೊತ್ತಿಗೆ ಕರೆದರಾಯ್ತು."

"ಅತ್ತೇ ಈಗಾಗ್ಲೇ ಹೊತ್ತಾಗಿದೆ. ನೀವು ಊಟ ಮಾಡಿಬಿಡಿ." ರಾಧ ಅತ್ತೆಗೆ ಹೇಳಿದಳು. ಗೌರಮ್ಮ ಎದ್ದು ಹೋಗಿದ್ದಳು. ಕೇಶವನಿಗೆ ಕಾದು ಕಾದು ಸಾಕಾಗಿ, ಶಾಸ್ತ್ರಿಗಳ ಮನೆಗೆ ಫೋನು ಮಾಡಿದರು. ಶಾಸ್ತ್ರಿಗಳೇ ಮಾತಾಡಿದರು.

"ಕೇಶವರಾವ್ ಆಗ್ಲೇ ಹೋದ್ರಲ್ಲ. ಯಾರೋ ಸ್ನೇಹಿತರ ಮನೆಗೆ ಹೋಗ್ತೀನಿ ಅಂತ ಅಂದ್ಹಾಗಿತ್ತು" ರಾಧಾ ಕೋಪದಿಂದ ರಿಸೀವರ್‌ನ್ನಿಟ್ಟಳು.

"ನಾವುಗಳು ಕಾಯ್ತಾ ಇದೀವಿ ಅನ್ನೋ ನಿಗಾನಾದ್ರೂ ಬೇಡ್ವಾ ನಿಮ್ಮ ತಮ್ಮಂಗೆ. ಯಾವ ಸ್ನೇಹಿತನ ಮನೆಗೆ ಹೋಗಿದಾರೋ? ಯಾರೂಂತ ಗೊತ್ತಾಗಿದ್ದಿದ್ರೆ ಅಲ್ಲಿಗೇ ಫೋನು ಮಾಡಬಹುದಾಗಿತ್ತು."

"ಚಿಕ್ಕೋರಿಗೆಲ್ಲ ಊಟ ಹಾಕಿಬಿಡೋಣ. ಅಷ್ಟು ಹೊತ್ತಿಗೆ ಅವನೂ ಬರಬಹುದು."

ಚಿಕ್ಕವರೆಲ್ಲ ಊಟಕ್ಕೆ ಕುಳಿತರು. ರಾಧಾ ಬಡಿಸಿದಳು. "ಯಾರೂ ಗಲಾಟೆ ಮಾಡ್ದೇ ಊಟ ಮಾಡಬೇಕು" ಮಂದಾರಳ ಕಡೆ ತಿರುಗಿ ಹೇಳಿದಳು. ಆದರೂ, ಅವರವರೇ ಕಿಸಿಕಿಸಿ ನಕ್ಕೊಂಡು, ಪಿಸುಮಾತುಗಳನ್ನಾಡುತ್ತಿದ್ದರು. ಮೌನವಾಗಿದ್ದವಳು ಮಯೂರ. ರಾಜ ಅವಳನ್ನೇ ಆಗಾಗ್ಗೆ ನೋಡುತ್ತಿದ್ದ. ತನ್ನ ಮೇಲೆ ಅವಳಿಗೆ ಕೋಪಬಂದಿದೆ. ಅದನ್ನು ಕಡಿಮೆ ಮಾಡುವುದು ಹೇಗೆ ಎಂದು ಆಲೋಚಿಸುತ್ತಿದ್ದ. ಮಕ್ಕಳ ಊಟ ಮುಗಿದು ಎಷ್ಟೋ ಹೊತ್ತಾಗಿತ್ತು. ಕೇಶವನ ದಾರಿಯನ್ನೇ ಕಾಯುತ್ತಾ, ತಮತಮಗೆ ತೋಚಿದಂತೆ ಮಾತುಗಳನ್ನಾಡುತ್ತಿದ್ದರು. ಕಡೆಗೂ ಕೇಶವ ಬಂದ. ಮುಖದಲ್ಲಿ ಏನೋ ಆತಂಕ ತುಂಬಿದಂತೆ ಕಾಣುತ್ತಿತ್ತು.

"ಏಳೋ ಕೇಶವ ಕೈಕಾಲು ತೊಳ್ಕೋ ಊಟಕ್ಕೆ ಕೂರೂವಂತೆ ಯಾಕಿಷ್ಟು ತಡವಾಯಿತು?" ಪ್ರಭಾವತಿ ಕೇಳಿದಳು.

"ನನ್ನ ಊಟ ಆಯ್ತು..."

"ನಿಮ್ಮ ಊಟ ಆಯ್ತಾ! ನಾವು ಇಲ್ಲಿ ನಿಮಗೋಸ್ಕರ, ಯಾರೂ ಊಟ ಮಾಡದೇ ಕಾಯ್ತಾ ಇದೀನಿ..."

"ನಾನೇನ್ಮಾಡ್ಲೀ... ಶಂಕರನ ಮನೇಲಿ ಬಹಳ ಬಲವಂತ ಮಾಡಿದ್ರು. ಊಟಕ್ಕೆ ಏಳಲೇಬೇಕಾಯ್ತು. ನೀವುಗಳು ಕೂತ್ಕೊಳ್ಳಿ. ನಾನು ಬಡಿಸ್ತೀನಿ" ಅವನ ಮಾತು ಮುಗಿಯುವ ಮೊದಲೇ ರಾಜ ಮೂರು ಎಲೆಗಳನ್ನು ಹಾಕಿ ನೀರಿನ ಲೋಟಗಳನ್ನಿಟ್ಟು ಬಡಿಸಲು ಸಿದ್ಧನಾಗಿ ನಿಂತ.

"ನಿನ್ನ ಊಟ ಆಯ್ತೇನೋ ರಾಜಾ?"

"ಹುಂ. ಆಯ್ತು ಸಾರ್."

"ಪಕ್ಕದ ಮನೇಲಿ, ಮಾವಿನ ಮರ ಇದೆ. ಆಮೇಲೆ ಹೋಗಿ ಒಂದಿಷ್ಟು ಮಾವಿನಸೊಪ್ಪು, ಕೊಯ್ಕೊಂಡು ತಂದಿಡು. ನಿಂಗೆ ಮರ ಹತ್ತೋಕೆ ಬರುತ್ತಾ?"

"ಇಲ್ಲ ಸಾರ್. ನಾನು ಕಲಿಯಲಿಲ್ಲ."

"ನಂಗೆ ಬರುತ್ತೆ." ಅಲ್ಲೇ ಕುಳಿತಿದ್ದ ಮಂದಾರ ಚಟ್ಟನೆ ನುಡಿದಳು.

"ನೀನು ಬಜಾರಿ. ನಿಂಗೆ ಎಲ್ಲಾ ಬರುತ್ತೆ." ಸತ್ಯವತಿ ಹೊಗಳಿದಳು.

"ಇವಳು ಮಿಸ್ ಮಂಗಾ.... ಮಂದಾ ಅಂತಕರೆಯುವ ಬದಲು ಮಂಗಾ ಅಂತ್ಲೇ ಕರೀಬಹುದು" ಅದುವರೆಗೂ ಮೌನವಾಗಿದ್ದ ಮಯೂರ ತಂಗಿಯನ್ನು ಚುಡಾಯಿಸಿದಳು. "ಕರೆಕ್ಟ್" ಮಧುರಳೂ ದನಿಗೂಡಿಸಿದಳು ಮಂದಾರ ಸಿಟ್ಟಿನಿಂದ ಮೂತಿ ಊದಿಸಿದಳು. ಎಲ್ಲರೂ ನಕ್ಕಾಗ ಅಲ್ಲಿಂದ ಎದ್ದುಹೋದಳು.

* * * *

ಪರಿಚಯದ ಹತ್ತಾರು ಮನೆಗಳನ್ನು ಕರೆದು ಬರಲು ಸತ್ಯವತಿ ಮಂದಾರಳೊಂದಿಗೆ ಹೊರಟಳು. ರಾಜ ಮಾವಿನಸೊಪ್ಪನ್ನು ಕೊಯ್ಯಲು ಹೊರಟ. "ಹೋಗೇ ಮಯೂರ..." ಕೇಶವ ಮಗಳನ್ನು ಅವನ ಜೊತೆಗೆ ಕಳಿಸಿದ.

"ಆಂಟೀ, ಸ್ವಲ್ಪ ಮಾವಿನಸೊಪ್ಪು ಬೇಕು. ಕೊಯ್ದು ಕೊಡ್ತೀರಾ?"

"ಮಹಡಿ ಮೇಲೆ ಹೋದರೆ ಕೈಗೇ ಸಿಗುತ್ತೆ" ನಂದಿನಿ ನುಡಿದಳು. ಮಯೂರನೊಂದಿಗೆ ರಾಜ, ಅವರ ಮನೆಯ ಮಹಡಿ ಹತ್ತಿದ. ಇಬ್ಬರೂ ಕೊಂಬೆಗಳನ್ನು ಎಳೆದು ಮಾವಿನಸೊಪ್ಪನ್ನು ಕೊಯ್ದರು. ಅಲ್ಲಿಂದ ಇಳಿಯುವ ಮೊದಲು ರಾಜ ಮಾತಾಡಿದ.

"ನನ್ಮೇಲಿನ ಕೋಪ ಇನ್ನೂ ಹೋಗಿಲ್ವಾ!"

"ಇಲ್ಲ, ಕೋಪ ಏನೂ ಇಲ್ಲ."

"ಮತ್ಯಾಕೆ ಮಾತ್ತಾಡ್ತಿಲ್ಲ...?"

"ನಾನು ಹಾಗೇನೇ..." ಮೂತಿ ಚೂಪು ಮಾಡಿದಳು.

"ಇಲ್ಲ. ನೀವು ಹಾಗಲ್ಲ. ನಾನು ನಿಮ್ಮೆಲ್ಲರನ್ನು ಗಮನಿಸಿದೀನಿ."

"ನೀವ್ಯಾರು ಗಮನಿಸೋಕೇ! ನಿಮಗೇನು ಅಧಿಕಾರವಿದೆ." ಅವನು ಬೆಚ್ಚಿನಿಂತ. ಮುಖದ ಕಳೆ ಇಳಿಯಿತು. ಮಾವಿನ ಸೊಪ್ಪನ್ನು ಹಿಡಿದು ಅಲ್ಲಿ ನಿಲ್ಲದೇ ಕೆಳಗಿಳಿದು ಬಂದ. ಮಯೂರಳಿಗೆ ಒಂಥರಾ ತೃಪ್ತಿಯಾಗಿತ್ತು. ಅವನ ಮನಸ್ಸಿಗೆ ಸ್ವಲ್ಪ ನೋವಾಗಿದೆ.ಒಳ್ಳೇದೇ ಆಯ್ತು ಅಂತಂದುಕೊಂಡು ತಾನೂ ಕೆಳಗಿಳಿದು ಬಂದು ನಂದಿನಿಯ ಮನೆಯೊಳಕ್ಕೆ ಹೋದಳು. ಮಾವಿನ ಸೊಪ್ಪನ್ನು ಊಟದ ಮನೆಯಲ್ಲಿಟ್ಟು ಮಹಡಿ ಹತ್ತಿದ. ರಾತ್ರಿಯ ಸಮಯವಾದರೂ ಕೆಳಗಿಳಿದು ಬಂದಿರಲಿಲ್ಲ.

"ರಾಜ, ಮೇಲೆ ಏನ್ಮಾಡ್ತಿದಾನೆ? ಮಾವಿನ ಸೊಪ್ಪನ್ನು ತಂದ್ನಾ?"

"ಹುಂ. ಎಲ್ಲದಕ್ಕೂ ರಾಜನ್ನೇ ಯಾಕೆ ಕಳಿಸ್ತೀರಿ! ಮೊದಲ್ನಿಂದ್ಲೂ ಅವನೇ ಇದ್ನಾ! ಅವನು ಸಾಯಂಕಾಲದಿಂದ ಕೆಳಗಿಳಿದು ಬಂದೇ ಇಲ್ಲ. ಅವನಿಗೇನು ಅಸಮಾಧಾನವೋ... ನಮಗ್ಯಾಕೆ ಕಂಡೋರ ಹುಡುಗರ ಜವಾಬ್ದಾರಿ?"

"ಸುಮ್ನಿರು ರಾಧಾ. ರಾಜ ಓದ್ಕೋತಾ ಇರಬಹುದು. ಮಲಗಿರಬಹುದು. ಬರ್ತಾನೆ. ಬರದಿದ್ರೆ ಕರೆದರಾಯ್ತು."

"ಅಂಥದ್ದಾದ್ರೂ ಯಾಕೆ? ನಮಗೇ ಸಾಕಷ್ಟು ಕೆಲಸ... ಅವನನ್ನು ಕರೆಯೋದು ಉಪಚಾರ ಮಾಡೋದು ಇವೆಲ್ಲಾ ಯಾಕೆ ಅಂತ?"

"ಏನೋ ಆ ಹುಡುಗಂಗೆ ನಮ್ಮ ಕೈಲಾದ ಸಹಾಯ ಮಾಡೋಣಾಂತ ಅನ್ನಿಸ್ತು. ಹಾಗೇ ನಮ್ಮ ಮನೇಲೂ ಒಬ್ಬ ಗಂಡು ಹುಡುಗನ ಅವಶ್ಯಕತೆ ಇದೆ ಅಂತ... ಈಗ ನೋಡು ಹೆಣ್ಣು ಹುಡ್ಗೀರು ಎಷ್ಟು ಬೇಗ ಬೆಳೆದುಬಿಡ್ತಾರೆ. ಎಲ್ಲಾ ಕೆಲಸಕ್ಕೂ ಅವರನ್ನೇ ಕಳಿಸೋಕೆ ಆಗುತ್ತಾ?"

"ನಿಮ್ಮ ತರ್ಕ ಏನೇನೂ ಸರಿ ಇಲ್ಲ. ಪರರ ಮನೆ ಹುಡುಗ ನಮ್ಮ ಮನೆಯ ಹುಡುಗನಾಗಕ್ಕೆ ಸಾಧ್ಯಾನಾ?"

"ನಮ್ಮ ಮನೆಯವನನ್ನೇ ಅಂತ ಮಾಡಿಕೊಳ್ಳೋಣ ಏನಂತೀಯಾ?

"ಇಲ್ಲ. ನಂಗಿಷ್ಟವಿಲ್ಲ..." ರಾಧಾ ಅಲ್ಲಿಂದ ಸರಿದುಹೋಗಿದ್ದಳು. ಕೇಶವ ಮಹಡಿಯ ರೂಮಿನ ಕಾಲಿಂಗ್‌ಬೆಲ್ ಒತ್ತಿದ. ರಾಜ ಕೆಳಗಿಳಿದು ಬಂದ.

"ಯಾಕೋ ರಾಜ, ಹುಷಾರಿಲ್ವೇನೋ...ಮಲಗಿದ್ಯಾ?" ಕೇಶವ ಅವನ ಉದಾಸೀನದ ಮುಖವನ್ನು ಕಂಡು ಪ್ರಶ್ನಿಸಿದ.

"ಸ್ವಲ್ಪ ತಲೆ ನೋಯ್ತಿತ್ತು ಅಷ್ಟೇ..."

"ಊಟ ಮಾಡಿ ಬೇಗ ಮಲಕ್ಕೋ. ತಲೆ ನೋವು ಕಡಿಮೆ ಆಗುತ್ತೆ."

ರಾಧಾ ಮುಖ ಸಿಂಡರಿಸಿದಳು. ಮಯೂರ, ಸಪ್ಪೆ ಮುಖ ಹೊತ್ತು ನಿಂತಿದ್ದವನ ಕಡೆ ಆಗಾಗ್ಗೆ ನೋಡಿದಳು. ಆದರೆ ಅವನು ಅವಳ ಕಡೆ ನೋಡಲಿಲ್ಲ. ಹೊರಗೆ ಹೋಗಿದ್ದವರೆಲ್ಲ ಹಿಂತಿರುಗಿದ್ದರು. ಗೌರಮ್ಮ ದೇವಸ್ಥಾನದಿಂದ ತಂದಿದ್ದ ಪ್ರಸಾದವನ್ನು ಎಲ್ಲರ ಕೈಗೂ ಚೂರು ಚೂರು ಹಾಕಿದ್ದಳು. ಸತ್ಯವತಿ, ಮಂದಾರ, ಕರೆಯಲು ಹೋಗಿದ್ದವರ ಮನೆಯವರು ಕೊಟ್ಟಿದ್ದ, ಹಣ್ಣು ತೆಂಗಿನಕಾಯಿಗಳನ್ನು ಒಂದು ಕಡೆ ಇಟ್ಟು ಕುಳಿತರು.

"ಕರೆದು ಬಂದದ್ದೆಲ್ಲಾ ಆಯ್ತಾ?" ಗೌರಮ್ಮ ಪ್ರಶ್ನಿಸಿದಳು.

"ಹುಂ.... ಇನ್ಮೇಲೆ ಇದನ್ನೆಲ್ಲಾ ಬಿಟ್ಟುಬಿಡ್ಬೇಕಮ್ಮ..."

"ಯಾಕೆ? ಯಾಕೆ ಏನಾಯ್ತು? ಯಾರಾದ್ರೂ ಏನಾದ್ರೂ ಅಂದ್ರೇನೇ"

"ಹುಂ... ಅಂದ್ರು. ಇನ್ನು ಈ ಕಾಲ್ದಲ್ಲೂ ಈ ಆರತಿ ಆಚರಣೇನ ಇಟ್ಟುಕೊಂಡಿದೀರಾ... ಈಗೆಲ್ಲಾ ಯಾರು ಮಾಡುಲ್ಲ ಬಿಟ್ಟುಬಿಟ್ಟಿದಾರೆ. ಅಂತಂದ್ರು ನಿನ್ನ ಸ್ನೇಹಿತೆ ಪಾರ್ವತಮ್ಮ."

"ಅನ್ನದೇ ಏನು ಮಾಡ್ತಾಳೆ? ಗೊಡ್ಡು ಹೆಂಗಸು. ಮಕ್ಕಳಿಲ್ಲ ಮರಿ ಇಲ್ಲ. ಅವಳನ್ಯಾಕೆ ಕರೆಯೋಕೆ ಹೋದೆ?"

ಅಮ್ಮ ಹಾಗೆಲ್ಲಾ ಮಾತಾಡ್ಬೇಡ. ರಸ್ತೇಲಿ ಎಲ್ಲರನ್ನು ಕರೆದು ಅವಳನ್ನು ಬಿಡೋಕೆ ಆಗುತ್ತೇನಮ್ಮ?"

"ನಿಂಗೇನು ಗೊತ್ತು? ಅತಿ ಧಿಮಾಕಿನ ಹೆಂಗಸು ಮನಸ್ಸಿಗೆ ಅನ್ನಿಸಿದ್ದನ್ನೆಲ್ಲ ಆಡಿಯೇಬಿಡ್ತಾಳೆ. ಎಲ್ರೂ ಅವಳನ್ನು ದೂರ ಇಟ್ಟಿದಾರೆ."

"ನಾವೂ ಯಾಕೆ ಎಲ್ಲರಂತೆ ವರ್ತಿಸಬೇಕು.? ನಮಗೆ ಎಲ್ಲರೂ ಒಂದೇ. ಕರೆಯದೇ ಇದ್ದರೆ ತಪ್ಪಾಗುಲ್ವೇನಮ್ಮ. ದೊಡ್ಡೋಳಾಗಿ ನೀನೂ ಹೀಗೆ ಆಡ್ತೀಯಲ್ಲ. ಮಕ್ಕಳಿಲ್ಲದೇ ಇದ್ದರೆ ಅದು ಆಕೆಯ ತಪ್ಪೇ?

"ಪೂರ್ವ ಜನ್ಮದಲ್ಲಿ ಅವಳು ಒಳ್ಳೆ ಕೆಲಸ ಮಾಡಿಲ್ಲ. ಅದಕ್ಕೇ ದೇವರು ಅವಳಿಗೆ ಮಕ್ಕಳನ್ನು ಕೊಡಲಿಲ್ಲ. ಗಂಡನ ಕಡೆಯ ಬಡವರ ಮನೆಯ ಒಂದು ಹುಡುಗನ್ನ ಕರ್ಕೊಂಡು ಬಂದು ಇಟ್ಟುಕೊಂಡಿದ್ದರು. ಅದನ್ನಾದ್ರೂ ಬಾಳಗೊಡಿಸಿದ್ಲಾ? ಆ ಹುಡುಗನ್ನ ಬಯ್ಯೋದೇನು! ಹೊಡೆಯದೇನು! ರಸ್ತೆಯೋರಿಗೆಲ್ಲಾ ಗೊತ್ತು. ಒಂದು ದಿನ ಆ ಹುಡುಗ ಮನೆಬಿಟ್ಟು

ಓಡಿಹೋದ. ಪೋಲೀಸ್ ಕಂಪ್ಲೇಟ್ ಕೊಟ್ರೂ ಆ ಹುಡುಗ ಸಿಗಲಿಲ್ಲ. ಎಲ್ಲಿ ಹೋದ್ನೋ.. ಏನಾದ್ನೋ ಯಾರಾದ್ರೂ ಬಾಯಿತಪ್ಪಿ ಕೇಳಿಬಿಟ್ರೆ ಸಾಕು ಅವರ ಜನ್ಮಾನೇ ಜಾಲಾಡಿ ಬಿಡ್ತಾಳೆ. ಗಯ್ಯಾಳಿ ಹೆಂಗ್ಸು."

"ಹೋಗ್ಲಿ ಬಿಡಮ್ಮ. ಆಕೆಯ ಕಷ್ಟ ಆಕೆಗೆ ನಮಗ್ಯಾಕೆ?"

"ಹೌದು ಕಣಮ್ಮ. ಈ ಮಕ್ಕಳ ಎದುರಿಗೆ ನೀನು ಹೀಗೆಲ್ಲಾ ಮಾತಾಡಬೇಡ. ಅದರ ಪರಿಣಾಮ ಮಕ್ಕಳ ಮೇಲೆ ಬೀರುತ್ತೆ."

"ಸರಿ. ಅಕ್ಕ ತಂಗೀರು ನಂಗೇ ತಿಳುವಳಿಕೆ ಹೇಳ್ತೋರಂತೆ. ಎದ್ದು ಬಟ್ಟೆ ಬದಲಾಯಿಸಿ, ಊಟಕ್ಕೆ ಏಳಿ. ರಾತ್ರಿ ಬೇಗ ಮಲಗಿ. ಬೆಳಿಗ್ಗೆ ಬೇಗ ಏಳ್ತೋರಂತೆ. ನಾಲ್ಕುಗಂಟೆಗೇ ಅಲಾರಾಂ ಇಟ್ಟುಬಿಡು. ಕೇಶವನಿಗೆ ಹೇಳಿದಳು.

* * * *

ಅಲಾರಾಂ ಹೊಡೆಯುವ ಮೊದಲೇ ರಾಧಳಿಗೆ ಎಚ್ಚರವಾಗಿತ್ತು. ಆತಂಕಕ್ಕೆ ಸರಿಯಾಗಿ ನಿದ್ದೆ ಬಂದಿರಲಿಲ್ಲ. ಮೈಮೇಲೆ ಕಾಲು ಹಾಕಿ ಮಲಗಿದ್ದ ಮಂದಾರಳನ್ನು ಪಕ್ಕಕ್ಕೆ ತಳ್ಳಿ, ಸರಿಯಾಗಿ ಮಲಗಿಸಿ ಹೊದೆಸಿದಳು. ಇನ್ನು ಮೇಲೆ ಇವಳನ್ನು ಬೇರೆ ಮಲಗಿಸಬೇಕು. ವಿಪರೀತ ಹೊರಳುತ್ತಾಳೆ. ನಿದ್ದೆ ಮಾಡಲು ಬಿಡುವುದಿಲ್ಲ ಎಂದು ಮನದಲ್ಲೇ ಗೊಣಗಿಕೊಂಡು, ಎದ್ದು ಹೊರಬಂದಳು. 'ಟ್ರಿನ್' ಎಂದು ಅಲಾರಾಂ ಹೊಡೆದುಕೊಂಡಿತು. ನಿಂತಲ್ಲೇ ಬೆಚ್ಚಿದಳು. ನಿದ್ದೆ ಮಾಡ್ತಿರೋರನ್ನೆಲ್ಲಾ ಹೊಡೆದು ಎಬ್ಬಿಸುತ್ತೆ ಎಂದುಕೊಂಡು ಗಡಿಯಾರದ ಗುಂಡಿಯನ್ನು ಒತ್ತಿದಳು. ಅಲಾರಾಂ ನಿಂತಿತು.

ಅಕ್ಕ ತಂಗಿಯರಿಬ್ಬರೂ ಮಗ್ಗುಲು ತಿರುಗಿ ಮಲಗಿದರು. ಇವಳು ಅವರ್ಯಾರನ್ನೂ ಎಬ್ಬಿಸುವ ಗೋಜಿಗೆ ಹೋಗದೇ, ಬಚ್ಚಲು ಮನೆಯ ಕಡೆಗೆ ನಡೆದಳು. ಅವಳು ಮುಖ ತೊಳೆದು ಬರುವಷ್ಟರಲ್ಲಿ ಮುಂಬಾಗಿಲನ್ನು ಬಡಿದ ಸದ್ದಾಯಿತು. ಒಂದು ಗಳಿಗೆ ಭಯ ಆವರಿಸಿತು. ಹೊರಗೆಲ್ಲಾ ಇನ್ನೂ ಕತ್ತಲೆ ಕತ್ತಲೆಯಾಗಿದೆ. ಯಾರಿರಬಹುದು? ಎಂದುಕೊಂಡು ಕೆಳದನಿಯಲ್ಲಿ ಯಾರು? ಅಂತ ಕೇಳಿದಳು. "ನಾನು" ಅಂತ ಅಷ್ಟೇ ಮೆಲುದನಿಯಲ್ಲಿ ರಾಜ ಉತ್ತರಿಸಿದ. ಮನದಲ್ಲೇ ಸಿಡುಕಿಕೊಂಡು ಬಾಗಿಲನ್ನು ತೆಗೆದಳು. "ಇಷ್ಟು ಮುಂಚೆ ಈ ಕತ್ತಲೇಲಿ ಇಳಿದು ಬರುವ ಅವಶ್ಯಕತೆ ಏನಿತ್ತು? ಬೆಳಗಾದ ಮೇಲೆ ಬಂದರೆ ಆಗ್ತಿರಲಿಲ್ವಾ!"

"ನಿಮಗೆ ಸಹಾಯ ಮಾಡೋಣ ಅಂತ ಅನ್ನಿಸ್ತು. ಅದಕ್ಕೆ ಬಂದೆ."

"ಇನ್ನೂ ಯಾರು ಎದ್ದಿಲ್ಲ. ನಿಂಗೆ ನಿದ್ದೆ ಬರಲಿಲ್ವಾ?"

"ಇಲ್ಲ ಅಮ್ಮ. ಯಾಕೋ ನಿದ್ದೆ ಬರಲಿಲ್ಲ." ಅವನು ನಿಜವನ್ನೇ ನುಡಿದ. ಬಾಗಿಲನ್ನು ಭದ್ರಪಡಿಸಿ ಅಡಿಗೆ ಮನೆಯ ಕಡೆ ಹೊರಟ ರಾಧಾಳ ಹಿಂದೆಯೇ ಬಂದ. ರಾತ್ರಿಯೇ ಹಾಕಿಟ್ಟಿದ್ದ ಕಾಫಿ ಡಿಕಾಕ್ಷನ್‌ಗೆ, ಹಾಲು ಸಕ್ಕರೆ ಬೆರೆಸಿ ಬಿಸಿ ಮಾಡಿ, ಅವನಿಗೂ ಕೊಟ್ಟು ತಾನೂ ಕುಡಿದಳು.

"ಮಾವಿನಸೊಪ್ಪಿನಲ್ಲಿ ಚಿಕ್ಕಚಿಕ್ಕ ಒಂದೇ ಅಳತೆಯ ಎಲೆಗಳನ್ನು ಬೇರೆ ತೆಗೆದಿಡು. ತೋರಣಕ್ಕೆ ಆಗುತ್ತೆ." ಕಾಫಿ ಕುಡಿದ ನಂತರ ರಾಜ ಎಲೆಗಳನ್ನು ಆರಿಸಿ ತೆಗೆದಿಟ್ಟ.

"ನಾನು ತೋರಣ ಕಟ್ಲಾ?"

"ಬಂದರೆ ಕಟ್ಟು. ಇಲ್ಲಿ ಹಂಚಿಕಡ್ಡಿ ಪೊರಕೇಲಿ, ಕಡ್ಡಿ ತಗೋ, ದಾರ ಅಲ್ಲಿದೆ ತಗೋ" ರಾಜ ನಿಧಾನವಾಗಿ ತೋರಣಕ್ಕೆ ಎಲೆಗಳನ್ನು ಇಟ್ಟು ಕಡ್ಡಿಯ ಚೂರುಗಳನ್ನು ಸಿಕ್ಕಿಸಿದ. ರಾಧಾ ಹಂಡೆಗೆ ನೀರನ್ನು ತೋಡಿ, ಒಲೆಗೆ ಉರಿಯನ್ನು ಹಾಕಿದಳು. ಬೆಳಗಿನ ಕೆಲಸ ಪ್ರಾರಂಭವಾಗಿತ್ತು. ಒಬ್ಬೊಬ್ಬರಾಗಿ ಏಳಲು ಪ್ರಾರಂಭಿಸಿದರು. ರಾಧಾ ಎಲ್ಲರಿಗೂ ಕಾಫಿಯನ್ನು ಕೊಟ್ಟಳು ಎಲ್ಲರ ನಿದ್ದೆ ಚೊಂಪು ಹರಿದಿತ್ತು.

"ನೀರು ಕಾದಿದ್ರೆ ಮಧುರನ್ನ ಎಬ್ಬಿಸಿ, ಮೊದಲು ಅವಳಿಗೆ ನೀರು ಹಾಕಿಬಿಡೋಣ. ತಲೆ ಆರಿಸಿಕೊಂಡು ರೆಡಿಯಾಗಲಿ" ಸತ್ಯವತಿ ನುಡಿದಳು.

"ಅವಳನ್ನು ಎಬ್ಬಿಸಿ, ಹಸೆಮಣೆ ಮೇಲೆ ಕೂರಿಸಿ, ಆರತಿ ಎತ್ತಿ ಎಣ್ಣೆ ಶಾಸ್ತ್ರ ಮಾಡಿ. ರಂಗೋಲಿ ಹಾಕಿ ಮಣೆಗಳನ್ನಿಟ್ಟು, ಮೇಲೆ ಒಂದು ಬಟ್ಟೆ ಹಾಸಿ" ಗೌರಮ್ಮ ಮಲಗಿದ್ದಲ್ಲಿಂದಲೇ ಆದೇಶ ನೀಡಿದಳು.

"ನೀನೂ ಏಳಮ್ಮ. ಇನ್ನು ಮಲಗಿದೀಯಲ್ಲ. ನೀನು ಇಲ್ಲದೇ ಯಾವ ಕೆಲಸವೂ ಪ್ರಾರಂಭ ಆಗುಲ್ಲ" ಪ್ರಭಾವತಿ ನಗುತ್ತಾ ನುಡಿದಳು.

"ನಾನು ಎದ್ದು ಏನು ಮಾಡಬೇಕಾಗಿದೆ?" ಹಸೆಗೆ ಕರೆದ ಹಾಡನ್ನು ಹೇಳಿ, ಅವಳಿಗೆ ಆರತಿ ಎತ್ತಿ, ಎಣ್ಣೆ ಒತ್ತುವ ಶಾಸ್ತ್ರ ಮಾಡಬೇಕಾದವರು ನೀವು. ಅದಕ್ಕೇ ತಾನೇ ನಿಮ್ಮನ್ನು ಊರಿನಿಂದ ಕರೆಸಿರುವುದು?".... ಆರತಿ ತಟ್ಟೆಗೆ ಹಾಕುವ ಕಾಸು ನಿಮಗೇ ತಾನೇ ಸಿಕ್ಕುತ್ತೆ."

"ಎಷ್ಟು ಕಾಸು? ಅಬ್ಬಬ್ಬಾ ಅಂದರೆಒಂದೊಂದು ರುಪಾಯಿ. ಅದರಿಂದ ಏನಾಗುತ್ತೆ?"

"ತವರು ಮನೇಲಿ ಸಿಗುವ ಒಂದು ರೂಪಾಯಿ, ಸಾವಿರ ಹೊನ್ನಿನ ಸಮಾನ. ಅದರ ಬೆಲೆ ತಗೊಂಡು ಏನ್ಮಾಡ್ತೀರಿ?" ಎನ್ನುತ್ತಾ ಎದ್ದು ಕುಳಿತಳು.

"ನೀನು ಋತುಮತಿಯಾದಾಗ ಹೀಗೇ ನಿಮ್ಮ ಸೋದರತ್ತೆ ಬಂದಿದ್ದಳು. ಆಗೆಲ್ಲ ನಮ್ಮಗಳ ಕೈಲಿ ಏನು ಕಾಸಿರುತ್ತಿತ್ತು! ನಿಮ್ಮಪ್ಪ ಅದಕ್ಕೆಲ್ಲ ಕಾಸನ್ನು ಕೊಡ್ತಿರಲಿಲ್ಲ. ನನ್ನ ಹತ್ರ ಎರಡು ನಾಲ್ಕಾಣೆಗಳಿದ್ದವು. ಪಕ್ಕದ ಮನೆಯಲ್ಲಿದ್ದ ಸಾವಿತ್ರಿ ತನ್ನ ಕೈಗೂಸಿನೊಂದಿಗೆ ಬಂದಳು. ಅವಳ ಮಗುವೋ ಹಡಿ ಚೇಷ್ಟೆ. ಕೈಗೆ ಒಂದು ಬಾಳೆಹಣ್ಣನ್ನು ಕೊಟ್ಟು, ನಿನ್ನ ಪಕ್ಕ ಹಸೆಮಣೆಯ ಮೇಲೆ ಕೂರಿಸಿದ್ದಾಯಿತು. ಒಂದು ನಿಮಿಷದಲ್ಲಿ ಬಾಳೆಹಣ್ಣನ್ನು ಮುಗಿಸಿ, ಆರತಿ ತಟ್ಟೆಗೆ ಹಾಕು ಅಂತ ಕೈಗೆ ಕೊಟ್ಟ ಕಾಸನ್ನು ನುಂಗಿಬಿಟ್ಟಿದೆ. ಆಗ ಯಾರಿಗೂ ಗೊತ್ತಾಗಲೇ ಇಲ್ಲ. ನಾನು ಮತ್ತೆ ಡಬ್ಬವನ್ನೆಲ್ಲಾ ತಳಮೇಲು ಮಾಡಿ ಎಂಟಾಣೆಯ ಬಿಲ್ಲೆಯನ್ನು ತಂದುಕೊಟ್ಟೆ. ಆಗ ಅವನು ಬಾಯಿಗೆ ಇಟ್ಟುಕೊಂಡು, ನುಂಗಕ್ಕೆ ಆಗದೇ ಉಗುಳಿತ್ತು. ಆಗಲೇ ಎಲ್ಲರಿಗೂ ಗೊತ್ತಾದದ್ದು. ಯಾರೋ ಮಗುವಿನ ಕೈನಿಂದ ಕಿತ್ತುಕೊಂಡಿರಬಹುದು ಅಂತ ಅಂದುಕೊಂಡಿದ್ದೆವು. ಆಮೇಲೇನಾಯ್ತು ಅಂತ. ಆರತಿ ಎತ್ತುವಾಗ, ನೀನೇ ಆ ಮಗುವಿನ ಕೈಯಿಂದ ಕಾಸನ್ನು ಕಿತ್ತುಕೊಂಡು ಆರತಿ ತಟ್ಟೆಗೆ ಹಾಕಿದ್ದೆ. ಆರತಿ ಎತ್ತಿದ ನೀರನ್ನು ಮುಂಬಾಗಿಲಿಗೆ ಚೆಲ್ಲಿ ಬಂದ ನಿಮ್ಮತ್ತೆ, ಸಾವಿತ್ರಿಯ ಕೈಗೆ ನಾಲ್ಕಾಣೆ ಹಾಕಿ, ನಾಳೆ ನಿಮ್ಮ ಮಗು ಕಕ್ಕಸು ಮಾಡಿದಾಗ, ನಾಲ್ಕಾಣೆ ಸಿಗುತ್ತೆ ಅದನ್ನು ನೀನೇ ಇಟ್ಕೋ ಅಂತ ಹೇಳಿ ತನ್ನ ಭಾಗದ ಹಣವನ್ನು ಬಾಳೆಕಾಯಿಗೆ ಸೇರಿಸಿದಳಂತೆ. ಆಮೇಲೆ ಅದು ಹೇಗೋ ನಿಮ್ಮಪ್ಪನ ಕಿವಿಗೆ ಈ ವಿಷಯ ಬಿತ್ತು. ತಂಗಿಯನ್ನು ಕರೆದು ಬೈದರು. ಆ ಮಗು ದುಡ್ಡು ನುಂಗಿದೆಯೋ ಇಲ್ಲವೋ ಯಾರಿಗೂ ಗೊತ್ತಿಲ್ಲ. ಒಂದು ವೇಳೆ ನುಂಗಿದ್ದರೂ ಅದು ಅಪಾಯ. ನಾಳೆ ಕಕ್ಕಸಿನಲ್ಲಿ ಬಂದರೆ ಸರಿಹೋಯ್ತು. ಇಲ್ಲದಿದ್ರೆ ಮಗೂನ ಡಾಕ್ಟರ ಹತ್ರ ಕರ್ಕೊಂಡು ಹೋಗಬೇಕಾಗುತ್ತೆ. ಅಂಥಾದ್ರಲ್ಲಿ ದೊಡ್ಡೋಳಾಗಿ ಆರತಿ ತಟ್ಟೆಯ ಕಾಸಿಗೆ ಲೆಕ್ಕಾಚಾರ ಹಾಕ್ತೀಯಲ್ಲ. ನೀನೂ ಎಂದೂ ಕಾಸನ್ನೇ ಕಂಡಿಲ್ವೇ? ನಿನಗೆ ಕಾಸಿಗೆ ಗತಿ ಇಲ್ವೇ?" ಅಂತ.

ಅಣ್ಣ ಬೈದರು ಅಂತ ಅದನ್ನೇ ನೆವ ಮಾಡ್ಕೊಂಡು ತತ್‌ಕ್ಷಣವೇ ಊರಿಗೆ ಹೊರಟುಬಿಟ್ಟಳು. ಸದ್ಯಕ್ಕೆ ಊಟ ಆಗಿತ್ತು. ಹೊರಡುವ ಮುಂಚೆ ಸೀರೆಯ

ಬಾಳೆಕಾಯಿಂದ ಕಾಸುಗಳನ್ನು ತೆಗೆದು ಕಿಟಕಿಯಲ್ಲಿ ಕಾಣುವ ಹಾಗೆ ಇಟ್ಟುಬಿಟ್ಟು ಹೊರಟುಹೋಗಿದ್ದಳು. ಅದೇ ಕಡೆ ಅವಳು ನಮ್ಮ ಮನೆಗೆ ಮತ್ತೆ ಬರಲಿಲ್ಲ. ನಿಮ್ಮತ್ತೆಗೆ ಧಿಮಾಕು. ನಿಮ್ಮಪ್ಪ ಹೇಳಿದ್ದರಲ್ಲಿ ಏನಾದ್ರೂ ತಪ್ಪಿತ್ತಾ ನೀನೇ ಹೇಳು."

"ಅಪ್ಪ ಹೋಗಿ ಅತ್ತೇನ ಕರ್ಕೊಂಡು ಬರ್ಬೇಕಾಗಿತ್ತು...?"

"ಯಾಕೆ? ಇವರದ್ದೇನು ತಪ್ಪು? ಅವಳು ಬಂದು ಕ್ಷಮಾಪಣೆ ಕೇಳಿದ್ದರೆ, ನಿಮ್ಮಪ್ಪ ಕರಗಿರುತ್ತಿದ್ದರು. ಅವಳೆಲ್ಲಿ ಬಂದ್ಲು? ಗೌರಿ ಹಬ್ಬದ ಅರಿಶಿನ ಕುಂಕುಮಕ್ಕೆ ಅಂತ ನಿಮ್ಮಪ್ಪ ಕಳಿಸಿದ ಎರಡು ರೂಪಾಯಿಯನ್ನು ದೇವಸ್ಥಾನದ ಅರ್ಚಕರ ಹೆಂಡತಿಗೆ ಕೊಟ್ಟಳಂತೆ. ಈ ವಿಷಯ ತಿಳಿದ ನಿಮ್ಮಪ್ಪ, ಆಮೇಲೆ ಕಳಿಸುವುದನ್ನೇ ನಿಲ್ಲಿಸಿಬಿಟ್ಟರು. ಅಣ್ಣತಂಗಿಯರಲ್ಲಿ ಹೀಗೆ ವಿರಸ ಬಂದೇಬಿಟ್ಟಿತು.

ಈ ಕತೇನ ಈಗ್ಯಾಕಮ್ಮ ಹೇಳ್ತಿದೀಯ...? ಮಕ್ಕಳು ಕೇಳಿಸ್ಕೊಂಡ್ರೆ ಹೆದರ್ತಾರೆ."

ಹೆದರುಕ್ಕೆ ಏನಿದೆ! ಇರೋ ವಿಚಾರ ಹೇಳಿದೆ. ಸದ್ಯ ನೀವುಗಳು ನಿಮ್ಮ ಅತ್ತೆಯ ಥರ ಆಡದಿದ್ರೆ ಸಾಕು. ಕೇಶವನ ಮೇಲೆ ಪ್ರೀತಿ ಇಟ್ಕೊಳ್ಳಿ. ಅವನು ಏನು ಕೊಡ್ತಾನೆ ಬಿಡ್ತಾನೆ ಅನ್ನೋದು ಮುಖ್ಯವಲ್ಲ."

"ಅಪ್ಪಂಗೂ ತುಂಬಾ ಮುಂಗೋಪ ಅಲ್ವೇನಮ್ಮ? ಅತ್ತೇನ ಯಾಕೆ ಬೈಯ ಬೇಕಾಗಿತ್ತು? ಅಪ್ಪ ಸುಮ್ಮನಿದ್ದು ಬಿಡಬೇಕಾಗಿತ್ತು?"

"ಏನು ಸುಮ್ಮನಿರೋದು! ತಪ್ಪು ತಪ್ಪೇ.... ಅವರಿಗೆ ಸರಿ ಅನ್ನಿಸ್ಲಿಲ್ಲ ಅಂದ್ರು... ಅದನ್ನು ದೊಡ್ಡದು ಮಾಡಿದೋಳು ನಿಮ್ಮತ್ತೆ."

"ಈಗ ಅಪ್ಪ ಬದುಕಿಲ್ಲ. ಆದ್ರೂ ಅಪ್ಪ ಮಾಡಿದ್ದು ತಪ್ಪು ಅಂತ ಈಗ ಅನ್ನಿಸ್ತಿದೆ. ಸ್ವಂತ ತಂಗಿಯೇ ಆದ್ರೂ, ಮದುವೆಯಾಗಿ ಹೋಗಿದ್ದರು. ಅವರಿಗೂ ಅವಮಾನ ಆಗುಲ್ವೇನಮ್ಮ...? ಅಪ್ಪನ ಈ ತಪ್ಪಿನಿಂದ ನಾವುಗಳು ಕಳೆದುಕೊಂಡಿದ್ದೇ ಹೆಚ್ಚು. ನಿನಗೂ ಗೊತ್ತು ನಮಗೂ ಗೊತ್ತು."

"ಸರಿ. ಈಗ ನೀವೆಲ್ಲಾ ಬೆಳೆದು ದೊಡ್ಡವರಾಗಿದೀರಿ. ನಿಮ್ಮಪ್ಪನ ತಪ್ಪು ಎದ್ದು ಕಾಣುತ್ತೆ."

"ಬಿಡು ಅಕ್ಕ. ಮಾತು ಎಲ್ಲಿಂದ ಎಲ್ಲಿಗೋ ಹೋಗುತ್ತೆ. ಬೆಳಿಗ್ಗೆ ಬೇಗ ಎದ್ದುದು ಕೆಲಸ ಇದೆ ಅಂತ. ಮಾತು ಸಾಕು. ಮಾತಿನಲ್ಲಿ ಅಮ್ಮನ್ನ ನಾವುಗಳು ಗೆಲ್ಲೋದು ಸಾಧ್ಯವಿಲ್ಲ" ಸತ್ಯವತಿ ಅಕ್ಕನನ್ನು ಪಕ್ಕಕ್ಕೆ ಎಳೆದು ಹೇಳಿದಳು.

"ಈಗ ಅಕ್ಕ ತಂಗಿಯರು ಒಂದು. ನೀವಿಬ್ರೂ ಎಷ್ಟು ಕಿತ್ತಾಡ್ತಿದ್ರಿ ಅಂತ ನಂಗೊತ್ತು ನಿಮ್ಮಪ್ಪಂಗೆ ಗೊತ್ತಾಗ್ತಾನೇ ಇರ್ಲಿಲ್ಲ."

"ಗೊತ್ತಿದ್ರೂ ಸುಮ್ಮನಿರುತಿದ್ರು. ಅತ್ತೆಯ ಹಾಗೆ ಕೋಪಿಸ್ಕೊಂಡು ಮನೆ ಬಿಟ್ಟು ಹೊರಟುಹೋದ್ರೆ ಅಂತ ಅಪ್ಪಂಗೆ ಭಯ." ಸತ್ಯವತಿ ನಕ್ಕಳು.

"ಎಲ್ಲಿಗೆ ಹೋಗ್ತಿದ್ರಿ! ಗಂಡನ ಮನೆಯೂ ಇರಲಿಲ್ಲ. ಅತ್ತೆ ಮನೆಯೂ ಇಲ್ಲ. ಅಪ್ಪನ ಮನೆಯೇ ಗತಿಯಾಗಿತ್ತು."

"ಇರಬಹುದು. ನಾವುಗಳು ಅಪ್ಪನ ಕೋಪಕ್ಕೆ ಹೆದರ್ತಿದ್ವು. ಅವರ ಎದುರಿಗೆ ಜಗಳ ಕದನ ಇರಲಿ. ಮಾತು ಸಹ ಆಡ್ತಿರಲಿಲ್ಲ. ಅಪ್ಪಂಗೆ ಹೆದರದೇ ಇದ್ದೋನು ಅಂತಂದ್ರೆ." ಪ್ರಭಾವತಿ ಮುಂದೆ ಹೇಳಬೇಡ ಎನ್ನುವಂತೆ ತಡೆದಳು. ರಾಧಾ ಕತ್ತೆತ್ತಿ ಅವಳ ಕಡೆ ನೋಡಿದಳು. ಇದ್ದಕ್ಕಿದ್ದಂತೆ ಮೌನ ಆವರಿಸಿತು. ಗೌರಮ್ಮ ಎದ್ದು ಹಾಸಿಗೆಯನ್ನು ಸುತ್ತಿಟ್ಟಳು.

* * * *

ಶಾಸ್ತ್ರಿಗಳು ಹೇಳಿದ್ದಂತೆ ಸಮಯಕ್ಕೆ ಸರಿಯಾಗಿ ಆಗಮನಿಸಿದರು. ಮನೆಯವರ ಚಟುವಟಿಕೆ ಹೆಚ್ಚಾಯಿತು. ಹಾಲಿನ ಮಧ್ಯಭಾಗದಲ್ಲಿ ಸಾರಿಸಿ ರಂಗವಲ್ಲಿ ಹಾಕಿದ್ದ ಸ್ಥಳದಲ್ಲಿ ಮಣೆಯನ್ನಿಟ್ಟು, ಮಣೆಯಮೇಲೆ ಕಲಶವನ್ನಿಟ್ಟು ಗಣಪತಿಯನ್ನು ಸ್ಥಾಪಿಸಿದರು. ಷೋಡಷೋಪಚಾರಗಳ ನಂತರ ಕಲಶದಲ್ಲಿನ ನೀರನ್ನು ಮನೆಯೊಳಗೆಲ್ಲಾ ಪ್ರೋಕ್ಷಿಸಿ, ಮನೆಮಂದಿಗೆಲ್ಲ ಪ್ರೋಕ್ಷಿಸಿ ಎಲ್ಲರಿಗೂ ಪುಣ್ಯಸ್ನಾನ ಮಾಡಿಸಿದರು. ಅಷ್ಟರಲ್ಲಿ ಗೌರಮ್ಮ ದೇವರನ್ನು ತೊಳೆದು ಒರೆಸಿ ಇಟ್ಟಿದ್ದಳು. ಶಾಸ್ತ್ರಿಗಳು ಸಾಂಗವಾಗಿ ದೇವರಪೂಜೆಯನ್ನು ಮಾಡಿದರು. ಬಗೆಬಗೆಯ ಹೂಗಳಿಂದ ದೇವರಿಗೆ ಅರ್ಚನೆ ಮಾಡಿದರು. ಪಂಚಾಮೃತದ ಅಭಿಷೇಕವನ್ನೂ ಮಾಡಿ, ಅಷ್ಟೋತ್ತರನಾಮಗಳಿಂದ ದೇವರನ್ನು ಪೂಜಿಸಿ, ಬಗೆಬಗೆಯ ಹಣ್ಣುಗಳನ್ನೂ ನೈವೇದ್ಯ ಮಾಡಿ, ಮಹಾಮಂಗಳಾರತಿಯನ್ನು ಎತ್ತಿದರು. ಎಲ್ಲರಿಗೂ ಮಂಗಳಾರತಿಯನ್ನು ಕೊಟ್ಟು ಹೂಗಳನ್ನು ಕೊಟ್ಟರು. ಎಲ್ಲರೂ ದೇವರಿಗೆ ಪ್ರದಕ್ಷಿಣೆ ನಮಸ್ಕಾರವನ್ನು ಹಾಕಿ ಪ್ರಾರ್ಥಿಸಿದರು. ನಂತರ ಎಲ್ಲರಿಗೂ ಅವರೇ ತೀರ್ಥಪ್ರಸಾದಗಳನ್ನು ಕೊಟ್ಟು ಆಶೀರ್ವಾದ ಮಾಡಿದರು.

"ಈ ಹುಡುಗ ಯಾರೋ... ಪರಿಚಯವಾಗಲಿಲ್ಲ" ರಾಜನ ಬಗ್ಗೆ ಪ್ರಶ್ನಿಸಿದರು. ಮನೆಯವನಂತೆ ಓಡಾಡಿಕೊಂಡಿದ್ದವನನ್ನು ಕಂಡು ಕುತೂಹಲ ಉಂಟಾಗಿತ್ತು.

"ನಮ್ಮವನೇ. ನನ್ನ ಸ್ನೇಹಿತರ ಮಗ. ಸದ್ಯಕ್ಕೆ ಇಲ್ಲಿಯೇ ಇದಾನೆ. ಇಲ್ಲಿಯ ಇಂಜಿನಿಯರಿಂಗ್ ಕಾಲೇಜಿಗೆ ಸೇರಿಕೊಂಡಿದ್ದಾನೆ." ಕೇಶವ ವಿವರಿಸಿದ. ಶಾಸ್ತ್ರಿಗಳು ಪದೇ ಪದೇ ಅವನನ್ನೇ ನೋಡುತ್ತಿರುವುದನ್ನು ಕೇಶವ ಗಮನಿಸಿದ್ದ.

"ಹುಡುಗ ತುಂಬಾ ಚೂಟಿಯಾಗಿದಾನೆ. ಲಕ್ಷಣವಾಗಿದಾನೆ. ಇವನಿಗೆ ಉಜ್ವಲ ಭವಿಷ್ಯವಿದೆ. ಹೆಸರು ಏನೂಂತ ಹೇಳಿದ್ರಿ?"

"ಮನೋಹರ ಅಂತ... ರಾಜ ಅಂತ ಅಡ್ಡ ಹೆಸರಿದೆ."

"ಹುಡುಗ ಮನೋಹರವಾಗಿಯೇ ಇದಾನೆ." ಶಾಸ್ತ್ರಿಗಳು ಹೊಗಳಿದರು. ಕೇಶವ ಶಾಸ್ತ್ರಿಗಳೊಂದಿಗೆ ಹೊರಗೆ ಬಂದ. ಅಡಿಗೆಯವರು ಎಲ್ಲರಿಗೂ ತಿಂಡಿ ಕಾಫಿಯನ್ನು ತಂದಿತ್ತರು. ತಿಂಡಿ ಕಾಫಿಯ ನಂತರ ಕೈತೊಳೆದು ಶಾಸ್ತ್ರಿಗಳು ಮನೆಗೆಂದು ಹೊರಟರು.

"ಊಟ ಮಾಡ್ಕೊಂಡು ಹೋಗೋರಂತೆ."

"ಇಲ್ಲ ನನಗೆ ಸ್ವಲ್ಪ ಬೆಂಗಳೂರಿನಲ್ಲಿ ಕೆಲಸ ಇದೆ. ಒಂದು ಗಂಟೆಯ ಬಸ್ಸಿಗೆ ಹೊರಡ್ತೀವಿ. ನಾನಿನ್ನು ಬರ್ತೀನಿ."

ಕೇಶವ, ಅವರಿಗೆ ತಾಂಬೂಲದೊಂದಿಗೆ ದಕ್ಷಿಣೆಯನ್ನು ಕೊಟ್ಟು ನಮಸ್ಕರಿಸಿದ. ಉಳಿದವರೂ ನಮಸ್ಕರಿಸಿದರು.

"ರಾಜ, ಇವರನ್ನು ಮನೆತನಕ ಬಿಟ್ಟು ಬಾ." ಕೇಶವನೆಂದ.

"ಎಲ್ಲಿ ನಿಮ್ಮ ಮಗಳು ಸ್ವಲ್ಪ ಕರೀರಿ" ಶಾಸ್ತ್ರಿಗಳು, ಮಧುರಳನ್ನೂ ಕರೆಸಿ, ಅವಳಿಗೆ ಶುಭವನ್ನು ಹಾರೈಸಿದರು. "ನಿನ್ನ ಬಾಳು ಬೆಳಗಲಿ. ವಿದ್ಯಾವಂತೆಯಾಗು. ಈ ಕಾಲದಲ್ಲಿ ಹುಡುಗಿಯರಿಗೂ ಶಿಕ್ಷಣದ ಅಗತ್ಯವಿದೆ. ನಿನಗೆ ಏನು ಓದಬೇಕು ಅಂತ ಆಸೆ."

"ನನಗೆ ಡಾಕ್ಟರಾಗಬೇಕೆಂಬ ಆಸೆ" ಮಧುರ ಸಂಕೋಚದಿಂದ ನುಡಿದಳು. ಶಾಸ್ತ್ರಿಗಳು ಅವಳ ಕೈಗೆ ಹತ್ತು ರೂಪಾಯಿಯ ನೋಟನ್ನು ಕೊಟ್ಟರು. ಅವಳು ನಾಚುತ್ತಾ ತೆಗೆದುಕೊಂಡಳು.

"ಶಾಸ್ತ್ರಿಗಳೇ, ಸಾಯಂಕಾಲ ನಮ್ಮ ಮಧುರಂಗೆ ಆರತಿ ಇಟ್ಟುಕೊಂಡಿದ್ದೇನೆ. ನಿಮ್ಮ ಶ್ರೀಮತಿಯವರನ್ನು ಕಳಿಸಿಕೊಡಬೇಕು" ಗೌರಮ್ಮ ಬಂದು ಹೇಳಿದಾಗ ಮಧುರಳಿಗೆ ಅಜ್ಜಿಯ ಮೇಲೆ ಬೇಸರವಾಗಿತ್ತು.

"ಸರಿ ಕಳಿಸಿಕೊಡ್ತೀನಿ" ಆತ ರಾಜನೊಂದಿಗೆ ಹೊರಟರು. ಕೇಶವ ಅವನ ಕೈಗೆ ಸ್ಕೂಟರಿನ ಬೀಗದ ಕೈಯನ್ನು ಕೊಟ್ಟ.

"ಹುಷಾರಾಗಿ ಕರ್ಕೊಂಡು ಹೋಗಿ ಬಿಟ್ಟುಬಾ. ಗಾಡೀನ ವೇಗವಾಗಿ ಓಡಿಸಬೇಡ" ರಾಜ ಅತ್ತ ಹೋದಕೂಡಲೇ ಮಯೂರ ಅಪ್ಪನ ಎದುರಿಗೆ ಬಂದಳು.

"ಏನಪ್ಪಾ ನೀವು. ನನಗೆ ಮಾತ್ರ ಗಾಡಿಯನ್ನು ಓಡಿಸುಕ್ಕೆ ಕೊಡುಲ್ಲ. ಅವನಿಗಾದ್ರೆ ಕೊಡ್ತೀರಿ."

"ಅವನ ಹತ್ರ ಲೈಸೆನ್ಸ್ ಇದೆ.... ನಿನ್ನ ಹತ್ರ ಇಲ್ಲ." ಸುಮ್ಮನೇ ಹೇಳಿದ.

"ಅವನ ಹತ್ರ ಗಾಡಿ ಇದೆಯಾ?"

"ಇಲ್ಲ. ಅವನ ಮಾವನ ಗಾಡಿಯನ್ನು ಓಡಿಸ್ತಿದ್ದ. ನಿನಗೂ ಲೈಸೆನ್ಸ್ ಸಿಗಲಿ ಆಮೇಲೆ ಗಾಡೀನ ಓಡಿಸೂವಂತೆ."

"ಇನ್ನೂ ಐದು ವರ್ಷ ಕಾಯಬೇಕೆನಪ್ಪಾ! ನಾನು ಕಲಿತಿದೀನಲ್ಲ."

"ಕಲಿತ ಮಾತ್ರಕ್ಕೆ ರೂಲ್ಸ್‌ನ ಮುರಿಯಬಾರದು. ನಿನ್ನಿಂದ ಇನ್ನೊಬ್ಬರಿಗೆ ತೊಂದರೆ ಆಗಬಾರದು." ಮಯೂರ ಬೇಸರದಿಂದ ಕಾಲನ್ನು ಒದರಿದಳು.

"ಕಾಲುಗೀಲು ಒದರಿದರೂ ನಾನು ಕೇಳೋನಲ್ಲ." ಮಯೂರ ಅತ್ತಲಿಂದ ಸರಿದು ದೂರ ಹೋಗಿನಿಂತಳು.

"ಹೋಗೆ ಮಯೂರ, ನಂದಿನಿಯನ್ನು ಕರೆದು ಬಾ. ಪೂಜೆ ಹೊತ್ತಿಗೇ ಬರ್ತೀನಿ ಅಂತಿದ್ರು. ಊಟಕ್ಕಾದ್ರೂ ಬರಲಿ" ಮಯೂರ ಪಕ್ಕದ ಮನೆಗೆ ನಡೆದಳು. "ಘಲ್ ಘಲ್" ಎನ್ನುವ ಕಾಲಿನ ಗೆಜ್ಜೆಯ ಸದ್ದು ಕೇಶವನಿಗೆ ಇಷ್ಟವಾಗಲಿಲ್ಲ.

"ರಾಧಾ, ಅವಳಿಗೆ ಗೆಜ್ಜೆ ತೆಗೆದು ಹಾಕು ಅಂತ ಹೇಳು." ನುಡಿದ. ಅವಳಿಗೆ ಕೇಳಿಸಲಿಲ್ಲ. ಅವನು ಮತ್ತೆ ಕರೆದು ಹೇಳಿದ.

"ಇದ್ದಕ್ಕಿದ್ದಂತೆ ನಿಮಗೇನಾಯ್ತು? ಎಷ್ಟೋ ಜನ ಹೆಣ್ಣು ಮಕ್ಕಳು ಹಾಕ್ಕೋತಾರೆ. ಅದ್ಯಾಕೆ ಈಗ ಕಣ್ಣಿಗೆ ಬಿತ್ತು?"

"ಹಾಗಾದ್ರೆ ದಬದಬ ಅಂತ ಕುದುರೆ ನಡೆದ ಹಾಗೆ ನಡೀಬೇಡ. ನಿಧಾನವಾಗಿ ಹೆಜ್ಜೆ ಇಡು ಅಂತ ಹೇಳು."

"ಅದಿನ್ನು ಚಿಕ್ಕದು. ನಿಧಾನವಾಗಿ ಅವಳೇ ಕಲೀತಾಳೆ."

"ಏನು ಕಲೀತಾಳೋ? ಮಾತು ಮಾತ್ರ ವಿಪರೀತ ಕಲಿತಿದಾಳೆ." ರಾಧಾ ಗಂಡನನ್ನೇ ವಿಚಿತ್ರವಾಗಿ ನೋಡಿ ಅತ್ತಲಿಂದ ಸರಿದಳು.

* * * *

ಊಟದ ಸಮಯವಾಗಿತ್ತು. ಮಡಿಯಲ್ಲೇ ಅಡಿಗೆ ಮಾಡಿದ್ದ ಅಡಿಗೆಭಟ್ಟರು, ಗೌರಮ್ಮನಿಗೆಂದು ಪ್ರತ್ಯೇಕವಾಗಿ ಮಾಡಿದ ಪದಾರ್ಥಗಳನ್ನೆಲ್ಲ ತೆಗೆದಿಟ್ಟು ಉಳಿದುದೆಲ್ಲವನ್ನು ಬಡಿಸಲು ತೆಗೆದಿಟ್ಟರು. ಗೌರಮ್ಮ ಎಂದಿನಂತೆ ಅಡಿಗೆಮನೆಯಲ್ಲಿ ತನಗೆ ಎಲೆ ಹಾಕಿಕೊಂಡು ಊಟಕ್ಕೆ ಕುಳಿತಳು. ಉಳಿದವರಿಗೆ ಊಟದ ಮನೆಯಲ್ಲಿ, ಹಾಲಿನಲ್ಲಿ, ಎಲೆಗಳನ್ನು ಹಾಕಿದರು. ಅಡಿಗೆಭಟ್ಟನೇ ಎಲ್ಲರಿಗೂ ಬಡಿಸಲು ಪ್ರಾರಂಭಿಸಿದರು. ಶ್ಯಾವಿಗೆ ಪಾಯಸ, ಎರಡು ಬಗೆಯ ತರಕಾರಿಯ ಪಲ್ಯ, ಎರಡು ಬಗೆ ಕೋಸಂಬರಿ, ಹುಳಿತೊವ್ವೆ, ಮೊಸರುಬಜ್ಜಿ, ಅನ್ನ, ಸಾರು ಎಲ್ಲವನ್ನೂ ಮಾಡಿದ್ದರು. ಭಕ್ಷ್ಯ, ಮೈಸೂರುಪಾಕು, ಹಾಗೂ ಆಂಬೊಡೆಗಳನ್ನು ಮಾಡಿದ್ದರು.

ಇನ್ನೇನು ಊಟಕ್ಕೆ ಪ್ರಾರಂಭಿಸಬೇಕು ಎನ್ನುವ ಸಮಯಕ್ಕೆ ರಾಜನ ಸೋದರಮಾವನ ಪರಿಚಯದವರು ಬಂದಿಳಿದರು. ಅವರ ಜೊತೆ ಇನ್ನು ಒಬ್ಬ ವ್ಯಕ್ತಿ ಇದ್ದರು. ಕೇಶವ ಇಬ್ಬರನ್ನು ಬರಮಾಡಿಕೊಂಡ.

"ಇವರು ಷಣ್ಮುಖಪ್ಪ ಅಂತ. ನಮ್ಮ ಪರಿಚಯದವರು." ಕೇಶವನಿಗೆ ಪರಿಚಯಿಸಿಕೊಟ್ಟ. ಊಟದ ಸಮಯಕ್ಕೆ ಸರಿಯಾಗಿ ಬಂದ, ಅವರಿಬ್ಬರನ್ನು ಊಟಕ್ಕೆ ಎಬ್ಬಿಸಿದರು. ಊಟದ ನಂತರ ಅವರುಗಳು ಹೊರಗೆ ಎಲ್ಲಿಯೋ ಹೊರಟುಹೋದರು. ಕೇಶವನೂ ಅವರ ಜೊತೆಯಲ್ಲಿ ಹೊರಟುಹೋಗಿದ್ದ. ರಾಧಾ ಆತಂಕಗೊಂಡಿದ್ದಳು. ಯಾರೋ ಏನೋ ಏನು ವ್ಯವಹಾರವೋ, ಇಂಥ ದಿನಗಳಲ್ಲೂ ಮನೆಯಿಂದ ಹೊರಗೆ ಹೋಗಿಬಿಡುವುದೇ.

ಊಟದ ನಂತರ, ಸುಧಾರಿಸಿಕೊಳ್ಳಲು ಹೆಚ್ಚು ಸಮಯವಿರಲಿಲ್ಲ. ಪ್ರಭಾವತಿ, ಮಧುರಳನ್ನು ಕೂರಿಸಿಕೊಂಡು ಮೊಗ್ಗಿನ ಜಡೆಯನ್ನು ಹಾಕಲು ಪ್ರಾರಂಭಿಸಿದಳು.

"ಇನ್ನು ಮುಗೀಲಿಲ್ವಾ ಅತ್ತೇ. ಬೆನ್ನು, ಕತ್ತು ಎಲ್ಲಾ ನೋಯ್ತಿದೆ."

"ಗಂಟೆಗಟ್ಟಳೆ ಕೂತ್ಕೊಂಡು ಟಿ.ವಿ. ನೋಡ್ತೀರಿ. ಪುಸ್ತಕ ಓದ್ತೀರಿ ಆಗ ಬೆನ್ನು ನೋಯುಲ್ವಾ! ಮುಗೀತು ತಡಿ.... ಕೂದಲು ಸಿಕ್ಕು ಬಿಡಿಸೋಕೇ ಇಷ್ಟು ಸಮಯ ಬೇಕಾಯ್ತು."

"ಅತ್ತೇ ನಂಗೂ ಮೊಗ್ಗಿನ ಜಡೆ ಹಾಕಿ" ಮಂದಾರ ಬಂದು ಕುಳಿತಳು.

"ನಿನ್ನ ಕೂದಲು ಉದ್ದ ಕಡಿಮೆ. ಚೌರಿ ಹಾಕಬೇಕಾಗುತ್ತೆ. ಇನ್ನೊಂದು ದಿನ ಹಾಕ್ತೀನಿ" ಮಂದಾರ ನಿರಾಸೆಯಿಂದ ಮೂತಿ ಉದ್ದ ಮಾಡಿದಳು.

"ಹಳೇ ಕಾಲದ ಅಜ್ಜಿಯ ಥರ ಕಾಣ್ತದೆ ನಿನ್ನ ಮುಖ" ಮಯೂರ ಗೇಲಿ ಮಾಡಿದಳು. ಮಧುರ ಕೆಟ್ಟ ಮುಖ ಮಾಡಿದಳು.

"ನೀನು ಸುಮ್ನಿರೇ.... ಮೊಗ್ಗಿನ ಜಡೇನ ಹೀಗೇ ಬಿಗಿಯಾಗಿ ಹಾಕ್ಬೇಕು. ಪೌಡರ್ ಹಚ್ಕೊಂಡು ಕುಂಕುಮ ಇಟ್ಕೊಂಡ ಮೇಲೆ ಮುಂದಲೆ ಸರಿ ಮಾಡ್ತೀನಿ. ಆಮೇಲೆ ನೋಡ್ತಿರು ಮಹಾಲಕ್ಷ್ಮಿ ಕಳೆ ಬರುತ್ತೆ ಮುಖಕ್ಕೆ"

ಮಯೂರ ಕಿಸಕ್ಕನೆ ನಕ್ಕಳು. "ಯಾಕೇ ನಗ್ತೀಯಾ! ನಿಂಗೆ ಆರತಿ ಮಾಡೂವಾಗ್ಲೂ ನಾನೇ ಬಂದು ಮೊಗ್ಗಿನ ಜಡೆ ಹಾಕ್ತೀನಿ ನೋಡ್ತಿರು"

ಮಯೂರ ನಾಚಿದಳು. "ಹೋಗೀ ಅತ್ತೆ ನಾನು ಆರತಿ ಗೀರತಿ ಏನನ್ನೂ ಮಾಡಿಸ್ಕೊಳುಲ್ಲ. ನಂಗೆ ಇದೆಲ್ಲ ಇಷ್ಟವಿಲ್ಲ."

"ನಿನ್ನ ಇಷ್ಟಾನ ಯಾರು ಕೇಳ್ತಾರೆ? ಇವೆಲ್ಲಾ ಶಾಸ್ತ್ರ ಮಾಡಿಸ್ಕೊಳ್ಳಲೇಬೇಕು. ನಿಮ್ಮ ಅಜ್ಜಿ ಬಿಡ್ತಾರಾ!"

"ನಾನು ಯಾರಿಗೂ ಹೇಳೂದೇ ಇಲ್ಲ." ತಟಕ್ಕನೆ ನುಡಿದು, ತುಟಿಗಳನ್ನು ಕಚ್ಚಿಕೊಂಡಳು. ಮಧುರ ಅವಳ ಕೈಮೇಲೆ ಒಂದೇಟು ಹಾಕಿದಳು.

"ಆಗೇ ಹೋಯ್ತು ನೋಡು, ಕುಚ್ಚು ಹಾಕಿ, ರಿಬ್ಬನ್ ಕಟ್ಟಿದ್ದೀನಿ. ಹೋಗಿ ಚೆನ್ನಾಗಿ ಮುಖ ತೊಳ್ಕೊಂಡು ಬಾ. ಮುಖಕ್ಕೆ ಅಲಂಕಾರ ಮಾಡ್ತೀನಿ."

"ನಾನೇ ಮಾಡ್ಕೋತೀನಿ" ಅವಳು ಮುಖ ತೊಳೆದು ಬರುವಷ್ಟರಲ್ಲಿ ಪ್ರಭಾವತಿ, ನಾಲ್ಕಾರು ರೇಶಿಮೆಯ ಸೀರೆಗಳನ್ನು ತನ್ನ ಮುಂದಿಟ್ಟುಕೊಂಡು ಕೂತಿದ್ದಳು.

"ಮಧು, ಈ ಸೀರೆಗಳಲ್ಲಿ ನಿನಗೆ ಯಾವ ಸೀರೆ ಇಷ್ಟವೋ ಅದನ್ನೇ ಉಡುಸ್ತೀನಿ" ಮಧುರ ತಲೆಯಾಡಿಸಿದಳು.

"ಇಲ್ಲ ಅತ್ತೆ. ನಂಗೆ ಸೀರೆ ಬೇಡ. ನಾನು ಚೂಡಿದಾರ್ ಹಾಕ್ಕೋತೀನಿ"

"ಥೂ... ಲಕ್ಷಣವಾಗಿ ಸೀರೆ ಉಟ್ಕೋ. ಈ ಮೊಗ್ಗಿನ ಜಡೆಗೆ ನಿನ್ನ ಚೂಡಿದಾರ್ ಹೊಂದುಲ್ಲ" ಅಷ್ಟರಲ್ಲಿ ರಾಧಾಳೂ ಅಲ್ಲಿಗೆ ಬಂದಳು.

"ಫೋಟೋಗ್ರಾಫರ್ ಬರ್ತಾನೆ. ಸುಮ್ನೆ ಸೀರೆ ಉಟ್ಕೋ ಕಟಕಟೆ ಆಡ್ಬೇಡ."

"ಅಮ್ಮಾ...

"ನಿಮ್ಮಮ್ಮ ಹೇಳಿದ್ಮೇಲೆ ಮುಗೀತು. ಈ ಗುಲಾಬಿ ಬಣ್ಣದ ಸೀರೇನ ಉಟ್ಕೋ. ನಿಂಗೆ ಒಪ್ಪುತ್ತೆ." ಸತ್ಯವತಿಯೂ ನುಡಿದಾಗ ಮಧುರ ಸುಮ್ಮನಾದಳು. ಅದು ಬೇಡ, ಇದು ಬೇಡ ಎಂದು ಕೊಸರಾಡಿದರೂ, ಪ್ರಭಾವತಿ ಮಧುರಳನ್ನು ಪುಸಲಾಯಿಸಿ ತನಗೆ ತಿಳಿದಂತೆ ಅಲಂಕಾರ ಮಾಡಿದಳು. ಕನ್ನಡಿಯ ಮುಂದೆ ನಿಂತು ತನ್ನನ್ನು ತಾನು ನೋಡಿಕೊಂಡಾಗ, ತಾನು ಬೇರೆ ಯಾರನ್ನೋ ನೋಡುತ್ತಿದ್ದೇನೆಂದೆನಿಸಿತ್ತು. 'ಅಮ್ಮಾ" ಅಲ್ಲಿಂದಲೇ ಕಿರುಚಿದಳು.

"ಏನೇ ಏನಾಯ್ತೇ?" ರಾಧಾ ಧಡಗುಟ್ಟಿ ಓಡಿಬಂದಳು.

"ನನ್ನ ಮುಖ ಇದ್ದ ಹಾಗೇ ಇಲ್ಲ. ನೋಡಮ್ಮ ಎಷ್ಟೇ ಅಸಹ್ಯವಾಗಿ ಕಾಣ್ತಿದೀನಿ."

"ಥೂ ಹಾಗೆಲ್ಲ ಅನ್ನಬಾರದು. ಅಲಂಕಾರ ಬದಲಾಗಿದೆ ಆದಕ್ಕೇ ಹಾಗೆನ್ನಿಸುತ್ತೆ. ಪಾಪ ನಿಮ್ಮತ್ತೆ ಎಷ್ಟು ಕಷ್ಟಪಟ್ಟು ಅಲಂಕಾರ ಮಾಡಿದಾರೆ. ನಿನ್ನ ಮಾತು ಕೇಳಿಸಿದರೆ ಅವರಿಗೆ ಬೇಜಾರಾಗುತ್ತೆ."

"ಆದರೆ ಆಗಲಿ, ನಾನೇನು ಅವರನ್ನು ಕೇಳಿದ್ನಾ? ಈ ಮೊಗ್ಗಿನ ಜಡೆಯ ಭಾರಕ್ಕೆ ಕತ್ತೆಲ್ಲಾ ನೋಯ್ತಿದೆ."

"ಸರಿ. ಆರತಿ ಶಾಸ್ತ್ರ ಮುಗಿದ ಕೂಡಲೇ ಅಲಂಕಾರ ಎಲ್ಲಾ ತೆಗೆದರಾಯ್ತು. ನೀನೊಂದು ಕಡೆ ಕೂತ್ಕೋ. ಸುಮ್ಮನೆ ಓಡಾಡ್ಬೇಡ. ಅಷ್ಟಕ್ಕೂ ನೀನೇನು ಕೆಲಸ ಮಾಡ್ಬೇಕು ಈಗ?"

"ಹೊಟ್ಟೆ ಹಸೀತಿದೆ. ಏನಾದ್ರೂ ತಿನ್ನೋಕೆ ಕೊಡಮ್ಮಾ."

"ಬೆಳಿಗ್ಗೆ ಮಾಡಿದ್ದ ಚಿತ್ರಾನ್ನ ಇದೆ ಕೊಡ್ಲಾ."

"ಥೂ ಚಿತ್ರಾನ್ನ! ಬೇಡಪ್ಪ. ಗರಿಗರಿಯಾಗಿ ಏನಾದ್ರೂ ಇದ್ರೆ ಕೊಡು."

ಉಂಡೆ ಚಕ್ಕುಲಿ ಎಲ್ಲಾ ಇದೆ. ಆದ್ರೆ ಈಗ ತೆಗೆದರೆ, ಎಲ್ಲಾ ಮಕ್ಕಳಿಗೂ ಕೊಡಬೇಕಾಗುತ್ತೆ. ಕ್ರೀಂ ಬಿಸ್ಕತ್ ತರಿಸಿಕೊಡ್ತೀನಿ ತಡಿ." ರಾಧಾ ಹೊರಬಂದು ಅತ್ತಿತ್ತ ಕಣ್ಣು ಹಾಯಿಸಿದಳು. ಗೇಟಿನ ಬಳಿ ನಿಂತಿದ್ದ ರಾಜ ಕಂಡ ಒಳಗೆ ಕರೆದು ಅವನ ಕೈಗೆ ಹಣವನ್ನು ಕೊಟ್ಟು ಅಂಗಡಿಗೆ ಕಳಿಸಿದಳು.

ಬೇಕರಿಯಿಂದ ಕ್ರೀಂ ಬಿಸ್ಕತ್ತು, ಹಾಗೂ ಸಾಲ್ಟ್ ಬಿಸ್ಕತ್ತುಗಳನ್ನು ತಗೊಂಡುಬಾ. ಅವನು ಅತ್ತ ಹೋದ ಕೂಡಲೇ ಇತ್ತ ಫೋನು ರಿಂಗಾಗಿತ್ತು.

"ನಾನೂ ರೀ, ಶಾಸ್ತ್ರೀಗಳ ಹೆಂಡತಿ ಶಾಂತಮ್ಮ. ನಾನು ನಿಮ್ಮ ಮನೆಗೆ ಹೊರಟಿದೀನಿ. ನನಗೆ ನಿಮ್ಮ ಮನೆ ಗೊತ್ತಿಲ್ಲ. ಯಾರನ್ನಾದ್ರೂ ಕಳಿಸ್ತೀರಾ! ನಮ್ಮ ಮನೆಯವರೂ ಮನೇಲಿಲ್ಲ. ಹೊರಗೆ ಹೋಗಿದಾರೆ" ರಾಧಾ ಸುಸ್ತಾದಳು.

ಈಗ ಅವರನ್ನು ಕರ್ಕೊಂಡು ಬರೋರು ಯಾರು? ಬೇಕರಿಯಿಂದ ರಾಜ ಬರುತ್ತಿದ್ದಂತೆ ಅವನಿಗೆ ಈ ಕೆಲಸವನ್ನು ಹಚ್ಚಿದಳು. ಅವನು ಮತ್ತೆ ರಸ್ತೆಗೆ ಇಳಿದ. ಮಧುರ ಕುರುಕುರು ಸದ್ದು ಮಾಡುತ್ತಾ ಬಿಸ್ಕತ್ತನ್ನು ತಿನ್ನುವಾಗ, ಮಂದಾರ, ಮಯೂರಳೂ ಪಾಲಿಗೆ ಬಂದರು. ಚುನ್ನಿಗೂ ಕೊಟ್ಟರು. ಪಾಪ, ಬೇಕರಿಯಿಂದ ತಂದವನು, ಅವನು, ಅವನಿಗೂ ಕೊಡಬಹುದಾಗಿತ್ತು ಅಂತನ್ನಿಸಿದಾಗ ನುಡಿದಳು.

"ಎಲ್ಲಾ ತಿನ್ಬೇಡಿ. ಒಂದೆರಡನ್ನು ಉಳಿಸಿ. ರಾಜಂಗೂ ಕೊಡೋಣ." ಆದರೆ ಅಷ್ಟರೊಳಗೆ ಅವರುಗಳು ಮುಗಿಸಿಬಿಟ್ಟಿದ್ದರು.

"ಎಂದೂ ಬಿಸ್ಕತ್ತನ್ನೇ ಕಾಣದವರ ಥರ ತಿಂದುಬಿಟ್ರಾ? ಬೆಳಿಗ್ಗೆ ಹಬ್ಬದ ಊಟ ಆಗಿತ್ತು. ರಾಜಂಗೂ ಒಂದೆರಡು ಮುಗಿಸಬೇಕಾಗಿತ್ತು."

"ಬಿಡಮ್ಮ. ಅವನಿಗ್ಯಾಕೆ? ಅವನೇನು ನಮ್ಮ ಮನೆಯೋನಾ?"

"ಮಯೂರ! ಹೀಗೆಲ್ಲಾ ಮಾತಾಡ್ಬೇಡ. ತಂದೋನು ಅವನು."

"ನೀನು ಮೊದ್ಲೇ ಹೇಳ್ಬೇಕಾಗಿತ್ತು. ನಮಗೇನು ಗೊತ್ತು?"

"ಸಾಕು ಮಾತು... ನಿಮ್ಮಪ್ಪಂಗೆ ಗೊತ್ತಾದ್ರೇ..."

"ಅದೇನೋ.... ನೀವಿಬ್ರೂ ಅವನ ಪರವಹಿಸ್ಕೊಂಡು ಮಾತಾಡ್ತೀರಿ... ನಂಗೆ ರೇಗುತ್ತೆ" ಮಯೂರ ಅಲ್ಲಿಂದ ಹೊರಕ್ಕೆ ನಡೆದಿದ್ದಳು. ಕಾಲಿನ ಗೆಜ್ಜೆ ಸದ್ದು ಮಾಡಿತ್ತು. ಕೇಶವ ಹೇಳಿದ್ದು ನೆನಪಾಗಿತ್ತು.

"ಮಯೂರ ನಿಂತ್ಕೋ..." ಅವಳು ನಿಂತಳು.

"ಗೆಜ್ಜೆ ವಿಪರೀತ ಸದ್ದು ಮಾಡುತ್ತೆ. ಬರೀ ಚೈನ್ ಹಾಕ್ಕೋ..."

"ಯಾಕೆ? ಸದ್ದಾದ್ರೆ ಏನೀಗ?"

"ಹೇಳಿದಷ್ಟನ್ನು ಕೇಳು. ನೀನೀಗ ಚಿಕ್ಕವಳಲ್ಲ. ಝಣಝಣ ಸದ್ದು ಮಾಡ್ಕೊಂಡು ತಿರುಗಾಡುಕ್ಕೆ."

"ನಾನಿನ್ನು ದೊಡ್ಡೋಳಾಗಿಲ್ಲಮ್ಮ. ಇವಳು ದೊಡ್ಡೋಳಾಗಿರೋದು..." ಮಧುರಳ ಕಡೆ ಬೆರಳು ತೋರಿದಳು.

"ತಲೆ ಹರಟೆ..... ನೀನು ಅವಳಿಗಿಂತ ಎತ್ತರವಾಗಿ ಬೆಳೆದಿದೀಯ... ಎಲ್ಲರೂ ನಿನ್ನನ್ನೇ ಇವಳ ಅಕ್ಕಾನಾ ಅಂತ ಕೇಳ್ತಾರೆ. ನಿನಗೋ ನಯನಾಜೂಕೇ ಗೊತ್ತಿಲ್ಲ. ದಬದಬ ಅಂತ ನಡೀತೀಯ..."

"ಡ್ಯಾನ್ಸ್ ಕಲಿತಿದೀನಿ ಅಂತ ಎಲ್ಲರಿಗೂ ತಿಳೀಲಿ ಅಂತ ಇವಳಿಗೆ ಆಸೆ."

"ನೀನು ಸುಮ್ನಿರು..." ಮಯೂರ ಮಧುರಳ ಮೇಲೆ ರೇಗಿ, ಎಲ್ಲರನ್ನು ದುರುದುರು ನೋಡಿ ಅಲ್ಲಿಂದ ಮರೆಯಾದಳು. ಮಧುರ ಪೆಚ್ಚಾಗಿದ್ದಳು.

"ಇನ್ನೂ ನೀನು ಪೆಚ್ಚು ಮುಖ ಹಾಕ್ಕೋಬೇಡ. ಫೋಟೋಗ್ರಾಫರ್ ಬರೋ ಹೊತ್ತಾಯ್ತು. ನಾಲ್ಕು ಫೋಟೋಗಳು ಸಾಕು. ಚುನ್ನೀ.... ನೀನೂ ಸೀರೆ ಉಟ್ಕೋ. ನಿಂಗೆ ಹೇಗೆ ಕಾಣುತ್ತೆ ಅಂತ ನೋಡ್ಬೇಕು ನಾನು..." ಚುನ್ನಿ ರಾಧಾಳ ಹಿಂದೆ ನಡೆದಳು.

* * * *

ರಾಜ, ಶಾಸ್ತ್ರಿಗಳ ಪತ್ನಿ ಲಕ್ಷ್ಮೀದೇವಮ್ಮನನ್ನು ಆಟೋರಿಕ್ಷಾದಲ್ಲಿ ಕೂರಿಸಿಕೊಂಡು ಬಂದ. ಆಕೆ ಒಳಗೆ ಬರುತ್ತಿದ್ದಂತೆಯೇ ಸಡಗರಗಳು ಪ್ರಾರಂಭವಾದವು. ನಾಲ್ಕು ಸಾರಿ ಕರೆದ ನಂತರ ಮಧುರ ನಾಚುತ್ತಾ, ರೂಮಿನಿಂದ ಹೊರಬಂದು, ಅವಳಿಗಾಗಿ ಸಿಂಗರಿಸಿದ್ದ ಕುರ್ಚಿಯ ಮೇಲೆ ಕುಳಿತಳು. ಲಕ್ಷ್ಮೀದೇವಮ್ಮ ಹಸೆಗೆ ಕರೆದ ಹಾಡನ್ನು ಹಾಡಿದರು. ಪಕ್ಕದಲ್ಲಿ ಇನ್ನೊಂದು ಕುರ್ಚಿಯನ್ನು ಹಾಕಿ ಮಂದಾರಳನ್ನು ಕೂರಿಸಿದರು. ಲಕ್ಷ್ಮೀದೇವಮ್ಮನ ಹಾಡು ಮುಗಿಯುವಷ್ಟರಲ್ಲಿ ಬಂದಿದ್ದ ಫೋಟೋಗ್ರಾಫರ್, ಮಧುರಳ ಫೋಟೋಗಳನ್ನು ತೆಗೆದ. ಮೊಗ್ಗಿನ ಜಡೆಯ ಫೋಟೋ ತೆಗೆದದ್ದಾಯಿತು. ತಂಗಿಯರಿಬ್ಬರನ್ನು ಪಕ್ಕದಲ್ಲಿ ಕೂರಿಸಿಕೊಂಡು ತೆಗೆಸಿಕೊಂಡಳು. ಅಪ್ಪಅಮ್ಮನೊಂದಿಗೆ ತೆಗೆಸಿಕೊಳ್ಳುವಾಗ, ಕೇಶವ ಮನೆಯಲ್ಲಿಲ್ಲ ಎನ್ನುವುದು ಎಲ್ಲರಿಗೂ ನೆನಪಾಯಿತು. ಅತ್ತೆಯರು, ಅಜ್ಜಿ, ಅಮ್ಮ ಚುನ್ನಿಯರೊಡನೆ ನಿಂತು ತೆಗೆಸಿಕೊಂಡಳು. ದೂರದಲ್ಲಿ ವೆರಾಂಡದಲ್ಲಿ ನಿಂತು ರಾಜ ಈ ಸಂಭ್ರಮಗಳನ್ನು ವೀಕ್ಷಿಸುತ್ತಿದ್ದ. ಆಕೆಯ ಹಾಡುಗಳು ಮುಗಿದಿದ್ದವು.

"ನೀವು ಬನ್ನಿ ದೊಡ್ಡೋರು. ಅದೇನು ಮಾಡಬೇಕೋ ಸಮಗೇನೂ ತಿಳೀದು" ರಾಧಾ ಅವರನ್ನು ಕರೆದಳು.

"ನಿಮ್ಮತ್ತೆಗೆ ಗೊತ್ತಿರುತ್ತಲ್ಲ.... ಅವರನ್ನು ಕೇಳಿ.

"ನನಗೆ ಗೊತ್ತಿದ್ರೂ ಏನುಪಯೋಗ? ಲಕ್ಷಣವಾಗಿ ಹಿರೀ ಮುತ್ತೈದೆ ನೀವು ಬನ್ನಿ... ಅರಿಶಿನ ಹಚ್ಚಿ ಕುಂಕುಮ ಇಟ್ಟು ಮಡಿಲು ತುಂಬಿ ಆರತಿ ಮಾಡಿ.... ಅಷ್ಟು ಸಾಕು" ಗೌರಮ್ಮ ನುಡಿದಳು. ಆಕೆ ಎದ್ದು ಬಂದು, ಅರಿಶಿನವನ್ನು ಕೈಗಳಿಗೆ ಹಚ್ಚಿಕೊಂಡು, ಮಧುರಳ ಕೆನ್ನೆಗಳಿಗೆ, ಮುಂಗೈಗಳಿಗೆ ಹಾಗೂ ಕಾಲುಗಳಿಗೆ ಹಚ್ಚಿದಳು. ಮಧುರ, ಮುಜುಗರದಿಂದ ಮಿಸುಕಾಡಿದಳು. ಮಯೂರ ಮಂದಾರ ಕಿಸಕಿಸನೆ ನಗುತ್ತಿದ್ದರು. ಕುಂಕುಮವನ್ನು ಬೆರಳಲ್ಲಿ ತೆಗೆದಿಟ್ಟುಕೊಂಡು, ಎರಡು ಹುಬ್ಬುಗಳ ನಡುವೆ ಕಾಣುವಂತೆ ಇಟ್ಟಳು. ಮೂಗಿನ ಮೇಲೆ ಉದುರಿದ ಕುಂಕುಮವನ್ನು ಮಧುರ ಕರವಸ್ತ್ರದಿಂದ ಒರೆಸಿಕೊಂಡಳು. ಅದರ ಕೆಳಗೆ ಸಣ್ಣದಾಗಿ ಚಂದ್ರವನ್ನು ಸಹ ಇಟ್ಟಳು. ಕಾಡಿಗೆಯ ಡಬ್ಬಿಯನ್ನು ಕೈಗೆ ತೆಗೆದುಕೊಂಡಾಗ, ರಾಧಾ ಹೆದರಿದಳು.

"ಲಕ್ಷ್ಮಿದೇವಮ್ಮ ಕಪ್ಪು ತುಂಬಾ ಹಳೇದು... ಕಣ್ಣು ಉರಿಯುತ್ತೆ. ಸುಮ್ಮನೆ ಹಚ್ಚಿದಂತೆ ಶಾಸ್ತ್ರ ಮಾಡಿ" ಎಂದಳು.

"ನಂಗೆ ಹೇಳಿದ್ರೆ ನಮ್ಮನೆಯಿಂದ ತರ್ತಿದ್ನೆಲ್ಲಾ ರಾಧಮ್ಮ.... ಮೊನ್ನೆ ಮೊನ್ನೆ ನನ್ನ ಮಗಳಿಗೆ ಮಾಡಿಕೊಟ್ಟೆ. ಅಪ್ಪಟ ಹಸುವಿನ ಬೆಣ್ಣೆಹಾಕಿ ಮಾಡಿದ್ದು." ಎನ್ನುತ್ತಾ ಕಪ್ಪು ಹಚ್ಚಿದ ಶಾಸ್ತ್ರವನ್ನು ಮಾಡಿದಳು. "ಹೂವನ್ನೆ ಮುಡಿಸ್ಲೇ ಇಲ್ಲ ಮರೆತುಹೋಯ್ತು" ಎನ್ನುತ್ತಾ ಅಲ್ಲಿದ್ದ ಮಲ್ಲಿಗೆಯ ಹೂವಿನ ಕುಚ್ಚನ್ನು ಮಧುರಳ ತಲೆಗೆ ಮುಡಿಸಿದಳು. ಕೂದಲು ಎಳೆದು ಚುಳ್ ಎಂದಿತು. ಮಧುರ ಹ್ಲಾಂ... ಎಂದಳು ಮಂದಾರಾ ನಕ್ಕಳು.

"ಅಜ್ಜೀ, ಬರೀ ಅಕ್ಕಂಗೇ ಅಲಂಕಾರ ಮಾಡ್ತಿದೀರಲ್ಲ. ಅವಳ ಪಕ್ಕ ಕುಳಿತಿರುವ ಹುಡುಗಿಗೆ ಮಾಡುಲ್ವೇ?" ಮಯೂರ ಕೇಳಿದಳು.

"ಅವಳಿಗೆ ನೀನು ಮಾಡು" ಆಕೆಯೂ ತಮಾಷೆಯಾಗಿ ನುಡಿದರು. ಮಯೂರ ಹತ್ತಿರಕ್ಕೆ ಬಂದಳು.

"ನನ್ನ ಮೈಯನ್ನು ಮುಟ್ಟಿದರೇ ನೋಡ್ತಿರು..." ಮಂದಾರ ಬೆರಳು ತೋರಿಸಿ ಹೆದರಿಸಿದಳು.

"ಏನೇ ಮಾಡ್ತೀಯ!"

"ಅವತ್ತೂ ಯಾರ್ಗೂ ಹೇಳ್ಬೇಡ ಅಂತ ಹೇಳಿದ್ದಲ್ಲ. ಅದನ್ನ ಎಲ್ಲರಿಗೂ ಹೇಳಿಬಿಡ್ತೀನಿ" ಮಯೂರ ಹೆದರಿ ಹಿಂದೆ ಸರಿದಳು. ಅಕ್ಕಪಕ್ಕ, ಇತ್ತಇತ್ತ ನೋಡಿದಳು. ಯಾರಿಗೂ ಅವಳ ಮಾತುಗಳು ಕೇಳಿಸಿರಲಿಲ್ಲ. ಆದರೂ ತಂಗಿಯ ಕಡೆ ಬಿರುಗಣ್ಣನ್ನು ಬಿಟ್ಟಳು.

ಲಕ್ಷ್ಮಿದೇವಮ್ಮ ಸಂಪ್ರದಾಯದ ಹಾಡುಗಳನ್ನು ಹೇಳಿಕೊಂಡು, ಮಧುರಳ ಮಡಿಲನ್ನು ಹಣ್ಣುಗಳಿಂದ ತುಂಬಿದಳು. ಉಂಡೆ ಚಕ್ಕುಲಿಗಳನ್ನು ಕೊಟ್ಟರು. ಚಿಗುಳಿಯ ಚೂರನ್ನು ಅವಳ ಕೈಗಿತ್ತು ತಿನ್ನು ಅಂತ ಹೇಳಿದರು. ತಾನು ತನ್ನ ಮನೆಯಿಂದ ತಂದಿದ್ದ ಲೇಹ್ಯವನ್ನು ತಿನ್ನಲು ಕೊಟ್ಟರು.

"ಅಜ್ಜೀ.... ಇದನ್ನೆಲ್ಲ ಈಗ್ಲೇ ತಿನ್ನಬೇಡಾ?"

"ಹುಂ. ತಿನ್ನಬೇಕು. ಅದು ಶಾಸ್ತ್ರ..." ಅವಳು ಕಷ್ಟಪಟ್ಟು ಲೇಹ್ಯವನ್ನು ನುಂಗಿದಳು. ಬೆಳ್ಳಿ ಲೋಟದಲ್ಲಿದ್ದ ಹಾಲನ್ನು ಕುಡಿಯಲು ಕೊಟ್ಟರು. "ಘಮಘಮಿಸುವ, ಕೇಸರಿ ಪಚ್ಚಕರ್ಪೂರ ಯಾಲಕ್ಕಿ ಬೆರೆಸಿದ, ಹದವಾದ, ಸವಿಯಾದ ಸಿಹಿ ಕೆನೆಹಾಲನು ನೀಡುವೆ, ಮುಗದೆ ನಿನಗೆ" ಎಂದು ರಾಗವಾಗಿ ಹಾಡಿದರು. ಮಧುರ ಮುಜುಗರದಿಂದ ಕುಡಿದಳು.

"ಅತ್ತೆ.... ಇದಕ್ಕೆಲ್ಲ ಏನು ಅರ್ಥ.... ಈ ಶಾಸ್ತ್ರಗಳನ್ನೆಲ್ಲಾ ಮಾಡ್ಲೇಬೇಕಾ?" ಅಲ್ಲಿಯೇ ಸಮೀಪದಲ್ಲಿದ್ದ ಸತ್ಯವತಿ ಕೇಳಿದಳು.

"ಹಿಂದೆಲ್ಲಾ, ಮೈನೆರೆಯುವ ಮೊದಲು ಮದುವೆ ಮಾಡಿರುತ್ತಿದ್ದರು. ಮೈನೆರೆದ ನಂತರ, ಆರೈಕೆ ಮಾಡಿ ಶಾಸ್ತ್ರೋಕ್ತವಾಗಿ ಪ್ರಸ್ಥ ಮಾಡಿ ಗಂಡನ ಮನೆಗೆ ಕಳಿಸುತ್ತಿದ್ದರು. ಗಂಡನ ಕಣ್ಣಿಗೆ ಹೆಣ್ಣು ಅಂದವಾಗಿ ಕಾಣಬೇಕೋ ಬೇಡವೋ.... ಅದಕ್ಕೇ ಈ ತಿಂಡಿ ತಿನಿಸು, ಹಾಲು ಹಣ್ಣುಗಳು ಎಲ್ಲಾ ಆದರೆ ಈಗ ಕಾಲ ಬದಲಾಗಿದೆ. ಹುಡುಗೀರು, ಓದು ಬರಹ, ಸ್ಕೂಲು ಕಾಲೇಜಿನ ಓಡಾಟದಲ್ಲಿ ಕೃಶವಾಗಿ ಹೋಗಿರುತ್ತಾರೆ. ಅದಕ್ಕೆ ಈ ಆರೈಕೆಗಳು. ದೇಹಕ್ಕೆ ಬೇಕಾಗುವ ಪೌಷ್ಠಿಕಾಂಶಗಳು. ಹಿಂದೆಲ್ಲಾ ಹದಿನಾರು ದಿನಗಳು ಸತತವಾಗಿ ಆರೈಕೆ ಮಾಡುತ್ತಿದ್ದರು. ಈಗ, ಈಗಿನ ಕಾಲದೋವು ತಿನ್ನೋಕೇ ಹೆದರುತ್ತವೆ. ಬನ್ನಿ ಹೊತ್ತಾಯಿತು. ಆರತಿ ಎತ್ತೋಣ. ಹುಡುಗಿ ಎಷ್ಟು ಹೊತ್ತು ಕೂತಿರುತ್ತೆ. ಬೇಸರ ಆಗ್ತಿರುತ್ತೆ. ಅಲ್ವೇನೇ ಕೂಸು?" ಮಧುರ ಮಧುರವಾಗಿ ನಕ್ಕಳು. ಮಂದಾರ ಹಲ್ಲು ಕಿರಿದಳು.

"ಅತ್ತೆ.... ನಂಗೆ ಚಿಗುಳಿ ಕೊಡಲೆ ಇಲ್ಲ." ಮಂದಾರ ಸತ್ಯವತಿಯನ್ನು ಕೇಳಿದಳು. ಅಲ್ಲಿದ್ದ ಹೆಂಗಸರೆಲ್ಲ ಗೊಳ್ಳನೆ ನಕ್ಕರು. ಅವಳ ಮುಖ ಕೆಂಪಾಗಿತ್ತು.

ಪ್ರಭಾವತಿ ಮಂದಾರಳ ಕೈಗೆ ಒಂದು ಚಿಟಿಕೆ ಪುಡಿಯನ್ನು ಹಾಕಿದಳು.

"ನಿನ್ನಂಥ ಚಿಕ್ಕ ಹುಡುಗಿ ಹೆಚ್ಚಿಗೆ ತಿನ್ನಬಾರದು. ಮೈಗಾಗುಲ್ಲ"

"ಏನಾಗುತ್ತೆ?"

"ಮೈಗಾಗುಲ್ಲ ಅಂದ್ರೆ ಆಗುಲ್ಲ. ಅಷ್ಟೇ. ಸುಮ್ನೆ ಇರು" ರಾಧ ರೇಗಿದಳು.

ಮಂದಾರ ಆ ಚಿಟಿಕೆ ಎಳ್ಳಿನ ಪುಡಿಯನ್ನು ಅಲ್ಲೇ ಕೆಳಗೆ ಹಾಕಿಬಿಟ್ಟಳು. ಕೋಪದಿಂದ ಮುಖ ಊದಿಸಿಕೊಂಡೇ ಕುಳಿತಳು. ಹಿರಿಯ ಮುತ್ತೈದೆಯರಿಬ್ಬರು ಆರತಿಯ ಹಾಡನ್ನು ಹೇಳಿಕೊಂಡು ಆರತಿ ಎತ್ತಿ, ಕೆನ್ನೀರನ್ನು ಮುಂಬಾಗಿಲಿನಲ್ಲಿ ಚೆಲ್ಲಿದರು. ಆರತಿ. ತಟ್ಟೆಯಲ್ಲಿದ್ದ ಕಾಸನ್ನು ಸಮನಾಗಿ ಹಂಚಿಕೊಂಡರು. ಪ್ರಭಾವತಿ, ಸತ್ಯವತಿ ಮುಖಮುಖ ನೋಡಿಕೊಂಡರು. ಬೆಳಿಗ್ಗೆ ತಾಯಿ ಹೇಳಿದ್ದ ಘಟನೆ ನೆನಪಾಗಿ, ತುಟಿಯಂಚಿನಲ್ಲಿ ವಕ್ರನಗೆ ಕಾಣಿಸಿತು. ತಮ್ಮ ಸೋದರತ್ತೆಯ ನೆನಪಾಗಿತ್ತು. ಹಾಗೇ ತಂದೆಯ ನೆನಪಾಗಿ, ಗಂಟಲು ಉಬ್ಬಿಬಂತು. ತಾಯಿಯ ಕಡೆ ನೋಡಿದಳು ಪ್ರಭಾವತಿ. ಆಕೆ ಅತ್ಯಂತ ಆಸಕ್ತಿಯಿಂದ ಆರತಿಯ ಕಲಾಪಗಳನ್ನು ನೋಡುತ್ತಿದ್ದಳು. ಅಮ್ಮನ ಸ್ವಭಾವವೂ ವಿಚಿತ್ರವೆನಿಸಿತ್ತು.

ನೆರೆದಿದ್ದ ಹೆಂಗಳೆಯರೆಲ್ಲ ಮಧುರಂಗೆ ಉಡುಗೊರೆಗಳನ್ನಿತ್ತರು.ಕೆಲವರು ಮಂದಾರಳಿಗೂ ಉಡುಗೊರೆಯನ್ನು ಕೊಟ್ಟರು. ಆದರೂ ಅವಳ ಮುಖ ದಪ್ಪಗಾಗಿತ್ತು.

"ಎಲ್ಲೇ ನಂದಿನಿ ಬರಲೇ ಇಲ್ಲ. ಮಧ್ಯಾಹ್ನ ಊಟಕ್ಕೂ ಬಂದಂತೆ ಕಾಣಲಿಲ್ಲ" ಗೌರಮ್ಮ ನೆನಪಿಸಿಕೊಂಡವಳಂತೆ ಕೇಳಿದಳು.

"ಅವರ ತಾಯಿಗೆ ಹುಷಾರಿಲ್ವಂತೆ. ಮಧ್ಯಾಹ್ನವೇ ಹೊರಟುಹೋದರು."

"ಅಯ್ಯೋ ಪಾಪವೇ.... ಏನಾಯ್ತಂತೆ! ಈಗ ಹೇಳ್ತಾ ಇದೀಯಲ್ಲೇ..."

"ನೀನು ಕೇಳಿದ್ದೇ ಈಗ..." ಮಗಳೂ ವೈಯಾರವಾಗಿ ನುಡಿದಾಗ ಗೌರಮ್ಮ ಪೆಚ್ಚಾದಳು. ರಾಧ ಸುಮ್ಮನೆಯೇ ಇದ್ದಳು. ಮಧ್ಯಾಹ್ನ ಊಟಕ್ಕೆ ಮೊದಲೇ ನಂದಿನಿ ಬಂದು ಹೇಳಿ, ಅರ್ಜೆಂಟಾಗಿ ಸ್ವಲ್ಪ ಹಣ ಬೇಕೆಂದು ಕೇಳಿ ತೆಗೆದುಕೊಂಡುಹೋಗಿದ್ದಳು. ಅವಳು ಯಾರಿಗೂ ಹೇಳಿರಲಿಲ್ಲ. ಅದೇ ಸಮಯದಲ್ಲಿಯೇ ಅವಳಿಗೆ, ಗಂಡನೂ ಮನೆಯಲ್ಲಿಲ್ಲವೆನ್ನುವುದು ನೆನಪಿಗೆ ಬಂತು.

"ಮನೆಯಲ್ಲಿ ಸಮಾರಂಭ ಎಲ್ಲರ ಜೊತೆಯಲ್ಲಿ ಇರುವ ಆಸೆಯೇ ಇಲ್ಲ. ಹೊರಗಿನಿಂದ ಬಂದವರ ಜೊತೆ ಎಲ್ಲಿ ಹೋಗಿದಾರೋ... ಎಂದುಕೊಂಡು ಅತ್ತಿತ್ತ ನೋಡಿದಳು. ರಾಜನೂ ಕಾಣಲಿಲ್ಲ. ಇವನೂ ಕಾಣ್ತಿಲ್ಲ. ಹೆಂಗಸರ ನಡುವೆ ತನಗೇನು ಸಂಭ್ರಮ ಅಂತ, ಮಹಡಿ ಮೇಲೆ ಹೋಗಿರಬಹುದು ಎಂದುಕೊಂಡಳು. ಆಹ್ವಾನಿತರಿಗೆಲ್ಲ, ಅರಿಶಿನ ಕುಂಕುಮ, ಎಲೆ ಅಡಿಕೆಯೊಂದಿಗೆ, ಬಾಳೆಹಣ್ಣು, ಉಂಡೆ ಚಕ್ಕುಲಿ, ಚಿಗುಳಿಯನ್ನು ಇಟ್ಟುಕೊಟ್ಟರು. ಪಿಸುಪಿಸು ಮಾತು, ಕಿಸಿಕಿಸಿ ನಗೆಯ ಹೊನಲು ಹರಡಿತ್ತು. ಒಬ್ಬೊಬ್ಬರಾಗಿ ಬಂದವರೆಲ್ಲ "ಬರ್ತೀವಿ ಎಂದು ಹೇಳಿ ಹೊರಟರು.

ಎಲ್ಲರೂ ಹೋಗಿಯಾಗಿತ್ತು. ಮಧುರ ತನ್ನ ಅಲಂಕಾರವನ್ನೆಲ್ಲ ತೆಗೆದು ನೈಟಿಯನ್ನು ಧರಿಸಿ ಹೊರಬಂದಳು.

"ಯಾಕೇ ಸೀರೆ ಬಿಚ್ಚಿಬಿಟ್ಯಾ! ನಿಮ್ಮಪ್ಪ ಮನೆಗೆ ಬಂದ್ಮೇಲೆ ಅವನೂ ನಿನ್ನನ್ನ ನೋಡಿ, ಮಗಳು ಎಷ್ಟು ಬೆಳೆದು ಬಿಟ್ಟಿದ್ದಾಳೆ ಅಂತ ಅಂದ್ಕೋತಿದ್ದ."

"ಹೋಗೀ ಅತ್ತೆ. ಎಷ್ಟು ಹೊತ್ತು ಅಂತ ಸೀರೇನ ಉಟ್ಕೊಂಡಿರುಕ್ಕೆ ಆಗುತ್ತೆ! ಸೀರೆ ಭಾರ, ಮೊಗ್ಗಿನ ಜಡೆ ಭಾರ, ತೆಗೆದ್ರೆ ಸಾಕು ಅಂತ ಅನ್ನಿಸ್ತಿತ್ತು."

"ಏನು ದಿನಾ ದಿನಾ ಮಾಡ್ಕೋತೀಯಾ? ಸಮಾರಂಭ ಅಂತ ಮಾಡ್ಕೊಂಡಿದ್ದು. ಅಷ್ಟಷ್ಟೆಲ್ಲಾ ತಡೆಯೋಕೆ ಆಗುಲ್ಲ ಅಂತಂದ್ರೆ."

"ಹೇಳು ಸರಿಯಾಗಿ ಹೇಳು. ಮದುವೆ ಆದ್ಮೇಲೆ ಜವಾಬ್ದಾರಿಯ ಭಾರ ಎಷ್ಟೆಷ್ಟಿರುತ್ತೆ ಅಂತ ಇವಕ್ಕೇನು ಗೊತ್ತು? ಇವಳ ವಯಸ್ಸಿಗೆ ನನ್ನ ಮದುವೆಯಾಗಿ ನಿಮ್ಮಪ್ಪನ ಮನೆಗೆ ಬಂದಾಗಿತ್ತು."

"ಸುಮ್ನಿರಿ ಅಜ್ಜಿ. ಸದಾ ನಿಮ್ಮ ಮದುವೆ ಕತೆ ಹೇಳ್ಬೇಡಿ. ಕೇಳೀ ಕೇಳಿ ಸಾಕಾಗಿದೆ."

"ಸಾಕು ಸುಮ್ನಿರೇ ಬಿನ್ನಾಣಗಿತ್ತಿ. ನಿನ್ನ ಮದುವೆ ಆದ್ಮೇಲೆ ನೀನೂ ನಿನ್ನ ಮದುವೆ ಕತೇನ ಸದಾ ಹೇಳ್ತೋಳೇ..... ನಾವೆಲ್ಲಾ ಕೇಳ್ಬೇಕೋ ಬೇಡ್ವೋ?"

"ನಾನು ಮದುವೆ ಆಗುಲ್ಲ. ಡಾಕ್ಟರು ಆಗ್ತೀನಿ ಅಂತ ಎಷ್ಟು ಸಲ ಹೇಳ್ಬೇಕು ನಿಮಗೆ"

"ಡಾಕ್ಟರೂ ಆಗು ಮದುವೇನೂ ಆಗು. ಡಾಕ್ಟರಾದೋರು ಮದುವೆ ಆಗ್ಬಾರ್ದು ಅಂತ ಏನಿಲ್ವಲ್ಲಾ..."

"ಸುಮ್ನಿರಿ ಅಜ್ಜಿ. ನನ್ನ ಮೂಡ್ ಕೆಡಿಸ್ಬೇಡಿ. ನಂಗೆ ತುಂಬಾ ಸುಸ್ತಾಗಿದೆ ನಾನು ಮಲಗ್ತೀನಿ."

"ನಿಂಗೆ ದೃಷ್ಟಿ ಆಗಿದೆ. ದೃಷ್ಟಿ ತೆಗೀತೀನಿ ಬಾ.... ಆಲಸ್ಯ ಎಲ್ಲಾ ಪರಿಹಾರ ಆಗುತ್ತೆ."

"ಅದೆಲ್ಲಾ ಏನೂ ಬೇಡ. ನಂಗೆ ಇಷ್ಟವಿಲ್ಲ."

"ಹಾಗೆಲ್ಲ ಹೇಳ್ಬೇಡ ಮಧು... ಹತ್ತಾರು ಜನರ ಕಣ್ಣು ನಿನ್ನ ಮೇಲೆ ಬಿದ್ದಿದೆ. ಯಾರ ದೃಷ್ಟಿ ಹೇಗೋ ಆ ಸೀರೇಲಂತೂ ನಿನ್ನ ಸಾಕ್ಷಾತ್ ದೇವತೆ ಥರ ಕಾಣ್ತಿದ್ದೆ. ದೃಷ್ಟಿ ತೆಗೆಸ್ಕೋ. ನಿಂಗೇ ಒಳ್ಳೇದು. ರಾತ್ರಿ ಚೆನ್ನಾಗಿ ನಿದ್ದೆ ಬರುತ್ತೆ ಇಲ್ದಿದ್ರೆ ಚಡಪಡಿಕೆ ಇರುತ್ತೆ. ಸುಸ್ತು ಹೆಚ್ಚಾಗುತ್ತೆ."

"ನೀವೂ ಇದನ್ನೆಲ್ಲಾ ನಂಬ್ತೀರಾ ಅತ್ತೆ."

"ಕೆಲವೊಮ್ಮೆ ನಂಬಬೇಕಾಗುತ್ತೆ. ಇದ್ರಿಂದ ನಿಂಗೇನು ನಷ್ಟ! ಹತ್ತು ಪೊರಕೆ ಕಡ್ಡಿ ಉರಿದು ಬೂದಿಯಾಗಬಹುದು. ಅಷ್ಟೇ." ಪ್ರಭಾವತಿ ನಗುತ್ತಾ ನುಡಿದಳು.

ತಡವಾಗಿ ಮನೆಗೆ ಬಂದ ಗಂಡನ ಮುಖವನ್ನು ಅಸಹನೆಯಿಂದ ವೀಕ್ಷಿಸಿದಳು ರಾಧಾ. ಯಾವುದೋ ಚಿಂತೆಯಲ್ಲಿರುವಂತೆ ಅನ್ನಿಸಿತ್ತು ಆದರೂ ಕೇಳಲಿಲ್ಲ.

"ಇಷ್ಟೊತ್ತು ಎಲ್ಹೋಗಿದ್ಯೋ ಕೇಶವಾ.... ಮನೇಲಿ ಏನಾದ್ರೂ ಸಮಾರಂಭ ಅಂತಂದ್ರೆ ನಿಂಗೆ ಹೊರ್ಗೆ ತಿರುಗಾಟ." ತಾಯಿ ಆಕ್ಷೇಪಿಸಿದಳು. ಅವನು ತಾಯಿಯ ಮುಖವನ್ನೇ ಗಾಢವಾಗಿ ಒಮ್ಮೆ ವೀಕ್ಷಿಸಿ, ಗಂಭೀರವಾಗಿ ನುಡಿದ.

"ಹೆಂಗಸರ ಕಾರ್ಯಕ್ರಮ.... ನಂಗೇನು ಕೆಲ್ಸ.? ರಾಜಾರಾಯರ ಮನೆಗೆ ಹೋಗಿದ್ದೆ" ಮಾತನ್ನು ಮುಂದುವರೆಸುವ ಸಹನೆಯಿಲ್ಲದವನಂತೆ, ಒಳಮನೆಗೆ ಬಂದ. ಚಿಕ್ಕವರೆಲ್ಲಾ ಊಟ ಮುಗಿಸಿ ಮಲಗುವ ಸಿದ್ಧತೆಯಲ್ಲಿದ್ದರು. ರಾಜ ಎಲ್ಲರಿಗೂ ಕಾಣಲಿಲ್ಲ. "ರಾಜಂದು ಊಟ ಆಯ್ತಾ?" ವಿಚಾರಿಸಿದ. 'ಹುಂ' ಎಂದಷ್ಟೇ ನುಡಿದ ರಾಧಾ ತನ್ನ ಮೌನವನ್ನು ಮುಂದುವರೆಸಿದಳು. ಸತ್ಯವತಿ, ಉಳಿದವರಿಗೆಲ್ಲ ಎಲೆ ಹಾಕಿದಳು. ಗೌರಮ್ಮ ತನ್ನ ಫಲಾಹಾರಕ್ಕಾಗಿ ಅಡಿಗೆ ಮನೆಯನ್ನು ಸೇರಿದಳು.

* * * *

ಊಟ ಮುಗಿಯುವ ಹಂತದಲ್ಲಿದ್ದಾಗ, ಕೇಶವ ಮೌನವನ್ನು ಮುರಿದ. "ಇಲ್ಲೇ ಹತ್ತಿರದಲ್ಲಿ ಒಂದು ಆಶ್ರಮ ಹೊಸದಾಗಿ ಆಗಿದೆಯಂತೆ. ನಾಳೆ ಎಲ್ಲರೂ ಹೋಗಿಬರ್ರೋಣ. ಪ್ಲ್ಯಾನು ಗೊತ್ತು ಮಾಡಿದೀನಿ."

"ಆಶ್ರಮಾನ? ಅಲ್ಲೇನಿರುತ್ತೆ. ಅಲ್ದೇ ನಾನು ನಾಳೇನೇ ಊರಿಗೆ ಹೊರಡ್ಬೇಕು" ಸತ್ಯವತಿ ಮೂತಿ ಚೂಪು ಮಾಡುತ್ತಾ ನುಡಿದಳು.

"ಸರಿ ನಿನ್ನಿಷ್ಟ" ಎಂದು ಬಿಟ್ಟ ಕೇಶವ. ಅವಳ ಮುಖ ಚಿಕ್ಕದಾಯಿತು. ಪೆಚ್ಚಾಗಿ ಅಕ್ಕನ ಕಡೆ ನೋಡಿದಳು. ಪ್ರಭಾವತಿ ತಂಗಿಯ ಕಡೆ ಗಮನ ಕೊಡಲಿಲ್ಲ. ತಮ್ಮನ ಕಡೆ ತಿರುಗಿದಳು.

"ಅಮ್ಮಾ... ಮಕ್ಕಳು ಎಲ್ರೂ ಹೋಗೋದಾ?"

"ಹುಂ. ಅಮ್ಮನಿಗೋಸ್ಕರಾನೇ ಹೋಗಿಬರೋದು. ಮಕ್ಕಳೂ ಬರಲಿ. ಇಲ್ದಿದ್ರೆ, ಮಕ್ಕಳು ಆಶ್ರಮಾನ ನೋಡೋದು ಯಾವಾಗ? ಬೆಳಿಗ್ಗೆ ಊಟದ ನಂತರ ಹೊರಡೋಣ. ಕತ್ತಲಾಗೋ ಹೊತ್ತಿಗೆ ವಾಪಸ್ಸು ಬಂದುಬಿಡಬಹುದು." ಹೆಂಡತಿಯ ಕಡೆ ನೋಡಿದ. ಅವಳು ಸುಮ್ಮನೇ ಮಿಕಿಮಿಕಿ ಇವನನ್ನೇ ನೋಡಿದಳು. ಇವನು ಕಣ್ಣು ಸಂಜ್ಞೆ ಮಾಡಿದ. ರಾಧಾ ಅರ್ಥವಾದವಳಂತೆ ಸುಮ್ಮನಿದ್ದಳು. ರಾಧಾಳ ಊಟ ಮುಗಿಯುವವರೆಗೂ ಅಲ್ಲಿಯೇ ತಿರುಗಾಡುತ್ತಿದ್ದ ಕೇಶವ. ಅವಳು ತಟ್ಟೆ ತೊಳೆಯಲೆಂದು ಎದ್ದು ಹಿತ್ತಲಿಗೆ ಹೋದಾಗ ಅವಳ ಹಿಂದೆಯೇ ಬಂದ. "ನನ್ನ ಮೇಲೆ ಕೋಪಾನಾ?" ಎನ್ನುತ್ತಾ ಬಾಗಿ ನಿಂತು ತಟ್ಟೆ ತೊಳೆಯುತ್ತಿದ್ದರಳ ಬೆನ್ನ ಮೇಲೆ ಕೈಯಾಡಿಸಿದ. ಅವಳು ಬೆಚ್ಚಿದಳು. ತಟ್ಟೆ ಕೈ ಜಾರಿ ಕೆಳಗೆ ಬಿದ್ದು ಸದ್ದಾಯಿತು. ಕೇಶವ ನಕ್ಕುಬಿಟ್ಟ.

"ಎಷ್ಟು ಹೆದರಿಸ್ತೀರಪ್ಪಾ. ನೀವು ಈಗೆಂಥಾ ಸರಸ? ಮನೆ ತುಂಬಾ ಜನರಿದಾರೆ."

"ಇರಲಿ ಬಿಡು. ನಾನು ನಿನಗೊಂದು ವಿಷಯವನ್ನು ಹೇಳ್ಬೇಕು ಅಂತ ಬಂದಾಗ್ನಿಂದ ಕಾಯ್ತಿದೀನಿ. ನೀನು ಕೈಗೇ ಸಿಗ್ತಿಲ್ಲ."

"ಹುಂ. ತುಂಬಾ ಬಿಡುವಾಗಿದೀನಿ. ಕೂತು ಮಾತನಾಡೋಣ. ಎಲ್ಲಿಗೆ ಹೋಗಿದ್ರಿ ನೀವು.... ಮನೆ ಸಮಾರಂಭ. ನೀವೇ ನಾಪತ್ತೇ."

"ಅದನ್ನೇ ಹೇಳ್ಬೇಕು ರಾಧಾ. ಬಾ ಮಹಡಿ ಮೇಲೆ ಹೋಗೋಣ"

"ನಿಮ್ಮ ಅಕ್ಕಂದಿರು ನಗ್ತಾರೆ ಅಷ್ಟೆ."

"ನಗಲಿ ಬಿಡು. ಮನೆ ಅಂದ್ಮೇಲೆ ನೂರು ಮಾತಿರುತ್ತೆ. ನಾವು ಗಂಡ ಹೆಂಡತಿ ಮಾತನ್ನಾಡಿದ್ರೆ ಅವರಿಗೇನು ಕಷ್ಟ? ಸತ್ಯ ಗೋಮೆ ಹಚ್ಚಿ ಒರೆಸ್ತಾಳೆ ನೀನು ಬಾ" ಅವಳ ಕೈಹಿಡಿದ. ಅವಳು ಕೈಯನ್ನು ಬಿಡಿಸಿಕೊಂಡು ಮುಂದೆ ನಡೆದಳು. ಅವನು ಅವಳ ಹಿಂದೆ ಹಿಂದೆ ನಡೆದ. ರೂಮಿನ ಬಾಗಿಲನ್ನು ಓರೆ ಮಾಡಿದ.

"ರಾಧಾ, ಸ್ವಲ್ಪ ಕೂತ್ಕೋ. ನಾನು ನಿನ್ಹತ್ರ ಸ್ವಲ್ಪ ಮಾತಾಡ್ಬೇಕು."

"ಏನಾಯ್ತು ಇಷ್ಟು ಹೊತ್ನಲ್ಲಿ! ನಂಗೆ ನಿದ್ದೆ ಬರ್ತಿದೆ... ಬೆಳಿಗ್ಗೆ ಮಾತಾಡೋಣ."

"ಇಲ್ಲ. ನಾನು ನಿಂಗೆ ಈಗ್ಲೇ ಹೇಳ್ಬೇಕು."

"ಸರಿ.... ಅದೇನು ಅಂತ ಹೇಳ್ಬಿಡಿ."

"ನನ್ನಣ್ಣ ಸಿಕ್ಕಿದಾನೆ. ಎಲ್ಲಿದ್ದಾನೇ ಅಂತ ತಿಳಿದಿದೆ..." ರಾಧಾಳ ಮಂಪರು ಹರಿಯಿತು. ಎಚ್ಚರಗೊಂಡಳು. ಬಾಯಿ ತೆರೆದು ಅವನನ್ನೇ ಪಿಳಿಪಿಳಿ ನೋಡಿದಳು.

"ಹುಂ. ನಂಗೂ ಇವತ್ತೇ ತಿಳಿದದ್ದು. ಅಮ್ಮಂಗೆ ಈ ವಿಷಯಾನ ತಿಳಿಸೋದು ಹೇಗೆ ಅಂತ."

"ತಿಳಿಸಿದ್ರಾಯ್ತು. ಅಪ್ರಿಗೂ ಖುಷಿಯಾಗುತ್ತೆ. ಎಲ್ಲಿದಾರಂತೆ.?"

"ಒಂದು ರಾದ್ಧಾಂತವಾಗೋದಂತು ನಿಜ. ಎಲ್ಲಿದಾನೆ ಅಂತ ನನಗೂ ಸರಿಯಾಗಿ ತಿಳಿಯದು. ನಾಳೆ ಆಶ್ರಮದಲ್ಲಿ ತಿಳಿಯಬಹುದು, ಅಲ್ಲಿರಬಹುದು."

ಇಲ್ಲೇ ಹತ್ತಿರದ ಆಶ್ರಮದಲ್ಲಿದ್ದರೂ ನಮಗ್ಯಾಕೆ ತಿಳಿಸಲಿಲ್ಲ?

"ಏನೋ ನಂಗೊತ್ತಿಲ್ಲ. ಅಮ್ಮ ಏನಂತಾಳೋ ಅಂತ ನಂಗೆ ಅದೇ ದಿಗಿಲಾಗಿದೆ." ಅಷ್ಟರಲ್ಲಿ ಸತ್ಯವತಿ ಅಲ್ಲಿಗೆ ಬಂದಿದುದರಿಂದ ಮಾತು ಅಲ್ಲಿಗೇ ನಿಂತಿತು. ಕೇಶವ ರೂಮಿನಿಂದ ಹೊರಬಂದ. ಸತ್ಯವತಿಯ ಬಳಿ ಗಂಡ ಹೇಳಿದುದನ್ನು ಹೇಳಬೇಕೆಂಬ ತವಕವಾದರೂ, ರಾಧಾ ತಡೆದುಕೊಂಡಳು. ಗಂಡ ತನಗೆ ತಿಳಿಸಿದ್ದೇ ಈಗ. ಯಾಕೋ ಏನೋ ತನಗೆ ಮಾತ್ರ ತಿಳಿಸಿದ್ದಾನೆ. ತಾನು ತಿಳಿಸುವುದಕ್ಕಿಂತ, ಅವರವರೇ ಮಾತನಾಡಿಕೊಳ್ಳುವುದು ಒಳ್ಳೆಯದು ಎಂದುಕೊಂಡಳು.

"ಅತ್ಗೇ.... ಏನಾದ್ರೂ ಬೇಕಾಗಿತ್ತಾ?" ಕೇಳಿದಳು.

"ನಾಳೆ ಎಲ್ಲೋ ಆಶ್ರಮಕ್ಕೆ ಹೋಗಿಬರೋದು ಅಂತ ಅಂದ್ನಲ್ಲ. ಅದರ ಬಗ್ಗೆ ಮಾತಾಡೋಣ ಅಂತ ಬಂದೆ. ನನ್ನನ್ನ ಕಂಡ ಕೂಡ್ಲೇ ಹೊರಟುಹೋದ್ನಲ್ಲ. ಯಾಕೋ ಒಂಥರಾ ಇದಾನೆ ಅಂತ ಅನ್ನಿಸ್ತು. "ರಾಧಾ ಸುಮ್ಮನೆ ಪೆಚ್ಚನೆಯ ನಗೆಯನ್ನು ನಕ್ಕಳು. ಸತ್ಯವತಿಯೂ ಹೊರಬಂದಳು. ರಾಧಾ ನಿಟ್ಟುಸಿರುಬಿಟ್ಟು ಮಲಗುವ ಸಿದ್ಧತೆಯನ್ನು ಮಾಡಿದಳು. ಅಡ್ಡಾದಿಡ್ಡಿ ಮಲಗಿದ್ದ ಮಂದಾರಳನ್ನು ಸರಿಯಾಗಿ ಮಲಗಿಸಿ, ಹೊದಿಸಿ, ತಾನೂ ಅವಳ ಪಕ್ಕದಲ್ಲಿ ಉರುಳಿಕೊಂಡಳು. ನಿದ್ದೆ ಬರುವ ತನಕವೂ ಗಂಡ ಹೇಳಿದುದನ್ನೇ ಚಿಂತಿಸಿದಳು. ಇದೇನು ಹೀಗೆ? ದಿಢೀರನೇ ತನ್ನ ಭಾವನ ಪತ್ತೆಯಾಗಿದೆ. ಇದುವರೆಗೂ ಎಲ್ಲಿದ್ದರು? ಹೇಗಿದ್ದರು? ಈಗ ಯಾಕೆ ವಿಷಯ ತಿಳಿಯಿತು? ಅತ್ತೆಯವರಿಗೆ, ಈ ವಿಷಯ ತಿಳಿದರೆ, ಯಾವ ಪ್ರತಿಕ್ರಿಯೆ? ಅವರಿಗೆ ಏನನ್ನಿಸಬಹುದು? ತನಗಂತೂ ಆತನ ಬಗ್ಗೆ ಹೆಚ್ಚಿಗೆ ಏನೂ ತಿಳಿದಿಲ್ಲ. ಮದುವೆಯಾದ ಎಷ್ಟೋ ವರ್ಷಗಳವರೆಗೂ ಸಹ, ತನ್ನ ಗಂಡನೊಬ್ಬನೇ ಈ ಮನೆಯ ಮಗು ಅಂತ ತಿಳಿದಿದ್ದೆ. ಆಮೇಲೂ ಸಹ ಗಂಡ ಆತನ ಬಗ್ಗೆ ಸರಿಯಾಗಿ ತಿಳಿಸಿರಲಿಲ್ಲ. ತಾನೂ ಕೇಳಿರಲಿಲ್ಲ. ತನಗ್ಯಾಕೆ ಆತನ ವಿಷಯ ಎನ್ನುವ ಉದಾಸೀನಕ್ಕಿಂತಲೂ, ಮನೆಯವರ್ಯಾರೂ ಆತನ ಬಗ್ಗೆ ಮಾತನಾಡದೇ ಇರುವಾಗ ತನಗೂ ಬೇಡ ಎಂದು ನಿರ್ಧರಿಸಿದ್ದಾಗಿತ್ತು.

ಎಲ್ಲರಿಗೂ ನಿದ್ದ ಬಂದರೂ ಕೇಶವನಿಗೆ ನಿದ್ದೆ ಹತ್ತಿರ ಸುಳಿಯಲಿಲ್ಲ. ಈ ವಿಷಯ ತಿಳಿದಾಗಿನಿಂದ ಅವನ ತಲೆಯಲ್ಲಿ ಕೊರೆತ ಪ್ರಾರಂಭವಾಗಿತ್ತು. ಈ ವಿಷಯವನ್ನು ಅಮ್ಮನಿಗೆ ತಿಳಿಸುವುದು ಹೇಗೆ ತಿಳಿದರೆ ಅವಳ ಪ್ರತಿಕ್ರಿಯೆ ಏನು? ಮುಂದಿನ ವಿಷಯ ಏನು? ಈಗ ಅಣ್ಣನ ಪತ್ತೆಯಾಗಿದೆ ಎಂದು ತಿಳಿದಾಗ ಆದ ಸಂತಸಕ್ಕಿಂತ, ಮುಂದೇನು ಎಂಬ ಸಮಸ್ಯೆಯೇ ಅಧಿಕವಾಗಿ ಕಾಡತೊಡಗಿತ್ತು. ಎಂದೋ ಮನೆ ಬಿಟ್ಟು ಹೋದ ಅಣ್ಣ ಮತ್ತೆ ಪ್ರತ್ಯಕ್ಷವಾದುದು ಯಾಕೆ? ಹಾಗೇ ಅಜ್ಞಾತವಾಗಿದ್ದಿದ್ದರೇ ಚೆನ್ನಾಗಿತ್ತೇನೋ ಅಂತ ಅನ್ನಿಸತೊಡಗಿತ್ತು. ಅವನು ಅನೇಕ ಬಾರಿ ಮಗ್ಗುಲು ಬದಲಾಯಿಸಿದ. ಒಂದೆರಡು ಬಾರಿ ಎದ್ದು ನೀರು ಕುಡಿದು, ಬಚ್ಚಲು ಮನೆಗೆ ಹೋಗಿ ಬಂದ. ಗಂಡನಿಗೆ ನಿದ್ದೆ ಬಂದಿಲ್ಲವೆಂದು ರಾಧಳಿಗೆ ತಿಳಿಯಿತು. ಏನಂಥ ಭಾರಿ ಯೋಚನೆ? ಭಾವನವರು ಪತ್ತೆಯಾಗಿದಾರೆ ಅಂತ ಗಂಡನಿಗೆ ಸಂತಸವಾಗಿಲ್ಲವೇ? ನೆಮ್ಮದಿ ಕೆಟ್ಟಿದೆಯೆ? ಅವರೂ ಅಷ್ಟೆ. ಇಷ್ಟು ವರ್ಷಗಳ ಬಳಿಕ ತಮ್ಮ ಇರುವನ್ನು ಯಾಕೆ ತಿಳಿಸಬೇಕಾಗಿತ್ತು? ಎಲ್ಲಿದಾರೋ ಅಲ್ಲಿಯೇ ಆರಾಮವಾಗಿರಲಿ. ಈಗ ಅವರಿಗೆ ಅಮ್ಮನ ನೆನಪು ಕಾಡುತ್ತಿದೆಯೆ? ಅಥವಾ

ಈಗ ಏನಾದರೂ ಸಮಸ್ಯೆಗೆ ಸಿಕ್ಕಿಬಿದ್ದು ಇವರ ನೆರವು ಬೇಕಾಗಿದೆಯೇ? ದಿಢೀರನೇ ನಮ್ಮ ನೆಮ್ಮದಿಯನ್ನು ಕೆಡಿಸಿದರಲ್ಲ. ಅವಳೂ ನಿದ್ದೆ ಬಾರದೇ ಹೊರಳಾಡಿದಳು.

* * * *

ಬೆಳಗಾಯಿತು. ಎಲ್ಲರ ಸ್ನಾನದ ನಂತರ ತಿಂಡಿಕಾಫಿಯೂ ಆಯಿತು. ಕೇಶವ ಗಂಭೀರವದನನಾಗಿದ್ದ. ರಾಧಾ ಅವನನ್ನೇ ಗಮನಿಸುತ್ತಿದ್ದಳು. ಗೌರಮ್ಮ ಮಡಿಯಲ್ಲೇ ಬೇಗ ಬೇಗ ಅಡಿಗೆ ಕೆಲಸಗಳನ್ನು ಮುಗಿಸಿದಳು. ಅವಳಲ್ಲಿ ಆಶ್ರಮಕ್ಕೆ ಹೋಗುವ ಆತುರ ಕಾತುರ ಕಂಡುಬರುತ್ತಿತ್ತು.

"ಈ ನಡುವೆ ಹೊರಗೆ ಹೋಗಿಯೇ ಇಲ್ಲ.ಇದ್ಯಾವ ಹೊಸ ಆಶ್ರಮವೋ, ಅದರ ಬಗ್ಗೆ ಕೇಳಿಯೇ ಇರಲಿಲ್ಲ." ಮಗಳೊಡನೆ ಹೇಳಿದ್ದಳು.

"ಎಲ್ಲಾ ಆಶ್ರಮಗಳಂತೆ ಇದೂ ಒಂದು ಆಶ್ರಮ... ಈಚೆಗೆ ಆಶ್ರಮಗಳು ಹೆಚ್ಚು ಹೆಚ್ಚು ಹುಟ್ಟಿಕೊಳ್ಳುತ್ತಿವೆ. ಅದಕ್ಕೆ ನಾನಾ ಕಾರಣಗಳಿವೆ. ರಾಜಕೀಯ ಪರಿಸರದ ಒತ್ತಡ, ಹೆಚ್ಚುತ್ತಿರುವ ಗಲಾಟೆ ಗದ್ದಲ ಇವುಗಳಿಂದ ದೂರವಾಗಿರಲು ಕಂಡುಕೊಂಡಿರುವ ತಾಣಗಳು ಈ ಆಶ್ರಮಗಳು..." ಪ್ರಭಾವತಿ ನಗುತ್ತಾ ನುಡಿದಳು.

"ಆಶ್ರಮ ಎಂದರೆ ಸ್ವಾಮೀಜಿ... ಅವರ ಉಪನ್ಯಾಸಗಳು, ಪ್ರವಚನ ಎಲ್ಲಾ ಇರುತ್ತವೆ. ಇಲ್ಲಿಯ ಸ್ವಾಮೀಜಿ ಯಾರೋ... ಅವರ ಬಗ್ಗೆ ಕೇಳಿದಂತೆ ಅನ್ನಿಸುವುದಿಲ್ಲ."

"ಎಲ್ಲರಂತೆ ಅವರೂ ಮನುಷ್ಯರೇ.... ನಮ್ಮಂತಹ ಸಂಸಾರವನ್ನು ದೂರ ಇಟ್ಟಿರುತ್ತಾರೆ. ಆದರೆ ಅವರದ್ದೇ ಒಂದು ಸಂಸಾರವಿರುತ್ತೆ. ಅದರ ಲಕ್ಷಣಗಳೇ ಬೇರೆ ಅಷ್ಟೇ."

"ಅಕ್ಕಾ. ಹೀಗೇ ಹರಟೆ ಹೊಡೀತಾ ಇರ್ತೀರೋ... ಊಟ ಮುಗಿಸಿ ಬೇಗ ಸಿದ್ಧರಾಗಿ, ಬೇಗ ಹೊರಟರೆ, ಬೇಗ ವಾಪಸ್ಸು ಬರಬಹುದು. ಅಮ್ಮಾ ಅಡಿಗೆ ಆಯ್ತಾ?" ಕೇಶವ ಮಾತಿನ ಮಧ್ಯೆ ಬಾಯಿ ಹಾಕಿ, ಅವರುಗಳನ್ನು ಎಬ್ಬಿಸಿದ.

"ಹೂಂ.... ಆಯ್ತು. ತಟ್ಟೆ ಹಾಕಿದ್ರೆ ಬಡಿಸ್ತೀನಿ."

"ನಮ್ಮದ್ರೆಲ್ಲಾ ತಿಂಡಿ ಆಗಿದೆ. ಮೊದಲು ನೀನು ಊಟ ಮಾಡಿಬಿಡು. ನಾವುಗಳು ಇವರೆಲ್ಲರಿಗೂ ಬಡಿಸಿ ಊಟ ಮಾಡ್ತೀವಿ." ಪ್ರಭಾವತಿ

ನುಡಿದಳು. ಎಲ್ಲರ ಊಟದ ಕಾರ್ಯಕ್ರಮ ಮುಗಿಯುತ್ತಿದ್ದಂತೇ ಮನೆಯ ಮುಂದೆ ವ್ಯಾನು ಬಂದು ನಿಂತಿತು.

"ಡ್ರೈವರ್ರು ಪೆಟ್ರೋಲ್ ಹಾಕಿಸ್ಕೊಂಡು ಬರ್ತಾನೆ. ಅಷ್ಟರಲ್ಲಿ ನೀವೆಲ್ಲಾ ಸಿದ್ಧರಾಗಬೇಕು" ಕೇಶವ ಅವಸರಿಸಿದ. ಡ್ರೈವರ್ರು ಮತ್ತೆ ಬರುವಷ್ಟರಲ್ಲಿ ಎಲ್ಲರೂ ಸಿದ್ಧರಾಗಿದ್ದರು. ಕೇಶವ ಯಾವುದೋ ಆಲೋಚನೆಯಲ್ಲಿರುವವನಂತೆ ಗಂಭೀರನಾಗಿದ್ದ. ಅವನ ಮನಃಸ್ಥಿತಿ ರಾಧಳಿಗೆ ಅರ್ಥವಾಗಿತ್ತು. ಅವಳು ಆಗಾಗ್ಗೆ ಅವನ ಕಡೆ ನೋಡುತ್ತಿದ್ದಳು. ಪ್ರಭಾವತಿ, ಸತ್ಯವತಿಯರಿಗೆ ಆಶ್ರಮಕ್ಕೆ ಹೋಗುವುದರಲ್ಲಿ ಯಾವ ಸಂಭ್ರಮವೂ ಇರಲಿಲ್ಲ. ಈ ಕಾರ್ಯಕ್ರಮವಿಲ್ಲದೇ ಇದ್ದಿದ್ದರೆ, ತಮ್ಮ ತಮ್ಮ ಊರಿಗೆ ಹೊರಟುಬಿಡಬಹುದಾಗಿತ್ತೆನಿಸಿತು. ಉಳಿದವರು ನಾಲ್ಕು ಜನ ಹುಡುಗಿಯರು. ಆಶ್ರಮದಲ್ಲಿ ನೋಡಲು ಏನಿರುತ್ತೆ. ಯಾರೋ ಸ್ವಾಮೀಜಿಯನ್ನು ಕಂಡು, ಅವರ ಆಶೀರ್ವಾದ ಪಡೆಯುವುದೊಂದೇ ಇದರ ಬದಲು ಯಾವುದಾದರೂ ಹೊಸಾ ಪಿಕ್ಚರ್‌ಗೆ ಹೋಗಿದ್ದರೆ ಚೆನ್ನಾಗಿತ್ತು ಎಂದೆನಿಸಿತ್ತು. ಹಿರಿಯರ ಬಲವಂತಕ್ಕೆ ಹೊರಟವರಂತೆ ದಪ್ಪನೆಯ ಮುಖವನ್ನು ಮಾಡಿಕೊಂಡು ವ್ಯಾನು ಹತ್ತಿದರು. ಎಲ್ಲರೂ ಹಿಂದುಗಡೆಯ ಸೀಟುಗಳಲ್ಲಿ ಕುಳಿತರು.

"ರಾಜಾ ಎಲ್ಲಿ! ರಾಜಾ.... ರಾಜಾ" ಕೇಶವ ಕೆಳಗಿನಿಂದಲೇ ಕೂಗು ಹಾಕಿದ.

"ಅವನ್ಯಾಕೆ? ಮನೇಲಿ ಕಾವಲಿರ್ತಾನೆ ಬಿಡು." ಗೌರಮ್ಮನೆಂದಳು.

"ಇಲ್ಲಮ್ಮ ಅವನೂ ಬರಲಿ. ಎಲ್ಲರೂ ಹೊರಟಿರುವಾಗ ಅವನನ್ನು ಒಬ್ಬನನ್ನೇ ಬಿಟ್ಟು ಹೋಗುವುದು ಚೆನ್ನ ಅಲ್ಲ. ರಾಜಾ ಸಂಕೋಚದಿಂದ ಕೆಳಗಿಳಿದು ಬಂದ. "ಎಲ್ಲಾ ಹತ್ತಿ..." ಕೇಶವ ಅವಸರಿಸಿದ, ಮನೆಯ ಮುಂಬಾಗಿಲಿಗೆ ಬೀಗ ಹಾಕಿ ತಾನೂ ಹತ್ತಿದ. "ಹೂಂ. ಹೊರಡಪ್ಪಾ..." ಡ್ರೈವರನಿಗೆ ಹೇಳಿ, "ಜೈಗಣೇಶಾ" ಎಂದ. ಎಲ್ಲರೂ ದನಿಗೂಡಿಸಿದರು. ಹಿಂದಿನ ಸೀಟಿನಲ್ಲಿ ಕುಳಿತಿದ್ದ ಹುಡುಗಿಯರು ಕಿಸಕಿಸ ನಕ್ಕರು.

"ಯಾಕ್ರೇ ನಗೋದು! ಏನಾದ್ರೂ ಭಜನೆ ಹೇಳಿ..... ದೂರ ಸುಲಭವಾಗಿ ಸವೆಯುತ್ತೆ" ಗೌರಮ್ಮ ತಾನೇ ಭಜನೆಯ ಹಾಡೊಂದನ್ನು ಪ್ರಾರಂಭಿಸಿದಳು. ಆದರೆ ಯಾರೂ ಆಕೆಯ ಮಾತಿಗೆ ಕಿವಿಗೊಡಲಿಲ್ಲ. ಸತ್ಯ, ಪ್ರಭಾ, ತಮ್ಮ ಪಾಡಿಗೆ ತಾವು ಮಾತನ್ನಾಡುತ್ತಿದ್ದರು. ರಾಧಾ ಅವರ

ಮಾತುಗಳನ್ನಾಲಿಸುತ್ತಿದ್ದಳು. ಕೇಶವ ಡ್ರೈವರನ ಕಡೆ ಗಮನಹರಿಸಿದ್ದ. ಹಿಂದೆ ಇದ್ದ ಹುಡುಗಿಯರು ಅಂತ್ಯಾಕ್ಷರಿಯನ್ನು ಪ್ರಾರಂಭಿಸಿದ್ದರು. ರಾಜನ ಗಮನ ಹುಡುಗಿಯರ ಆಟದ ಮೇಲಿತ್ತು. ಮಧುರ ಹೇಳುತ್ತಿದ್ದ ಹಾಡುಗಳು ಶಾಸ್ತ್ರೀಯವಾಗಿ ಚೆನ್ನಾಗಿತ್ತು. ಮಯೂರ ಹೇಳುತ್ತಿದ್ದ ಸಿನಿಮಾ ಹಾಡುಗಳಲ್ಲಿ ಲವಲವಿಕೆ ಎದ್ದು ಕಾಣುತ್ತಿತ್ತು. ಚುನ್ನಿಗೆ ಮಂದಾರ ಸಹಾಯಕಳಾಗಿದ್ದಳು.

"ರಾಜಾ.... ನೀವೂ ಬನ್ನಿ. ಅಂತ್ಯಾಕ್ಷರಿಗೆ ಸೇರ್ಕೊಳ್ಳಿ" ಮಂದಾರ ಕರೆದಳು.

"ಇಲ್ಲಪ್ಪಾ.... ನನಗೆ ಯಾವ ಹೊಸಾ ಹಾಡೂ ಬರುಲ್ಲ. ನೀವುಗಳು ಹೇಳಿ ನಾನು ಕೇಳಿಸ್ಕೋತ್ತೀನಿ" ಮಯೂರ ಮೂತಿ ಸೊಟ್ಟ ಮಾಡಿದ್ದನ್ನು ಅವನು ಗಮನಿಸಿದ. ಒಂದುಗಳಿಗೆ ಪೆಚ್ಚಾಯಿತು. ಕ್ಷಣದಲ್ಲಿ ಸರಿ ಮಾಡಿಕೊಂಡ. ಚುನ್ನಿ ಹಾಡುವಾಗ ತಡವರಿಸಿದಾಗ, ಅವನು ಅವಳಿಗೆ ಸಹಾಯಕನಾದ. ಚುನ್ನಿ ಸಂತಸದಿಂದ "ಥ್ಯಾಂಕ್ಸ್" ಎಂದಳು.

"ನನಗೆ ಬರುಲ್ಲ ಅಂತಂದ್ರೀ..." ಮಂದಾರ ಕೆಣಕಿದಳು.

"ಬರೀ ಜಂಭ" ಮಯೂರ ಗೊಣಗಿದಳು. ಅವನು ಸುಮ್ಮನೇ ನಕ್ಕ. ಮಧುರ ಸುಮ್ಮನಿರು ಎನ್ನುವಂತೆ ತಂಗಿಯನ್ನೂ ಚಿವುಟಿದಳು.

"ಹ್ಲಾಂ.... ನೋಯುತ್ತೆ. ನೀನೇನೇ ಚಿವುಟೋದು. ನನ್ನಿಷ್ಟ ಏನು ಬೇಕಾದ್ರೂ ಆಡ್ತೀನಿ" ಅವಳೂ ಮಧುರಳನ್ನು ಚಿವುಟಿದಾಗ ಮಧುರಳ ಮುಖ ಕೆಂಪಾಗಿತ್ತು. ಮುಖವನ್ನು ಅತ್ತ ತಿರುಗಿಸಿ ಕಿಟಕಿಯಿಂದಾಚೆ ನೋಡತೊಡಗಿದಳು. ಅಲ್ಲಿಗೆ ಆಟ ಮುಗಿದಿತ್ತು. ಮಂದಾರ ಎದ್ದು ಬಂದು ರಾಜನ ಪಕ್ಕದಲ್ಲಿ ಕುಳಿತಳು. "ಏನಾದ್ರೂ ಜೋಕ್ಸ್ ಹೇಳ್ರೀ."

"ನಂಗೆ ತಕ್ಷಣಕ್ಕೆ ಯಾವುದೂ ನೆನಪಿಗೆ ಬರ್ತಿಲ್ಲ. ನಿನಗೆ ಯಾವ್ದಾದ್ರೂ ಗೊತ್ತಿದ್ರೆ ನೀನೇ ಹೇಳು." ಮಂದಾರ ಪ್ರಾರಂಭಿಸಿದಳು. ರಾಜ ಆಗಾಗ ಮಯೂರಳ ಕಡೆ ನೋಡಿದ. ಅವಳು ಕಿವಿಗೆ ಬೆರಳನ್ನಿಟ್ಟುಕೊಂಡಿದ್ದಳು.

ರಾಜ ಮಂದಾರಳಿಗೆ ಅವಳನ್ನು ತೋರಿಸಿ ತಾನೂ ನಕ್ಕ. ಮಯೂರ ಇಬ್ಬರ ಕಡೆಯೂ ನೋಡಿ ಅಣಕಿಸಿದಳು. ಚುನ್ನಿ ಕಣ್ಣುಮುಚ್ಚಿ ಕುಳಿತಿದ್ದಳು. ಓಡುತ್ತಿದ್ದ ವ್ಯಾನಿನ ವೇಗ ಕಡಿಮೆಯಾಯಿತು. ಕಡೆಗೆ ಒಂದು ಕಡೆ ನಿಂತಿತು. ಮತ್ತೆ ಸುಲಭದಲ್ಲಿ ಸ್ಟಾರ್ಟ್ ಆಗಲಿಲ್ಲ.

"ಏನಾಯ್ತಪ್ಪಾ! ಕೇಶವ ಬೇಸರದಿಂದ ಕೇಳಿದ.

"ಏನೋ ಗೊತ್ತಿಲ್ಲ. ನೋಡ್ತೀನಿ ತಡೀರಿ ಸಾರ್" ಡ್ರೈವರನೆಂದ.

"ಯಾಕಪ್ಪಾ.... ಎಲ್ಲಾ ಸರಿಯಾಗಿ ಚೆಕ್ ಮಾಡಿಸಿದ್ಯೋ ಇಲ್ವೋ."

"ಯಾಕೆ ಅವಾಂತರ ಪಡ್ತೀರಿ ಇರಿ ಸಾರ್." ಡ್ರೈವರ್ರು ಕೆಳಗಿಳಿದ.

"ಯಾಕೋ ಶಕುನಾನೇ ಸರಿಯಿಲ್ಲ. ಗಾಡಿ ಯಾಕೆ ಕೆಡಬೇಕಾಗಿತ್ತು? ಇನ್ನೇನು ಕಾದಿದೆಯೋ?" ಗೌರಮ್ಮ ಗೊಣಗಿದಳು.

"ಸುಮ್ನಿರಮ್ಮ ಏನೇನೋ ಆಡಬೇಡ" ಸತ್ಯವತಿ ರೇಗಿದಳು. ರಾಧಾ ಮನದಲ್ಲೇ ನಕ್ಕು ಗಂಡನ ಕಡೆ ನೋಡಿದಳು. ಅವನ ಹುಬ್ಬುಗಳು ಕೂಡಿದ್ದವು.

"ವಿಪರೀತ ಬಾಯಾರಿಕೆ. ಎಳನೀರು ಕುಡಿಯೋಣ" ಪ್ರಭಾವತಿ ನುಡಿದಳು. ಕೇಶವ ಎಲ್ಲರಿಗೂ ಎಳನೀರನ್ನು ತರಿಸಿದ. ಗೌರಮ್ಮ ಕುಡಿಯಲಿಲ್ಲ.

"ಎಳ್ನೀರಿಗೆಂಥಾ ಮಡಿ? ಸುಮ್ನೆ ಕುಡಿಯಮ್ಮಾ..."

"ಇಲ್ಲ. ನಂಗೆ ಕುಡೀಬೇಕೂಂತ ಅನ್ನಿಸ್ತಿಲ್ಲ. ಕುಡಿದ್ರೆ ಜಲಬಾಧೆಗೆ ಹೋಗ್ಬೇಕಾಗುತ್ತೆ. ಅದೆಲ್ಲಾ ನಂಗೆ ಸರಿಹೋಗುಲ್ಲು" ಹಿಂದೆ ಕುಳಿತಿದ್ದ ಹುಡುಗಿಯರು ಕಿಸಕ್ಕನೆ ನಕ್ಕರು. "ನಗ್ರೇ.... ನಗ್ರೇ.... ನೀವೂ ಒಂದಲ್ಲ ಒಂದು ದಿನ ನನ್ಹಂಗೆ ಮುದುಕಿಯಾಗೋರೆ ಆಗ ನಿಮ್ಮ ಮೊಮ್ಮಕ್ಕಳೂ ನಿಮ್ಮನ್ನ ಆಡ್ಕೊಂಡು ನಗುತ್ವೆ."

"ಅವು ಯಾತಕ್ಕೆ ನಕ್ವೋ ಏನೋ... ಅವುಗಳ ಮೇಲೆ ಯಾಕೆ ರೇಗ್ತೀಯ. ತಣ್ಣನೆ ಎಳ್ನೀರು ಕುಡಿ. ಸಿಹಿಯಾಗಿದೆ. ಆಶ್ರಮದಲ್ಲಿ ನಿನ್ನ ಜಲಬಾಧೇನ ತೀರಿಸ್ಕೊಂಡ್ರಾಯ್ತು" ಪ್ರಭಾವತಿ ನಗುತ್ತಾ ನುಡಿದಳು.

"ನಂಗ್ಯಾಡಾಂದ್ಮೇಲೆ ಬ್ಯಾಡಾ. ಈ ಡ್ರೈವರ್ರು ಎಲ್ಲಿ ಹಾಳಾಗ್ಹೋದ? ಅದಕ್ಕೇ ನನಗೆ ಮನೆ ಬಿಟ್ಟು ಹೊರಗ್ಬರೂದು ಅಂತಂದ್ರೆ ಬ್ಯಾಸ್ರಾ."

"ಏನಜ್ಜಿ.... ನನ್ನನ್ನ ಬೈತಿದ್ರಾ? ಎನ್ನುತ್ತಾ ಡ್ರೈವರ್ರು ತನ್ನ ಸೀಟನ್ನೇರಿದ. ವ್ಯಾನನ್ನು ಸ್ಟಾರ್ಟ್ ಮಾಡಿದ. ಗೌರಮ್ಮ ಮಾತಾಡಲಿಲ್ಲ. ವ್ಯಾನು ಚಲಿಸಿತು. ಆದರೂ ಗೌರಮ್ಮನ ಆತಂಕ ಕಡಿಮೆ ಆಗಿರಲಿಲ್ಲ.

* * * *

ಮುಖ್ಯರಸ್ತೆಯನ್ನು ಬಿಟ್ಟು, ವ್ಯಾನು ಆಶ್ರಮದ ದಾರಿಯನ್ನು ಹಿಡಿಯಿತು. "ಆಶ್ರಮ ಬಂತು" ಕೇಶವನೆಂದ. ಎಲ್ಲರೂ ಸರಿಯಾಗಿ ಕುಳಿತು ಕಿಟಕಿಯಿಂದ ಆಚೆ ಕಣ್ಣು ಹಾಯಿಸಿದರು. ಆಶ್ರಮದ ಹೆಬ್ಬಾಗಿಲಿನಲ್ಲಿ ನಂಜುಂಡಸ್ವಾಮಿ ಹಾಗೂ ಷಣ್ಮುಖಪ್ಪ ವ್ಯಾನಿಗೆ ಕೈಯಾಡಿಸಿದರು. ಡ್ರೈವರ್ರು ವ್ಯಾನನ್ನು ನಿಲ್ಲಿಸಿದ.

ಅವರಿಬ್ಬರೂ ವ್ಯಾನನ್ನು ಹತ್ತಿದರು. ಅಲ್ಲಿಂದ ಸ್ವಲ್ಪ ದೂರ ರಸ್ತೆಯನ್ನು ಕ್ರಮಿಸಿದ ನಂತರ, ಆಶ್ರಮ ಗೋಚರಿಸಿತು.

"ಇಲ್ಲೇ... ಇಲ್ಲೇ ನಿಲ್ಲಿಸಿ" ಡ್ರೈವರ್ರು ನಿಲ್ಲಿಸಿದ. ಎಲ್ಲರೂ ಒಬ್ಬೊಬ್ಬರಾಗಿ ಇಳಿದು ಸುತ್ತಲೂ ನೋಟವನ್ನು ಹರಿಸಿದರು. "ಮೌನವನ್ನು ಪಾಲಿಸಿ" ಎಂಬ ಫಲಕವನ್ನೂ ಎಲ್ಲರೂ ಓದಿಕೊಂಡರು. ತಮ್ಮ ತಮ್ಮಲ್ಲೇ ಕೆಳದನಿಯಲ್ಲಿ ಮಾತನಾಡುತ್ತಾ, ನಂಜುಂಡಸ್ವಾಮಿ, ಷಣ್ಮುಖಪ್ಪನವರನ್ನು ಹಿಂಬಾಲಿಸಿದರು. ಎಲ್ಲರನ್ನು ಷಣ್ಮುಖಪ್ಪ ಮೊದಲು ಅತಿಥಿ ಗೃಹಕ್ಕೆ ಕರೆದುಕೊಂಡು ಬಂದರು.

"ಮೊದಲು ಎಲ್ಲರೂ ಕೈಕಾಲು ತೊಳೆದುಕೊಂಡು ಸುಧಾರಿಸಿಕೊಳ್ಳಿ" ಎಂದು ಉಪಚರಿಸಿದರು. ಎಲ್ಲರಿಗೂ ಕಾಫಿಯನ್ನು ತರಿಸಿಕೊಟ್ಟರು.

"ಅಮ್ಮಾ... ನೀವು ಹಾಲು ತಗೊಳ್ಳಿ" ಗೌರಮ್ಮನವರಿಗೆ ಹೇಳಿದರು.

"ಇಲ್ಲ. ನಾನು ಹೊರಗೆ ಏನೂ ತಗೊಳ್ಳಲ್ಲ" ಗೌರವ ಗಂಭೀರವನ್ನು ಪ್ರದರ್ಶಿಸಿ ನುಡಿದಳು.

"ಅಮ್ಮಾ ಸ್ವಲ್ಪ ಹಾಲು ತಗೊಳ್ಳಮ್ಮ. ಆಶ್ರಮದ ಹಸುಗಳ ಹಾಲು ರುಚಿಯಾಗಿರುತ್ತೆ. ಹಾಲಿಗೇನು ದೋಷ?" ಪ್ರಭಾವತಿ ನುಡಿದಳು.

"ಬೇಡ ಅಂದ್ನಲ್ಲ ಬೇಡ. ಇಲ್ಯಾಕೋ ವಾತಾವರಣ ಉಸಿರುಕಟ್ಟಿಸುವ ಹಾಗಿದೆ. ನಾನು ಸ್ವಲ್ಪ ಹೊರಗೆ ತಿರುಗಾಡಿಬರ್ತೀನಿ."

"ಹಾಗೇ ಮಾಡಿ ಅಮ್ಮಾ ಹಿತವಾದ ಗಾಳಿ ಇದೆ. ನಾನು ನಿಮ್ಮ ಜೊತೆಗೆ ಅಂತ ಒಬ್ಬರನ್ನು ಕಳಿಸ್ತೀನಿ."

"ಏನೂ ಬೇಡ. ನಾನು ಶಾನೇ ದೂರ ಹೋಗುಲ್ಲ."

"ದಾರಿ ತಪ್ಪೀತು ಅಂತ... ಅಷ್ಟೇ."

"ನಾನೇನು ಮೂಕೀನೇ.... ಕೇಳ್ಕೊಂಡು ಬರ್ತೀನಿ. ನನಗೆ ಒಬ್ಬಳಿಗೇ ತಿರುಗಾಡಿ ಅಭ್ಯಾಸವಿದೆ. ಇದೇನು ಶಹರಲ್ಲ ರಸ್ತೆ ತಪ್ಪುಕ್ಕೆ." ಗೌರಮ್ಮ ಸೆರಗಿನಿಂದ ಮುಖವನ್ನು ಒರೆಸಿಕೊಂಡು ಗಾಳಿ ಬೀಸಿಕೊಳ್ಳುತ್ತಾ ಹೊರಬಂದಳು. ಷಣ್ಮುಖಪ್ಪನ ಕಣ್ಣು ಸಂಜ್ಞೆಯನ್ನರಿತು, ನಂಜುಂಡಸ್ವಾಮಿ ಗೌರಮ್ಮನ ಹಿಂದೆ ಹಿಂದೆ, ಆಕೆಗೆ ತಿಳಿಯದಂತೆ ಸ್ವಲ್ಪ ದೂರದಲ್ಲಿ ಹೆಜ್ಜೆಹಾಕಿದ.

"ನಾವುಗಳೂ ಅಮ್ಮನ ಜೊತೆ ಹೋಗಬಹುದಾಗಿತ್ತು." ಸತ್ಯವತಿ ರಾಗ ಎಳೆದಳು.

"ನಾವುಗಳು ಹೀಗೆ ಗುಂಪಾಗಿ ಹೋದರೆ ಆಶ್ರಮದ ನಿಶ್ಶಬ್ದತೆಗೆ ಭಂಗ ಬರುತ್ತೆ. ಅಷ್ಟೇ... ಸ್ವಾಮಿಗಳು ಹೇಳಿ ಕಳಿಸಿದಾಗ ಹೋಗಿ ದರ್ಶನ ಮಾಡ್ಕೊಂಡು ಬರೋಣ ಸಾಕು" ಕೇಶವನೆಂದ.

"ಅಷ್ಟಕ್ಕೆ ಇಷ್ಟು ದೂರ ಬರ್ಬೇಕಾಗಿತ್ತಾ! ಬರೀ ಬೇಜಾರು" ಮಯೂರ ಗೊಣಗಿದಾಗ ಕೇಶವ "ಷ್" ಎಂದು ಎಚ್ಚರಿಸಿದ.

"ಏನಪ್ಪಾ.... ಇಲ್ಲೂ ಗದರ್ತೀರಿ. ಆಶ್ರಮದ ಗಿಡ ಮರ, ಹಕ್ಕಿ ಪಕ್ಷಿಗಳನ್ನ ನೋಡ್ಬೇಕೂಂತ ನಮಗೂ ಆಸೆ ಆಗುಲ್ವಾ! ನೀವೇ ಬನ್ನಿ ನನ್ನ ಜೊತೆಗೆ. ನಾವು ಮಾತಾಡ್ದೇ ಬರ್ತೀವಿ" ಪ್ರಭಾವತಿ ನಕ್ಕಳು.

"ನೀನೇ ಸರಿ ಕಣೇ ಮಯೂರಿ... ಬಜಾರಿ ನೀನು"

"ಅತ್ತೇ ಹೀಗೆ ಮಾಡೋಣ. ಇಬ್ಬಿಬ್ರೇ ಹೋಗಿ ಸುತ್ತಾಡ್ಕೊಂಡು ಬರೋಣ. ಒಬ್ಬರು ಮಾತಾಡಿದ್ರೆ ಇನ್ನೊಬ್ರು ಎಚ್ಚರಿಸಬಹುದು" ಅಲ್ಲಿದ್ದವರೆಲ್ಲ ಅವಳ ಮಾತಿಗೆ ನಕ್ಕರು.

"ರಾಜಾ, ನಾನೂ ನೀವೂ ಹೋಗೋಣ" ಮಂದಾರ ಅವನ ಕೈಹಿಡಿದಳು. ರಾಜ ಕೇಶವನ ಕಡೆ ನೋಡಿದ. ಕೇಶವ ಬೇಡ ಎನ್ನುವಂತೆ ತಲೆಯಾಡಿಸಿದ. ರಾಜ ಮಂದಾರಳ ಕೈ ಬಿಟ್ಟು ದೂರ ಸರಿದು ನಿಂತ. ಅಷ್ಟರಲ್ಲಿ ಎಲ್ಲರಿಗೂ ಬಿಸಿಬಿಸಿ ತಿಂಡಿಯ ತಟ್ಟೆಗಳು ಬಂದವು. "ಘಂ" ಎನ್ನುವ ತುಪ್ಪವನ್ನು ಧಾರಾಳವಾಗಿ ಹಾಕಿಮಾಡಿದ್ದ ಉಪ್ಪಿಟ್ಟನ್ನು ಯಾರೂ ಬೇಡ ಎನ್ನುವುದಕ್ಕಾಗಲಿಲ್ಲ. ಜೊತೆಗೆ, ಸೀಮೆ ಅಕ್ಕಿಯ ಪಾಯಸ. ದ್ರಾಕ್ಷಿ, ಗೋಡಂಬಿಯನ್ನು ಹಾಕಿ ಹಾಲಿನಲ್ಲಿ ಬೇಯಿಸಿದ್ದ ಸೀಮೆ ಅಕ್ಕಿಯ ಪಾಯಸವನ್ನು ಕಂಡೊಡನೆ ಕುಡಿಯಬೇಕೆನ್ನಿಸಿತ್ತು. ಎಲ್ಲರೂ ಸಂಕೋಚವನ್ನು ಬದಿಗಿಟ್ಟು, ಸಂಭ್ರಮದಿಂದ ತಟ್ಟೆ ಬಟ್ಟಲುಗಳನ್ನು ಕೈಗೆತ್ತಿಕೊಂಡರು.

* * * *

ಷಣ್ಮುಖಪ್ಪ ಕೇಶವನ ಬಳಿ ಬಂದು, ಕಿವಿಯಲ್ಲಿ ಏನನ್ನೋ ಉಸುರಿದ. ಗಾಬರಿಗೊಂಡ ಕೇಶವ ತಟ್ಟೆಯನ್ನು ಕೆಳಗಿಟ್ಟು ಆತನೊಂದಿಗೆ ಹೊರಟ.

"ನಾನು ಸ್ವಲ್ಪ ಇವರೊಂದಿಗೆ ಹೋಗಿ ಬರ್ತೀನಿ. ನೀವೆಲ್ಲಾ ಇಲ್ಲೇ ಇರಿ. ಯಾರೂ ಹೊರಗೆ ಹೋಗಕೂಡದು." ಕೇಶವ ಅಪ್ಪಣೆ ಮಾಡಿ, ರಾಧಾಳನ್ನು ಕಣ್ಣು ಸಂಜ್ಞೆಯಲ್ಲಿ ಕರೆದು ಕೆಳದನಿಯಲ್ಲಿ ನುಡಿದ.

"ಅಮ್ಮಾ ಕಲ್ಲು ಎಡವಿ ಬಿದ್ದು ಪೆಟ್ಟು ಮಾಡಿಕೊಂಡಿದಾಳಂತೆ. ಈಗ್ಲೇ ಯಾರಿಗೂ ಹೇಳ್ಬೇಡ. ನಾನು ನೋಡ್ಕೊಂಡು ಬರ್ತೀನಿ".... ರಾಧಳೂ ತಳಮಳಗೊಂಡಳು.

"ರಾಜನ್ನ ನಿಮ್ಮ ಜೊತೇಲಿ ಕರ್ಕೊಂಡು ಹೋಗಿ."

"ಬೇಡ. ಅವನು ಇಲ್ಲಿ ನಿಮ್ಮ ಜೊತೆಗಿರಲಿ. ಯಾರನ್ನೂ ಇಲ್ಲಿಂದ ಹೊರಕ್ಕೆ ಕಳಿಸಬೇಡ" ಎನ್ನುತ್ತಾ ಕೇಶವ ಆತನೊಂದಿಗೆ ಹೊರಟುಹೋದ.

"ಏನಂತೆ?" ಪ್ರಭಾವತಿ ಕೇಳಿದಳು.

"ಅಮ್ಮಾ ತಪ್ಪಿಸ್ಕೊಂಡಿರಬಹುದು..."

"ಇಲ್ಲ ಅವರ ಹಿಂದೆ ಹಿಂದೆ ನಂಜುಂಡಸ್ವಾಮಿ ಇದ್ರಲ್ಲ."

"ಇಲ್ಲಿ ಬಂದು ಹೀಗೆ ಕೂತಿದ್ರೆ ಏನು ಚೆನ್ನ? ನಾವುಗಳೂ ತಿರುಗಾಡಿಕೊಂಡು ಬರೋಣ" ಸತ್ಯವತಿ ಎದ್ದಳು.

"ಬೇಡಿ ಅತ್ಗೆ.... ನಿಮ್ಮ ತಮ್ಮಂಗೆ ಕೋಪ ಬರುತ್ತೆ. ಆಮೇಲೆ ನನ್ನನ್ನ ಬೈತಾರೆ ಅಷ್ಟೇ."

"ಅದೂ ನಿಜ. ನೀನ್ಯಾಕೆ ಅನ್ನಿಸ್ಕೋಬೇಕು. ಹೋಗ್ಲೀ ಯಾರಾದ್ರೂ ಹಾಡು ಹೇಳಿ ಕೇಳೋಣ" ಎಲ್ಲರೂ ಮಧುರಳ ಕಡೆ ತಿರುಗಿದರು. ಮಧುರ ಅಡ್ಡಡ್ಡ ತಲೆಯಾಡಿಸಿದಳು. "ಹೋಗ್ಲಿ ಮಯೂರ ನೀನು ಡ್ಯಾನ್ಸ್ ಮಾಡೇ ನೋಡ್ತೀವಿ" ಮಯೂರ ಎದ್ದು ನಿಂತು ವೈಯಾರದಿಂದ ಎಲ್ಲರ ಕಡೆ ನೋಡಿದಳು.

"ಗೆಜ್ಜೇನೇ ಇಲ್ವಲ್ಲಾ. ಹೇಗೆ ಡ್ಯಾನ್ಸ್ ಮಾಡೋದು."

"ಪರವಾಗಿಲ್ಲ ಹಾಗೇ ಮಾಡು."

"ಹಾಡು ಯಾರು ಹೇಳ್ತೀರಿ? ಅಮ್ಮ ಅತ್ತೆ..."

"ಇಲ್ಲ ಮಯೂರ. ನಂಗೆ ಹಾಡು ಬರಲ್ಲ. ನಿಮ್ಮಮ್ಮ ಹೇಳೂ ಹಾಗೆ ಕಾಣ್ತಿಲ್ಲ. ಹೋಗ್ಲಿ ಬಿಡು."

"ನಾನು ಹೇಳ್ಲಾ!" ರಾಜ ಕೇಳಿದಾಗ ಮಯೂರ ಕಿಸಕ್ಕನೆ ನಕ್ಕಳು. ರಾಜ, "ಹೂಂ ನಾನು ಹೇಳ್ತೀನಿ." ಎನ್ನುತ್ತಾ ಗಂಟಲನ್ನು ಸರಿಮಾಡಿಕೊಂಡ.

"ನಿಮಗೆ ಯಾವ ಹಾಡು ಬರುತ್ತೆ! ಸವಾಲೆಸೆದಳು.

"ಕೃಷ್ಣಾ ನೀ ಬೇಗನೇ ಬಾರೋ... ಆಗುತ್ತೆ ಅಲ್ವಾ?" ಅವನೂ ನಗುತ್ತಾ ಕೇಳಿದಾಗ ಮೋಜೆನಿಸಿತು.

"ಏ ಮಂದಾ... ಕೊಳಲ ಕೃಷ್ಣನ ಫೋಸ್‌ನಲ್ಲಿ ನಿಂತ್ಕೊಳ್ಳೇ..." ಮಯೂರ ಹೇಳಿದೊಡನೆ, ಮಂದಾರ ಚಂಗನೆದ್ದು ಮುರಳೀಲೋಲ ಕೃಷ್ಣನ ಭಂಗಿಯಲ್ಲಿ ನಿಂತಳು. ಮಯೂರ ಸಿದ್ಧಳಾದಳು. ರಾಜ ಹಾಡಲು ಪ್ರಾರಂಭಿಸಿದ. ಅವನ ಹಾಡಿಗನುಗುಣವಾಗಿ ಹೆಜ್ಜೆ ಹಾಕುತ್ತಾ ಮಯೂರ ನಾಟ್ಯವಾಡಿದಳು. ಅವಳ ನೃತ್ಯದ ಮೇಲೆ ಎಲ್ಲರ ದೃಷ್ಟಿ. ಹಾಡು ಮುಗಿಯಿತು. ಹೆಜ್ಜೆ ನಿಂತಿತು. ಎಲ್ಲರೂ ಆನಂದದಿಂದ ಚಪ್ಪಾಳೆ ತಟ್ಟಿದರು. ಮಯೂರ ಹೆಮ್ಮೆಯಿಂದ ಬೀಗಿದಳು. ರಾಜ ಅವಳ ಎದುರಿಗೆ ಬಂದು ನಿಂತ.

"ತುಂಬಾ ಚೆನ್ನಾಗಿ ಡ್ಯಾನ್ಸ್ ಮಾಡಿದಿರಿ." ಬಾಯ್ತುಂಬಾ ಹೊಗಳಿದ. ಮಯೂರ ಮಂದಹಾಸ ಬೀರಿದಳು.

"ಥ್ಯಾಂಕ್ಸ್." ಅವನೂ ತಲೆಯಾಡಿಸಿದ. ನೀವು ತುಂಬಾ ಚೆನ್ನಾಗಿ ಹಾಡಿದಿರಿ ಎಂದು ಅವಳು ಹೊಗಳಲಿಲ್ಲ. ಅವನು ಸೊಟ್ಟ ನಗೆ ನಕ್ಕ. ಮಧುರ ಅವನ ಬಳಿಗೆ ಬಂದು ನುಡಿದಳು.

"ನಿಮ್ಮ ಹಾಡೂ ಕೂಡಾ ತುಂಬಾ ಸೊಗಸಾಗಿತ್ತು."

"ಥ್ಯಾಂಕ್ಸ್" ಅವನು ಮಧುರಳನ್ನು ಮೆಚ್ಚುಗೆಯಿಂದ ನೋಡಿ, ಕಣ್ಣು ಕಿರಿದು ಮಾಡಿ ಮಯೂರಳ ಕಡೆ ನೋಡಿದ. ಅವಳು ಗಮನಿಸಿದವಳಂತೆ ಅಲ್ಲಿಂದ ಸರಿದುಹೋದಳು.

"ನೀವು ಬೇಜಾರು ಮಾಡ್ಕೋಬೇಡಿ. ಅವಳ ಸ್ವಭಾವವೇ ಹಾಗೆ ಎಂದು ಹೇಳುವ ಮನಸ್ಸಾದರೂ ಮಧುರ ತಡೆದುಕೊಂಡಳು. ಎಷ್ಟಾದರೂ ಮಯೂರ ನನ್ನ ಸ್ವಂತ ತಂಗಿ. ಇವನು ಹೊರಗಿನವನು, ಹೊಸಬ" ಎಂದುಕೊಂಡು ತಾನೂ ಅತ್ತ ಸರಿದಳು.

* * * *

"ಅಮ್ಮಾ.... ಏನಾಯ್ತಮ್ಮಾ? ಇಲ್ಯಾಕೆ ಹೀಗೆ ಕೂತಿದೀಯ? ಏನಾದ್ರೂ ಹಿಂಸೆ ಆಗ್ತಿದೆಯಾ!" ಕೇಶಳ ತಾಯಿಯ ಬಳಿ ಕುಳಿತು ಕೇಳಿದ.

"ನಾನು, ಅವನನ್ನ ನೋಡ್ದೆ. ಅವನು ಇಲ್ಲೇ ಇದಾನೆ" ಪಕ್ಕದ ಕುಟೀರದ ಕಡೆ ಬೆರಳು ತೋರಿದಳು.

"ಯಾರಮ್ಮಾ...? ಯಾರನ್ನ ನೋಡ್ದೆ ನೀನು.? ಯಾಕೆ ಹೀಗೇ ಅಸಂಬದ್ಧದ ಮಾತಾಡ್ತಿದೀಯ...?"

"ಅಸಂಬದ್ಧ ಅಲ್ಲ... ಅವನೇ... ಅವನೇ ನಿನ್ನಣ್ಣ. ನನ್ನ ಮಗ." ಅಲ್ಲಿದಾನೆ ಅಲ್ಲಿ ಅವಿತುಕೊಂಡಿದಾನೆ." ಕುಟೀರದ ಕಡೆ ಬೆರಳು ತೋರಿದಳು.

"ಸರಿಯಾಗಿ ಹೇಳಮ್ಮ... ಯಾರು? ಎಲ್ಲಿ ಅಂತ..."

"ಅಲ್ಲಿ ಒಳಗೆ ಇರೋನನ್ನ ನೋಡ್ಕೊಂಡು ಬಾ... ಗಡ್ಡ ಮೀಸೆ ಬಿಟ್ಕೊಂಡು ಸನ್ಯಾಸಿ ಥರ ಇದ್ದ ಮಾತ್ರಕ್ಕೆ ನನಗೆ ಅವನ ಗುರುತು ಸಿಗುಲ್ಲ ಅಂತ ಅಂದ್ಕೊಂಡಿದಾನೆ ಮೂರ್ಖ. ನಾನು ತಿಳುವಳಿಕೆ ಇಲ್ಲದೋಳೇನಲ್ಲ."

"ಸರಿ ಬಾಮ್ಮ... ಯಾರು ಅಂತ ತೋರಿಸು ಬಾ.... ನಾನೂ ನೋಡ್ತೀನಿ."

"ನನಗೆ ಈಗ ನಿನ್ಮೇಲೂ ಅನುಮಾನ ಬರ್ತಿದೆ. ಕೇಶವಾ. ನಿಜ ಹೇಳು ಅವನು ಇಲ್ಲಿದಾನೆ ಅಂತ ನಿನಗೆ ಗೊತ್ತಿತ್ತು ಅಲ್ವಾ! ಅದಕ್ಕೇ ನೀನು ಕರ್ಕೊಂಡು ಬಂದದ್ದು..." ಗೌರಮ್ಮ ದಬಾಯಿಸಿದಳು.

"ಆತನ ಮುಖವನ್ನೇ ನೋಡಿಲ್ಲ ನಾನು. ಇಲ್ಲಿದಾನೆ ಅಂತ ನನಗೆ ಹೇಗೆ ತಿಳೀಬೇಕು.?"

"ಅವನನ್ನ ನೋಡ್ದೇ ಇದ್ರೆ ನಷ್ಟವೇನೂ ಇಲ್ಲ. ನಡೀ ಇಲ್ಲಿಂದ. ಆದಷ್ಟು ಬೇಗ ಇಲ್ಲಿಂದ ಹೊರಟುಹೋಗೋಣ" ಕುಟೀರದ ಒಳಗಿದ್ದ ವ್ಯಕ್ತಿ ಓಡಿಬಂದು ಗೌರಮ್ಮನ ಕಾಲುಗಳ ಮೇಲೆ ಬಿದ್ದಿತು.

"ಅಮ್ಮಾ.... ನನ್ನನ್ನ ಕ್ಷಮಿಸಮ್ಮ... ನಂದು ತಪ್ಪಾಯಿತು." ಗೌರಮ್ಮ ಸರ್ರನೆ ಕಾಲುಗಳನ್ನು ಹಿಂದಕ್ಕೆಳೆದುಕೊಂಡಳು.

"ಏಳು... ನಡೀ... ದೂರ ನಿಂತ್ಕೋ ನೀನ್ಯಾರೋ ನಂಗೊತ್ತಿಲ್ಲ."

"ನೀನು ನನ್ನನ್ನ ಗುರುತಿಸಿದೀಯ.... ನಾನು ನಿನ್ನ ಮಗ ಮೂರ್ತಿ. ಈಗ್ತಾನೆ ಕೇಶವನ ಹತ್ರ ಹೇಳ್ತಾ ಇದ್ಯಲ್ಲಮ್ಮಾ "ಆ ವ್ಯಕ್ತಿ ಎದ್ದು ನಿಂತು ಕೇಶವನ ಕಡೆ ನೋಡಿತು. ಅವನು ಕಕ್ಕಾಬಿಕ್ಕಿ ಆಗಿದ್ದ. "ಕೇಶವಾ, ನಾನು ನಿನ್ನ ಅಣ್ಣ ಮೂರ್ತಿ ಕಣೋ. ಅಮ್ಮ ನನ್ನನ್ನ ಗುರುತಿಸಿದಾಳೆ.... ಅಮ್ಮಂಗೆ ನನ್ನನ್ನು ಕ್ಷಮಿಸುವಂತೆ, ನೀನಾದ್ರೂ ಹೇಳೋ." ಕೇಶವ ಮಾತಾಡಲಿಲ್ಲ. ತಾಯಿಯ ಕಡೆ ನೋಡಿದ.

"ನನ್ನನ್ನು ಕಂಡು ನಿನಗೆ ಸಂತೋಷ ಆಗಲಿಲ್ಲವೇನಮ್ಮಾ?"

"ಕೇಶವಾ ನಡೀ ಇಲ್ಲಿಂದ ಹೋಗೋಣ."

"ನನ್ನ ಪ್ರಶ್ನೆಗೆ ಉತ್ತರ ಹೇಳುಲ್ವೇನಮ್ಮಾ..."

"ಆ ಅಧಿಕಾರ, ಆಸೆ ನನಗಿಲ್ಲ."

"ಯಾಕಮ್ಮ ಹೀಗೆ ಮಾತಾಡ್ತೀಯ?.... ನಾನೂ ನಿನ್ನ ಹೊಟ್ಟೇಲಿ ಹುಟ್ಟಿದ ಮಗನೇ..."

"ನೀನು ಸಾಕಷ್ಟು ಹೊಟ್ಟೆ ಉರಿಸಿದ್ದಾಗಿದೆ. ಇನ್ನೇನು ಉಳಿದಿಲ್ಲ."

"ಇನ್ನು ಮುಂದೆ ನಾನು ನೀನು ಹೇಳಿದ ಹಾಗೆ ಕೇಳ್ಕೊಂಡು ಇರ್ತೀನಮ್ಮ. ನಾನು ನಿನ್ನ ಮಗನಲ್ಲ ಅಂತ ಮಾತ್ರ ಹೇಳ್ಬೇಡ."

"ಈಗ ನನ್ನ ಮಗನಾಗಿ ಬಂದು, ನನಗೆ ಏನು ಮಾಡಬಲ್ಲೆ? ನನ್ನ ಅವಸ್ಥೇನ ನೋಡು ಹೇಗಿದೀನಿ. ಎಲ್ಲಕ್ಕೂ ಈ ಕೇಶವನೊಬ್ಬನೇ ಹೆಗಲನ್ನು ಕೊಟ್ಟಿದಾನೆ. ಆಗ ನಿನ್ನ ಕರ್ತವ್ಯಗಳನ್ನಾ ಮರೆತು, ಈಗ ಯಾವ ಧರ್ಮವನ್ನು ಉಳಿಸುವ ಮಾತನಾಡ್ತೀಯ?"

"ಹೌದಮ್ಮ.... ನಾನು ಪಾಪಿ. ನನ್ನ ಪಾಪಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸಿದೀನಿ. ಈಗ ನೀನು ಕ್ಷಮಿಸದಿದ್ದರೆ ಪರಮಪಾಪಿಯಾಗಿ, ಘೋರನರಕಕ್ಕೆ ಹೊರಟುಹೋಗ್ತೀನಿ. ಒಂದೇ ಒಂದು ಸಾರಿ ಕ್ಷಮಿಸಿದೀನಿ ಅಂತ ಹೇಳು." ಮತ್ತೆ ಆಕೆಯ ಕಾಲುಗಳನ್ನು ಹಿಡಿಯಲೆಂದು ಬಾಗಿದ. ಗೌರಮ್ಮ ಹಿಂದಕ್ಕೆ ಸರಿದಳು.

"ಸರಿ. ನಿನ್ನ ಕ್ಷಮೆಗೂ ನಾನು ಅರ್ಹನಲ್ಲ. ಇನ್ನು ನಾನೆಂದು, ನಿನ್ನನ್ನು ಮತ್ತೇನನ್ನು ಕೇಳುವುದಿಲ್ಲ. ನಿನ್ನ ಮನಸ್ಸಿಗೆ ಹಿಂಸೆ ಮಾಡುವುದಿಲ್ಲ" ಅವನು ಹಾಗೇ ಹಿಂದೆ ಹಿಂದಕ್ಕೆ ಸರಿದು ಕುಟೀರದೊಳಗೆ ಮರೆಯಾದ. ನಿಂತಿದ್ದ ಗೌರಮ್ಮ ಕುಸಿದು ಕುಳಿತು ಮುಖಮುಚ್ಚಿ ಅಳತೊಡಗಿದಳು.

"ಏನಾಯ್ತು! ಅವರ್ಯಾಕೆ ಅಳ್ತಿದಾರೆ?" ಕೇಶವ ಕೇಳಿದವರ ಕಡೆ ತಿರುಗಿದ.

"ಏನಿಲ್ಲ. ಏನೋ ಹಳೆಯ ನೆನಪುಗಳು."

"ಈ ಹಿಂದೆ ಎಂದಾದ್ರೂ ಬಂದಿದ್ರಾ?.... ಸ್ವಾಮೀಜಿ ದರ್ಶನ ಕೊಡ್ತಿದಾರೆ. ಕರೆದು ಬಾ ಅಂತ ನಂಜುಂಡಪ್ಪ ಹೇಳಿದ್ರು. ಬನ್ನಿ ಮತ್ತೆ."

"ಹೂಂ. ಬರ್ತೀನಿ. ನೀವು ಹೊರಡಿ.... ಅಮ್ಮಾ ಏಳಮ್ಮಾ."

"ನೀನು ಹೋಗು ಕೇಶವಾ... ನನಗೆ ಯಾವ ಸ್ವಾಮಿಯ ದರ್ಶನವೂ ಬೇಡ. ಈ ಮುಠ್ಠಾಳಂಗೆ ನಾಲ್ಕು ಬುದ್ಧಿ ಮಾತು ಹೇಳಿ ಬರ್ತೀನಿ" ಗೌರಮ್ಮನ ದೃಷ್ಟಿ ಕುಟೀರದ ಕಡೆಗೆ ಇತ್ತು. ಕೇಶವನ ತಲ್ಲಣ ಕಡಿಮೆ ಆಗಿತ್ತು.

"ನಾನು ಇಲ್ಲೇ ಕೂರ್ತಿತೀನಿ. ನೀನು ಮಾತಾಡಿ ಬಾ."

"ಪರವಾಗಿಲ್ಲ ನೀನು ಹೋಗು ಮನೆಯ್ನೋರೆಲ್ಲಾ ನಿನಗೋಸ್ಕರ ಕಾಯ್ತಾ ಇರ್ತಾರೆ."

"ಒಬ್ಬಳೇ ಬರಬೇಡ..."

"ನಂಗೆಲ್ಲಾ ಗೊತ್ತು ನೀನು ಹೋಗು." ಗೌರಮ್ಮ ಹಗುರವಾಗಿ ದಬಾಯಿಸಿದಾಗ, ಕೇಶವನ ಹೃದಯ ಹಗುರವಾಗಿತ್ತು. ತಾನಿನ್ನು ಅಲ್ಲೇ ನಿಂತಿದ್ದರೆ ತಾಯಿ ತಡಮಾಡಿ ಬಿಡುವಳೆಂದುಕೊಂಡು, ಆಕೆಗೆ ಬೆನ್ನು ಮಾಡಿ ಹೆಜ್ಜೆ ಹಾಕಿದ. ಮಾರು ದೂರ ಬಂದನಂತರ, ನಿಂತು ಹಿಂತಿರುಗಿ ನೋಡಿದ. ತಾಯಿ ಕಾಣಲಿಲ್ಲ. ನೆಮ್ಮದಿಯ ನಿಟ್ಟುಸಿರನ್ನು ಬಿಟ್ಟು ಮುಂದೆ ನಡೆದ.

* * * *

"ಅಮ್ಮಾ ಎಲ್ಲಿ? ಒಬ್ಬನೇ ಬಂದ್ಯಲ್ಲಾ." ಸತ್ಯವತಿ ತಮ್ಮನನ್ನು ಕೇಳಿದಳು.

"ಯಾರೋ ಹಳೇ ಪರಿಚಯದವರು ಸಿಕ್ಕಿದ್ರು. ಮಾತಾಡ್ತಾ ಇದ್ಲು. ಮಾತು ಮುಗಿದ್ಮೇಲೆ ಬರ್ತಾಳೆ ಬಿದು."

"ಏನೋ ಹಾಗಂದ್ರೆ? ಇಲ್ಯಾರು ಸಿಗ್ತಾರೆ ಹಳೇ ಪರಿಚಯ್ದೋರು"

"ಅಮ್ಮ ಬಂದ್ಮೇಲೆ ಅವಳನ್ನೇ ಕೇಳು." ಅವಳ ಕಣ್ಣು ತಪ್ಪಿಸಿದ.

ಸ್ವಾಮೀಜಿಯ ದರ್ಶನವಾಯ್ತು. ಫಲ ಮಂತ್ರಾಕ್ಷತೆಯನ್ನು ಸ್ವೀಕರಿಸಿದ್ದೂ ಆಯ್ತು. ಆದರೂ ಗೌರಮ್ಮ ವಾಪಸ್ಸು ಬಂದಿರಲಿಲ್ಲ. ಯಾರಪ್ಪಾ ಅಷ್ಟು ಮಾತ್ನೋರು. ಇನ್ನೂ ಬರಲಿಲ್ವಲ್ಲಾ ಅಮ್ಮ. ಹೋಗಿ ಕರ್ಕೊಂಡ್ಬಾ." ಕೇಶವ ಉತ್ತರಿಸದೇ ಸುಮ್ಮನೇ ಅತ್ತಿತ್ತ ನೋಡಿದ.

"ಕೇಶವಾ.... ಏನಾಯ್ತು ಹೇಳು. ನಿನ್ನ ಮುಖ ನೋಡಿದ್ರೆ ನೀನು ಏನನ್ನೋ ಮುಚ್ಚಿಡ್ತಾ ಇದೀಯ ಅಂತನ್ನಿಸ್ತಿದೆ." ಸತ್ಯವತಿ ಅವನ ಭುಜವನ್ನು ಅಲ್ಲಾಡಿಸಿದಳು. ಕೇಶವ ಅವಳನ್ನೇ ದಿಟ್ಟಿಸಿದ.

"ನಿನಗೆ ಅಣ್ಣನ್ನ ನೋಡಿದ ನೆನಪಿದೆಯಾ ಸತ್ಯಾ?"

"ಯಾವ ಅಣ್ಣ? ಮೂರ್ತಿನಾ? ಈಗ್ಯಾಕೆ ಬಂತು ಅವನ ಮಾತು?"

"ಅವನು ವಾಪಸ್ಸು ಬಂದಿದಾನೆ."

"ಏನಂದೆ? ಇಷ್ಟು ವರ್ಷಗಳ ನಂತರ...? ನಿಜವಾಗಿಯೂ...?

"ಹೂಂ. ಈಗ್ತಾನೇ ನಾನು ಅವನನ್ನು ನೋಡಿಯೇ ಬಂದಿದ್ದು..."

"ಅಮ್ಮಂಗೆ ಗೊತ್ತಾ? ಅವನು ಇಲ್ಲಿದಾನಾ?"

"ಹುಂ. ಅಮ್ಮ ಅವನ ಹತ್ರಾನೇ ಇದಾಳೆ..."

"ಬಾ ನನ್ನನ್ನು ಕರ್ಕೊಂಡ್ಹೋಗು. ನಾನು ಅವನನ್ನು ನೋಡ್ಬೇಕು."

"ಈಗ್ಲೇ ಎಲ್ರಿಗೂ ತಿಳಿಯೋದು ಬೇಡ. ಇಲ್ದಿದ್ರೆ ನಾನೇ ಕರ್ಕೊಂಡು ಹೋಗ್ತಿದ್ದೆ."

"ಚಿಕ್ಕೋರೆಲ್ಲಾ ಇಲ್ಲೇ ಇರಲಿ. ನಾನು ಅಕ್ಕಂಗೆ, ರಾಧಂಗೆ, ಹೇಳ್ತೀನಿ. ನಾವುಗಳು ಹೋಗಿ ನೋಡೋಣ. ಮಾತಾಡೋಣ." ಅವಳು ಆಸೆ ಕಣ್ಣುಗಳನ್ನು ಅರಳಿಸುತ್ತಾ ನುಡಿದಾಗ ಕೇಶವ ಸಂದಿಗ್ಧಗೊಂಡ. ರಾಧಾಳನ್ನು ಕೈಸನ್ನೆ ಮಾಡಿ ಕರೆದ. ರಾಧಾ ಹುಬ್ಬುಗಂಟಿಕ್ಕಿಯೇ ಬಂದಳು. ಕೇಶವ ಮಾತಾಡಿದ.

"ಮಕ್ಕಳೆಲ್ಲಾ ಇಲ್ಲೇ ಇರಲಿ. ಬೇಗ ಹೋಗಿ ಬಂದುಬಿಡೋಣ."

"ನಾನು ಬರುಲ್ಲ. ಇಲ್ಲೇ ಇರ್ತೀನಿ."

"ಯಾಕೆ? ನಿನಗೆ ಏನಾದ್ರೂ ಭಯಾನ?"

"ಭಯ ಏನಿಲ್ಲ. ನೀವುಗಳು ಒಡಹುಟ್ಟಿದವರು. ಬರೀ ಮಕ್ಕಳನ್ನು ಇಲ್ಲಿಬಿಟ್ಟರೆ, ಅವುಗಳಿಗೂ ಅನುಮಾನ ಕಾಡುತ್ತೆ. ನಾನು ಇಲ್ಲಿ ಅವರುಗಳ ಜೊತೇಲಿರ್ತೀನಿ."

"ಇಲ್ಲಿ ರಾಜ ಇರ್ತಾನೆ. ಇನ್ಯಾಕೆ ಭಯ?"

"ರಾಜ.... ರಾಜ... ಎಲ್ಲಾದಕ್ಕೂ ರಾಜ. ಅವನೇ ಇದ್ನಾ ಮೊದಲ್ನಿಂದ? ಅವನು ಹೊಸಬ. ಅವನೊಂದಿಗೆ ಈ ನಾಲ್ಕು ಹೆಣ್ಣುಮಕ್ಕಳನ್ನು ಬಿಟ್ಟು ನಾನು ಬರುಲ್ಲ."

"ಅವನಿನ್ನೂ ಚಿಕ್ಕವನು. ನಿನಗ್ಯಾಕೆ ಅವನ ಮೇಲೆ ಅನುಮಾನ?"

"ನಮ್ಮ ಹೆಣ್ಣು ಮಕ್ಕಳು ದೊಡ್ಡವರು. ಅವರ ಜವಾಬ್ದಾರಿ ನಮ್ಮದು. ಅದು ಸರಿಯಲ್ಲ. ನಾನು ಬರುಲ್ಲ ಅಂದ್ರೆ ಬರುಲ್ಲ ತಿಳೀತಾ?"

"ನಿಂದು ವಕ್ರಬುದ್ಧಿ ಏನಾದ್ರೂ ಮಾಡ್ಕೋ. ಅವನು ನನ್ನ ಅಣ್ಣ ಇಷ್ಟು ವರ್ಷಗಳ ನಂತರ ವಾಪಸ್ಸು ಬಂದಿದಾನೆ. ಅವನು ಏನಂದ್ಕೋತಾನೆ!"

"ಅವರು ಏನಾದ್ರೂ ಅಂದ್ಕೊಳ್ಳಲಿ, ನಂಗೇನು? ನಾನು ಅವರನ್ನೂ ಇದುವರೆಗೂ ನೋಡಿಲ್ಲ. ಈಗ ಯಾವ ಭಾವನೆಯೂ ತಕ್ಷಣಕ್ಕೆ ಹುಟ್ಟುಲ್ಲ.

ನಾನು ಇಲ್ಲಿಯೇ ಇದ್ದರೆ, ಮಕ್ಕಳು ಪ್ರಶ್ನೇ ಕೇಳುಲ್ಲ. ಇಲ್ದಿದ್ರೆ ಮಕ್ಕಳನ್ನು ಕರ್ಕೊಂಡು ಎಲ್ರೂ ಹೋಗೋಣ."

ಕೇಶವ ಉತ್ತರಿಸದೇ ಮುಖ ದಪ್ಪಗೆ ಮಾಡಿಕೊಂಡು ನಿಂತ. ಸತ್ಯ ಪ್ರಭಾವತಿಯನ್ನು ಕರೆತಂದಳು. "ರಾಧಾ ಬರುಲ್ವಂತಾ?"

"ಇಲ್ಲ, ಅವಳು ಇಲ್ಲಿ ಮಕ್ಕಳ ಜೊತೆ ಇರ್ತಾಳೆ."

"ನಾನು ಕರೀಲಾ?"

"ಬೇಡ. ಅವಳೇನೂ ಬರೋದು ಬೇಡ" ಕೇಶವ ಒರಟಾಗಿ ನುಡಿದಾಗ ಸತ್ಯವತಿ ಪೆಚ್ಚಾದಳು. ಮೂವರೂ ಮಾತಿಲ್ಲದೇ ಕುಟೀರದ ಕಡೆಗೆ ನಡೆದರು. ಕುಟೀರದ ಹೊರಬಾಗಿಲಲ್ಲಿ ಚಪ್ಪಲಿಗಳನ್ನು ಬಿಟ್ಟು, ಹೊಸ್ತಿಲನ್ನು ದಾಟಿ ಒಳಬಾಗಿಲಿಗೆ ಬಂದರು. ಎದುರುಬದುರು ಕುಳಿತಿದ್ದ ತಾಯಿ ಮಗ ಇತ್ತ ತಿರುಗಲಿಲ್ಲ. ಮಾತು ಮುಗಿದಿತ್ತೋ ಪ್ರಾರಂಭವೇ ಆಗಿರಲಿಲ್ವೋ ತಿಳಿಯಲಿಲ್ಲ. ಮೂರ್ತಿ ಕೈಕಟ್ಟಿ ಎತ್ತಲೋ ನೋಡುತ್ತಿದ್ದ. ಗೌರಮ್ಮ ಕತ್ತು ತಗ್ಗಿಸಿ ಕುಳಿತಿದ್ದಳು. ಮೂವರೂ ಅತ್ತ ಹೆಜ್ಜೆ ಹಾಕಿದರು. ಸನಿಹದಲ್ಲಿ ಹೆಜ್ಜೆ ಸಪ್ಪಳ ಕೇಳಿದಾಗ ಇಬ್ಬರೂ ಇತ್ತ ತಿರುಗಿದರು. ಅಕ್ಕ ತಂಗಿಯರು ಮೂರ್ತಿಯನ್ನೇ ದಿಟ್ಟಿಸಿದರು. ಬಿಳಿಯ ಉಡುಗೆ, ಗಡ್ಡಮೀಸೆಗಳ ಅಡಿಯಲ್ಲಿ ಮರೆಯಾಗಿದ್ದ ಮುಖ ಮುಸುಕು ಮಸುಕಾಗಿದ್ದ ಅಣ್ಣನ ನೆನಪು. ಈಗ ಅವನೇ ಅಣ್ಣನೆಂದು ಗುರುತಿಸುವುದು ಕಷ್ಟವೆನಿಸಿತ್ತು. ಗೌರಮ್ಮ ಮಾತಾಡಲಿಲ್ಲ. ಅಕ್ಕತಂಗಿಯರಿಗೂ ಮಾತು ಹೊರಡಲಿಲ್ಲ. ಅವನೂ ಮಾತನಾಡಿಸಲಿಲ್ಲ. ಮೌನ ಅಸಹನೀಯವೆನಿಸಿತ್ತು. ಮೂರ್ತಿ ಕೇಶವನ ಕಡೆ ನೋಡಿದ.

"ಅಮ್ಮನ್ನ ಕರ್ಕೊಂಡು ಹೋಗು..." ಗೌರಮ್ಮ ಮೂರ್ತಿಯನ್ನು ನೋಡಿದಳು.

"ಇವರಿಬ್ರೂ ನಿನ್ನ ತಂಗೀರು.... ನೆನಪಿದೆಯಾ?"

"ಆಗ ಚಿಕ್ಕೋರಾಗಿದ್ರು ಈಗ ಹೆಂಗಸ್ರಾಗಿದಾರೆ."

"ಮದುವೆ ಆಗಿದೆ. ಮಕ್ಕಳಿದಾರೆ... ಅಂದ್ಹಾಗೇ ನಿನ್ಕತೆ ಏನು?"

"ನನ್ಕತೆ, ಯಾಕೀಗ?"

"ಬೇಡ ಬಿಡು. ಆಶ್ರಮದಲ್ಲಿ, ಗಡ್ಡಮೀಸೆ ಬೆಳೆಸ್ಕೊಂಡು, ಮುಖ ಮರೆಸ್ಕೊಂಡು ಇರೋನ ಹಿಂದೆ ಭಾರೀ ಕತೆಯೇ ಇರುತ್ತೆ. ಹೆತ್ತ ತಂದೆ

ತಾಯಿಗಳನ್ನ ಬಿಟ್ಟು ಬಂದೋನು, ಏನೇನು ದುಷ್ಕೃತ್ಯಗಳನ್ನು ಮಾಡಿದೀಯೋ?"

"ಅಮ್ಮ ಸುಮ್ನಿರಮ್ಮ.... ಈಗ ಯಾಕೆ ಹಳೇ ಮಾತು?"

"ನೀನು ಸುಮ್ನಿರು ಕೇಶವಾ... ಈಗ ತಾಯಿಯ ನೆನಪಾಗಿದೆ. ಅಂದ್ರೆ ಏನೋ ಘಟನೆ ನಡೆದಿರಲೇಬೇಕು. ಬಿಸಿ ರಕ್ತದ ಕಾವು ಕಡಿಮೆ ಆಗಿದ್ರೂ ಪಶ್ಚಾತ್ತಾಪದ ಸ್ವರವಿಲ್ಲ."

"ಪಶ್ಚಾತ್ತಾಪ ಆಗಿದೆ. ಪ್ರಾಯಶ್ಚಿತ್ತ ಮಾಡ್ಕೋತಾ ಇದೀನಿ. ಅದಕ್ಕೇ ಇಲ್ಲಿರೋದು."

"ಇಲ್ಲಿ ದೇಹ ದಂಡನೆ ಆಗಿರುವಂತೆ ಕಾಣ್ತಿಲ್ಲ. ಹೊತ್ತುಹೊತ್ತಿಗೆ ಉಂಡು, ತಿಂದು, ಕಾಲುಚಾಚಿ ಬಿದ್ಕೊಂಡು ಜೀವನ ನಡೆಸ್ತಿದೀಯೋ ಏನೋ?... ಇದೆಂಥಾ ಪ್ರಾಯಶ್ಚಿತ್ತ?"

"ನಾನು ಶಿಕ್ಷೆ ಅನುಭವಿಸಿದ್ದಾಗಿದೆ. ಹದಿನಾಲ್ಕು ವರ್ಷ ಜೈಲಿನಲ್ಲಿ ಕಳೆದು, ಬಿಡುಗಡೆಯಾಗಿ ಬಂದಿದೀನಿ. ಸೀದಾ ನಿನ್ನ ಮನೆಗೆ ಬಂದಿದ್ರೆ ಏನು ಮಾಡ್ತಿದ್ದೆ! ಯಾರಿಗೂ ತಿಳಿಯದಂತೆ ಇಲ್ಲಿ ಅಜ್ಞಾತನಾಗಿದ್ದೆ. ಅದ್ಹೇಗೋ ಈ ನಂಜುಂಡಸ್ವಾಮಿ ಕಂಡುಹಿಡಿದುಬಿಟ್ಟ. ನನ್ನ ಪಾಡಿಗೆ ನಾನಿದ್ದೆ. ಮತ್ತೆ ಹಳೆಯದನ್ನೆಲ್ಲ ಕೆದಕಿದವನು ಅವನೇ..."

"ಯಾರವನು? ಈ ನಂಜುಂಡಸ್ವಾಮಿ?"

"ನನ್ನ ಭಾಮೈದ. ನನ್ನ ಹೆಂಡತಿಯ ಅಣ್ಣ..."

"ಅಂದ್ರೇ ನಿ[illegible] ಮದುವೆಯಾಗಿದ್ಯಾ! ನಮಗ್ಯಾರಿಗೂ ತಿಳಿಸ್ದೇನೇ."

"ಕರೆದಿದ್ರೆ ನನ್ನ ಮದುವೆಗೆ ನೀನು ಬರುತ್ತಿದ್ಯಾ?"

"ಮುಖ ಎಲ್ಲಿತ್ತು ನಿನಗೆ! ಮನೆ ಬಿಟ್ಟು ಓಡಿಹೋದವನು..."

"ಹೌದು ಹೋದೆ. ಆಗ ಹಾಗೆ ಅನ್ನಿಸಿತ್ತು. ಹಾಗೇ ಮಾಡಿದೆ. ಈಗ ನಿನ್ನ ಮನೆಗೆ ಬರ್ತೀನಿ ಅಂತ ಕೇಳ್ಕೋತಾ ಇಲ್ಲವಲ್ಲ."

"ಕೇಳ್ಕೊಂಡ್ರೂ ನಾನು ನಿನ್ನನ್ನ ಸೇರಿಸುಲ್ಲ."

"ಅದು ಗೊತ್ತು. ಅದಕ್ಕೆ ನಾನು ಅರ್ಹನೂ ಅಲ್ಲ. ಈಗ ಆ ಮಾತುಗಳು ಸಾಕು.... ನಿನ್ನನ್ನು ಕಂಡೊಡನೆ, ಮಗು ಮೊದಲು 'ಅಮ್ಮಾ' ಎಂದು ಕರೆಯುವಂತೆ ಕರೆದು ನಿನ್ನನ್ನು ನೋಯಿಸಿಬಿಟ್ಟೆ. ಕ್ಷಮಿಸಿಬಿಡು. ನನ್ನ ಹಳೆಯ

ತಪ್ಪುಗಳಿಗೆ ಕ್ಷಮೆ ಇಲ್ಲ. ಪರವಾಗಿಲ್ಲ. ಹೀಗೇ ಹೇಗೋ ಬದುಕ್ತೀನಿ. ಮತ್ತೆಂದೂ ನನ್ನನ್ನು ನೋಡಲು ಬರಬೇಡ. ನಿನಗೆ ಹಿಂಸೆ ಆಗುತ್ತೆ."

ಕೇಶವಾ ಅಮ್ಮನ್ನ ಕರ್ಕೊಂಡು ಹೋಗು. ನೀನೇ ಅದೃಷ್ಟಶಾಲಿ. ಅಮ್ಮನೊಡನೆ ಬಾಳುವ ಸೌಭಾಗ್ಯ ನಿನಗಿದೆ. ಎಲ್ಲರೂ ಅಮ್ಮನ್ನ ಚೆನ್ನಾಗಿ ನೋಡ್ಕೊಳ್ಳಿ" ಅವನು ಎದ್ದು ಕಿಟಕಿಯ ಬಳಿ ಹೋಗಿ ನಿಂತ. ಗೌರಮ್ಮ ಹೆಣ್ಣು ಮಕ್ಕಳೊಂದಿಗೆ ಕುಟೀರದಿಂದ ಹೊರಬಂದಳು. ಕೇಶವ ಮೂರ್ತಿಯ ಬಳಿ ಬಂದ.

"ಅಣ್ಣಾ...." ಕರೆದ. ಮೂರ್ತಿ ತಿರುಗಿದ" ನೀನೂ ನಮ್ಮೊಂದಿಗೆ ಬಂದುಬಿಡು. ಅಮ್ಮನಿಗೆ ಖುಷಿಯಾಗುತ್ತೆ."

"ಇಲ್ಲ... ಕೇಶವಾ.... ನನ್ನಿಂದ ಯಾರಿಗೂ ಸುಖವಿಲ್ಲ. ನಾನು ಪಾಪಿ ನಾನು ಎಲ್ಲಿಗೂ ಬರುಲ್ಲ."

"ಹಾಗೆನ್ನಬೇಡ. ಇಷ್ಟು ವರ್ಷಗಳ ನಂತರ ಮತ್ತೆ ನಾವುಗಳು ಒಟ್ಟಾಗಿರುವ ಅವಕಾಶ ಸಿಕ್ಕಿದೆ. ನಮಗೂ ನಿನ್ನೊಡನೆ ಇರುವ ಭಾಗ್ಯ ಸಿಗುತ್ತದೆ. ದಯವಿಟ್ಟು ಬಾ." ಕೇಶವ ಕೈಮುಗಿದ. ಮೂರ್ತಿ ಆ ಕೈಗೆಳನ್ನು ಹಿಡಿದ.

"ನನಗೆ ಕೈ ಮುಗಿಯುವುದೇನೂ ಬೇಡ. ನಾನು ಅದಕ್ಕೆ ಅರ್ಹನಲ್ಲ. ನಾನು ಯೋಗ್ಯನಾಗಿದ್ದಿದ್ದರೆ, ನಿಮ್ಮೆಲ್ಲರ ಸಂಬಂಧಗಳನ್ನು ತೊರೆದು ಹೀಗೆ, ಅಜ್ಞಾತವಾಗಿ, ಅನಾಥನಂತೆ ಬಾಳುವ ಸ್ಥಿತಿ ಖಂಡಿತಾ ಒದಗುತ್ತಿರಲಿಲ್ಲ. ಇದು ಸ್ವಯಂಕೃತ ಅಪರಾಧ. ಇದು ನಾನೇ ಆಯ್ದುಕೊಂಡ ಬದುಕು. ನನ್ನ ಪಾಡು ನನಗಿರಲಿ. ನೀವುಗಳೆಲ್ಲರೂ ಚೆನ್ನಾಗಿರಿ. ನಿನಗೆ ಹಿರಿಯನಾಗಿ ನಾನು ಇದಷ್ಟನ್ನೇ ಹೇಳುಕ್ಕಾಗೋದು..." ಕೇಶವನ ತಲೆಯ ಮೇಲೆ ಕೈಯನ್ನಿಟ್ಟು ನುಡಿದ.

"ಮಂದಿರದಲ್ಲಿ ನನ್ನ ಹೆಂಡತಿ ಮಕ್ಕಳು ಇದ್ದಾರೆ. ಅವರನ್ನು ನೋಡಿ, ಆಶೀರ್ವಾದ ಮಾಡುವೆಯಂತೆ. ಬಾ."

"ನನ್ನ ಆಶೀರ್ವಾದ! ಅದರಿಂದೇನು ಫಲ? ನಿನ್ನ ಸಂಸಾರವನ್ನೂ ನೋಡುಲ್ಲ ಅಂತ ಹೇಳುವುದು ಸರಿಯಲ್ಲ ಬರ್ತೀನಿ. ಆದರೆ ದೂರದಿಂದ ನೋಡ್ತೀನಿ. ನಾನು ಯಾರೆಂದು ಅವರುಗಳಿಗೆ ತಿಳಿಯದಿರುವುದೇ ಒಳ್ಳೆಯದು." ಇಬ್ಬರೂ ಹೊರಬಂದು ಮಂದಿರದ ಸಮೀಪಕ್ಕೆ ಬಂದರು. ಮುಂದೆ ಮುಂದೆ ನಡೆದಿದ್ದ ಗೌರಮ್ಮ ಹಾಗೂ ಅವಳ ಹೆಣ್ಣು ಮಕ್ಕಳು ಮಂದಿರವನ್ನು ಸೇರಿದ್ದರು.

"ಅದೇ ನನ್ನ ಸಂಸಾರ. ಅಮ್ಮನ ಮಗ್ಗುಲಲ್ಲಿ ನಿಂತಿರುವವಳೇ ನನ್ನ ಪತ್ನಿ. ಅವಳ ಹಿಂದೆ ನಿಂತಿರುವವರೆಲ್ಲ ಮೂರು ಜನ ನನ್ನ ಮಕ್ಕಳು. ಇನ್ನೊಬ್ಬಳು ಸತ್ಯವತಿಯ ಮಗಳು. ಆ ಹುಡುಗ ರಾಜ..."

"ಅವನು ನನ್ನ ಮಗ..." ಕೇಶವ ಗಕ್ಕನೆ ಮೂರ್ತಿಯ ಕಡೆಗೆ ತಿರುಗಿದ. "ಹೌದು, ರಾಜ ನನ್ನ ಮಗ. ಸದ್ಯಕ್ಕೆ ನಿಮ್ಮ ಮನೆಯಲ್ಲಿದ್ದಾನೆ."

"ಅಂದ್ರೇ.... ನಿನಗೆ ಈ ವಿಷಯ ತಿಳಿದಿತ್ತಾ?"

"ಹುಂ. ನಂಜುಂಡಸ್ವಾಮಿ ಹೇಳಿದ. ಅವನು ನನ್ನ ಹೆಂಡತಿಯ ಅಣ್ಣ ಅವನೇ ನನ್ನ ಮಗನನ್ನು ಸಾಕಿ ಬೆಳೆಸಿ ದೊಡ್ಡವನನ್ನಾಗಿ ಮಾಡಿದ್ದು. ಅವನು ನಿನ್ನ ಸ್ನೇಹಿತ ಅಂತ ಮೊದಲು ತಿಳಿದಿರಲಿಲ್ಲ. ಈಚೆಗೆ ತಿಳಿಯಿತು. ಅವನು ನನ್ನ ಮಗನನ್ನು ಚೆನ್ನಾಗಿ ನೋಡಿಕೊಂಡಿದ್ದಾನೆ. ಇನ್ನು ಮುಂದೆ ರಾಜನ ಜವಾಬ್ದಾರಿ ನಿನ್ನದು. ಆದರೆ ನನ್ನ ವಿಷಯ ಅವನಿಗೆ ತಿಳಿಯಬಾರದು.. ಅವನ ಪಾಲಿಗೆ ನಾನು ಬದುಕಿಲ್ಲ. ಅದು ಹಾಗೇ ಇರಲಿ."

"ಇದು ತಪ್ಪಲ್ವಾ?"

"ನಾನು ನನ್ನ ಹೆಂಡತಿಯ ಸಾವಿಗೆ ಕಾರಣನಾದವನು. ಹದಿನಾಲ್ಕು ವರ್ಷ ಜೈಲು ಶಿಕ್ಷೆ ಅನುಭವಿಸಿದವನು. ನನ್ನಂಥ ತಂದೆ, ಅವನ ಭಾಗಕ್ಕೆ ಬದುಕದಿದ್ದರೇ ವಾಸಿ... ಬೆಳೆಸಲಿಲ್ಲ. ಪೋಷಿಸಲಿಲ್ಲ. ಈಗ ನಾನೇ ನಿನ್ನ ತಂದೆ ಎಂದು ಹೇಗೆ ಹೇಳಿಕೊಳ್ಳಲಿ? ತಿಳಿದರೆ ಅವನಿಗೆ ಆಘಾತವಾಗದೇ ಇರುತ್ತದಾ? ಅವನ ಜೀವನ ಹಾಳಾಗುವುದಿಲ್ಲವಾ?"

"ಈ ವಿಷಯ ನಂಜುಂಡಸ್ವಾಮಿಗೆ ಗೊತ್ತಾದದ್ದು ಯಾವಾಗ?"

"ಈಚೆಗೆ ಅದೂ ಈ ಷಣ್ಮುಖಪ್ಪನಿಂದ. ಅದೆಲ್ಲಾ ಒಂದು ಬೇರೆ ಕತೆ ತಿಳಿದುಕೊಂಡು ಏನೂ ಆಗಬೇಕಾಗಿಲ್ಲ. ನಿನ್ನ ಮಕ್ಕಳ ಹೆಸರೇನು? ಏನು ಓದುತ್ತಿದ್ದಾರೆ.?"

"ದೊಡ್ಡವಳು ಮಧುರ.. ಹೈಸ್ಕೂಲಿನ ಎರಡನೇ ವರ್ಷಕ್ಕೆ ಸೇರಿದ್ದಾಳೆ. ಸಂಗೀತ ಕಲಿಯುತ್ತಿದ್ದಾಳೆ. ಎರಡನೆಯವಳು ಮಯೂರ. ಎಂಟನೇ ತರಗತಿಯಲ್ಲಿ ಓದುತ್ತಿದ್ದಾಳೆ. ಡ್ಯಾನ್ಸ್ ಕಲಿಯುತ್ತಿದ್ದಾಳೆ. ಮೂರನೆಯವಳು ಮಂದಾರ ಐದನೇ ಕ್ಲಾಸ್‌ನಲ್ಲಿ ಓದುತ್ತಿದ್ದಾಳೆ."

"ಮಧುರ, ಮಯೂರ, ಮಂದಾರ... ಒಳ್ಳೆಯ ಹೆಸರನ್ನೇ ಇಟ್ಟಿದ್ದೀಯ. ಹೆಸರಿಗೆ ತಕ್ಕಂತೆ ಬೆಳೆಸಿದೀಯ. ದೇವರು ಚೆನ್ನಾಗಿಟ್ಟಿರಲಿ."

"ನನ್ನ ಹೆಂಡತಿ ರಾಧಾ, ಜಾಣೆ. ಅವಳದ್ದೇ ಹೆಸರುಗಳ ಆಯ್ಕೆ. ಮಕ್ಕಳನ್ನೂ ಚೆನ್ನಾಗಿ ಬೆಳೆಸಿದ್ದಾಳೆ. ಜವಾಬ್ದಾರಿ ಎಲ್ಲಾ ಅವಳದ್ದೇ."

"ಗೃಹಿಣಿ ಎಂದರೆ ಹಾಗೇತಾನೇ ಇರಬೇಕು. ನನ್ನ ಮಗನ ಬಗ್ಗೆಯೂ ಸ್ವಲ್ಪ ಕರುಣೆ ಇರಲಿ. ತಂದೆತಾಯಿ ಇಲ್ಲದ ತಬ್ಬಲಿ. ಇನ್ನು ಮುಂದೆ ನೀವೇ ಅವನ ಅಪ್ಪ ಅಮ್ಮ..." ಮೂರ್ತಿ ಅವನ ಹೆಗಲ ಮೇಲೆ ಕೈಯನ್ನಿಟ್ಟ.

"ನೀನು ಚಿಂತಿಸ್ಬೇಡ. ಅವನನ್ನು ನನ್ನ ಸ್ವಂತ ಮಗನಂತೆಯೇ ನೋಡಿಕೊಳ್ತೀನಿ..."

"ಅವನು ಇನ್ನೂ ಚಿಕ್ಕವನು. ಅವನಿಂದ ಏನಾದ್ರೂ ತಪ್ಪು ನಡೆದ್ರೆ, ಅವನನ್ನೂ ಸರಿದಾರಿಗೆ ತರುವ ಜವಾಬ್ದಾರಿ ನಿಮ್ಮದು. ಅವನು ನಿಮ್ಮಮನೇಲೆ ಇದಾನೆ ಅಂತ ತಿಳಿದ ದಿನ ನನಗೆ ನಿರಾಳವಾಯ್ತು."

"ಅದು ನಿನ್ನ ಮನೆಯೂ ಕೂಡಾ..."

"ಸುಮಾರು ಇಪ್ಪತ್ತೈದು ವರ್ಷಗಳ ಹಿಂದೆಯೇ ಆ ಮನೆಯನ್ನು ಬಿಟ್ಟು ಬಂದವನು. ನನಗೆ ಅಲ್ಲಿ ಯಾವ ಅಧಿಕಾರವೂ ಇಲ್ಲ. ಎಲ್ಲಾ ನಿನ್ನದೇ ನಾನು ಬದುಕಿರುವಷ್ಟು ದಿನ ಈ ಆಶ್ರಮದಲ್ಲೇ ಇರುತ್ತೇನೆ. ಇದು ಷಣ್ಮುಖಪ್ಪನ ಕೃಪೆ. ಎರಡು ವರ್ಷಗಳಿಂದ ನಾನು ಇಲ್ಲಿ ಇದೀನಿ. ಈ ಜಾಗ, ಈ ಪರಿಸರ ಒಗ್ಗಿ ಹೋಗಿದೆ. ಮೈಬಗ್ಗಿಸಿ ಕೆಲಸ ಮಾಡ್ತೀನಿ. ಹೊಟ್ಟೆ ತುಂಬಾ ಊಟ ಹಾಕ್ತಾರೆ, ಕಣ್ತುಂಬಾ ನಿದ್ದೆ ಬರುತ್ತೆ. ಮಗನನ್ನು ಮರೆತೇಬಿಟ್ಟಿದ್ದೆ. ಈಗ ನೋಡಿದೆ. ನೆಮ್ಮದಿ ಆಯ್ತು. ಹತ್ತಿರದಿಂದ ನೋಡುವ, ಮೈದಡವಿ, ಮುದ್ದಿಸುವ ಆಸೆ ಇದ್ದರೂ ಅದನ್ನು ಪ್ರಕಟಿಸುವಂತಿಲ್ಲ.

"ಆ ದಿನವೂ ಎಂದಾದರೂ ಬರುತ್ತೆ. ನೀನು ಚಿಂತಿಸಬೇಡ."

"ಬರದಿದ್ದರೇ ಸರಿ. ಅವನ ಭವಿಷ್ಯ ಹಾಳಾಗದಿರಲಿ. ನನ್ನಂಥೋನ ಮಗ ಎಂದು ಅವನು ಹೇಳಿಕೊಂಡು ಹೆಮ್ಮೆಪಡುವಂಥ ಘನಕಾರ್ಯವನ್ನೂ ನಾನು ಮಾಡಿಲ್ಲ. ನನ್ನ ಇತಿಹಾಸ ಅವನಿಗೆ ತಿಳಿಯದಿರಲಿ ಅಂತ ನನ್ನ ಆಸೆ. ಈ ವಿಷಯವನ್ನೂ ನೀನು ಮನೆಯಲ್ಲಿ ಯಾರಿಗೂ ತಿಳಿಸಕೂಡದು. ಇದು ನನ್ನ ಕೋರಿಕೆ."

"ಆಯ್ತು ನಾನು ನಾನಾಗಿಯೇ ಯಾರಿಗೂ ತಿಳಿಸುವುದಿಲ್ಲ. ಇಷ್ಟರ ಮೇಲೆ ಬೇರೆ ಯಾರಿಂದ್ಲಾದ್ರೂ ತಿಳಿದರೆ ಅದಕ್ಕೆ ನಾನು ಜವಾಬ್ದಾರನಲ್ಲ."

"ಆ ಸಮಯ ಬರದಿರಲಿ ಅಂತ ದೇವರಲ್ಲಿ ಪ್ರಾರ್ಥಿಸ್ತೀನಿ." ಕೇಶವ ಮೂರ್ತಿಯನ್ನೇ ವಿಚಿತ್ರವಾಗಿ ನೋಡಿದ.

"ಅಮ್ಮನಿಗೆ ನಿಜ ತಿಳಿದರೆ ಖುಷಿಯಾಗಬಹುದು."

"ಖುಷಿಯಾಗದೇನೂ ಇರಬಹುದು. ಅವಳಿಗೆ ನನ್ನ ಮೇಲೆ ಕೋಪ. ನಾನು ಇಲ್ಲಿದೀನಿ ಅಂತ ತಿಳಿದಿದ್ದರೆ, ಅವಳು ಖಂಡಿತಾ ಬರುತ್ತಿರಲಿಲ್ಲ. ಹಾಗೇ ನನ್ನ ಮಗನ ಬಗ್ಗೆಯೂ ಅವಳಿಗೆ ಕೋಪ ಬರಬಹುದು. ಆಗ ರಾಜನಿಗೆ ಕಷ್ಟವಾಗುತ್ತದೆ. ನಾನಿನ್ನೂ ಬರ್ತೀನಿ..." ಮೂರ್ತಿ ಅಲ್ಲಿಂದ ಹಾಗೇ ಸರಿದು ಪಕ್ಕದ ರಸ್ತೆಯಲ್ಲಿ ತಿರುಗಿ ಮಾಯವಾದ. ಕೇಶವ ಒಂದು ಕ್ಷಣ ಅಲ್ಲಿಯೇ ನಿಂತಿದ್ದು ಮನಸ್ಸನ್ನೂ ಸ್ಥಿಮಿತಕ್ಕೆ ತಂದುಕೊಂಡು ಮಂದಿರಕ್ಕೆ ಬಂದ.

ಎಲ್ಲಿಯೋ ಇದ್ದ ನಂಜುಂಡಸ್ವಾಮಿ, ಷಣ್ಮುಖಪ್ಪ ಪ್ರತ್ಯಕ್ಷರಾದರು. ಕೇಶವ ಮೌನವಾಗಿದ್ದುದನ್ನು ಕಂಡು, ಅವರೂ ಸುಮ್ಮನಾದರು. ಗೌರಮ್ಮನಿಗೆ ಅಲ್ಲಿ ಯಾವ ಆಸಕ್ತಿಯೂ ಇರಲಿಲ್ಲ. ಅವಳ ಮನಸ್ಸು ಕುದಿಯುತ್ತಿತ್ತು. ವಾಪಸ್ಸು ಹೊರಡುವ ಆತುರವನ್ನೂ ವ್ಯಕ್ತಪಡಿಸಿದಳು. ಪ್ರಭಾವತಿ, ಸತ್ಯವತಿಯರು ಕೂಡಾ ಮಂಕಾಗಿದ್ದರು. ರಾಧಾ ಮೌನವಾಗಿದ್ದು, ಎಲ್ಲರನ್ನೂ ಸುಮ್ಮನೆ ನೋಡಿದಳು.

"ಬಿಸಿಬಿಸಿ ಅಡಿಗೆ ಸಿದ್ಧವಾಗ್ತಿದೆ. ಎಲ್ಲರೂ ಊಟ ಮಾಡ್ಕೊಂಡೇ ಹೋಗ್ಬೇಕು. ಸ್ವಾಮೀಜಿಯವರ ಅಪ್ಪಣೆ ಆಗಿದೆ. ಷಣ್ಮುಖಪ್ಪ ನುಡಿದ.

"ಊಟ ಗೀಟ ಏನೂ ಬೇಡ. ಈಗಾಗ್ಲೆ ಹೊತ್ತಾಗಿದೆ. ಹೊರಡ್ತೀನಿ ಅಂತಹೇಳೋ ಕೇಶವಾ."

"ಊರನ್ನು ಸೇರಿ, ಮನೆಯನ್ನು ತಲುಪುವ ಹೊತ್ತಿಗೆ ಊಟದ ಹೊತ್ತು ಮೀರಿರುತ್ತೆ. ನಿಮಗೂ ಫಲಾಹಾರಕ್ಕೆ ಸಿದ್ಧ ಮಾಡ್ಸಿದೀನಿ ತಾಯೀ" ಷಣ್ಮುಖಪ್ಪ ಕೈಮುಗಿದು ವಿನೀತನಾಗಿ ನುಡಿದ.

"ಅಮ್ಮ ರಾತ್ರಿಯ ಹೊತ್ತು ಏನನ್ನೂ ತಗೊಳ್ಳುವುದಿಲ್ಲ. ಮಕ್ಕಳಿಗೆ ಬೇಗ ಹಸಿವಾಗುತ್ತೆ. ಮಕ್ಕಳು ಊಟ ಮಾಡಲಿ" ಸತ್ಯವತಿ ನುಡಿದಳು. ಗೌರಮ್ಮ ಮಗಳನ್ನು ದುರುದುರನೆ ನೋಡಿದಳು.

"ಹಾಲನ್ನು ತಗೋತೀನಿ.... ಹೊಟ್ಟೆ ತುಂಬಾ ಹಾಲನ್ನು ಕುಡಿತೀನಿ. ಇವತ್ತಿಗೆ ನನ್ನ ಸಂಕಟವೆಲ್ಲ ತೀರಿತು."

"ಅಮ್ಮಾ. ಯಾಕಮ್ಮಾ ಹೀಗೆಲ್ಲಾ ಮಾತಾಡ್ತೀಯ... ಎಲ್ರೂ ಏನಂದುಕೊಳ್ತಾರೆ.?"

"ಯಾರು ಏನಾದ್ರೂ ಅಂದ್ಕೊಳ್ಳಲಿ. ನಾನು ಹೊತ್ತು ಹೆತ್ತು ಸಾಕಿ ಸಲಹಿದ ಮಗ ಈ ಅವಸ್ಥೇಲಿ ಇರುವುದನ್ನು ಕಂಡು ನನಗೆ ಹಿಂಸೆ ಆಗ್ತಿದೆ.

ಸಂಕಟ ಆಗ್ತಿದೆ. ಎಲ್ಲಾ ಶಮನವಾಗಲಿ." ಪ್ರಭಾವತಿ ತಂಗಿಯ ಕಡೆ ನೋಡಿ ಕಣ್ಣು ಸಂಜ್ಞೆ ಮಾಡಿದಳು. ಸತ್ಯವತಿ ಮಕ್ಕಳನ್ನು ಕರೆದುಕೊಂಡು ಊಟದ ಮನೆಯ ಕಡೆಗೆ ತೆರಳಿದಳು. ರಾಧಾ ಕೇಶವ ನಿಂತಿದ್ದಲ್ಲಿಗೆ ಬಂದಳು.

"ನಿಮ್ಮಮ್ಮಯಾಕೆ ಹೀಗೆ ಏನೇನೋ ಮಾತಾಡ್ತಿದಾರೆ.?"

"ಅಣ್ಣನ್ನ ನೋಡಿ ಅಮ್ಮನ ಸಂಕಟ ಮರುಕಳಿಸಿದೆ. ಅಷ್ಟೇ."

"ತಾಯಿ ಮಗ ಜಗಳ ಆಡಿದ್ರಾ?"

"ಜಗಳ ಆಡುಕ್ಕೇ ಏನಿದೆ? ಅಮ್ಮನ ದುಃಖ ಅಮ್ಮನಿಗೆ. ಅಣ್ಣ ಜೀವನದಲ್ಲಿ ನೊಂದು, ಇಲ್ಲಿ ಬಂದು ಸೇರಿದಾನೆ. ಈಗ ಅವನಿಗೂ ಯಾರಿಲ್ಲ."

"ಮದುವೆ ಮಾಡಿಕೊಂಡಿರಲಿಲ್ವಾ?"

"ಅದೆಲ್ಲಾ ಸರಿಯಾಗಿ ಗೊತ್ತಿಲ್ಲ. ಏನೋ ಒಂದು ಕತೆ. ನಿಧಾನವಾಗಿ ಹೇಳ್ತೀನಿ. ಈಗ ಆದಷ್ಟು ಬೇಗ ಇಲ್ಲಿಂದ ಹೊರಟುಬಿಡೋಣ. ಆದರೆ ಮಕ್ಕಳಿಗೆ ಯಾವ ವಿಚಾರವನ್ನೂ ಹೇಳೋದು ಬೇಡ."

"ನಿಮ್ಮಮ್ಮನ ಬಾಯನ್ನು ಮುಚ್ಚಿಸೋರು ಯಾರು?"

"ಅವಳ ಹತ್ರ ನಾನು ಮಾತಾಡ್ತೀನಿ. ಮಕ್ಕಳ ಮನಸ್ಸು ಯಾಕೆ ಗೊಂದಲಕ್ಕೊಳಗಾಗಬೇಕು?"

"ಮಕ್ಕಳನ್ನು ಕರ್ಕೊಂಡು ಬರಲೇಬಾರದಾಗಿತ್ತು. ಇಲ್ಲಂತೂ ಏನೂ ಇಲ್ಲ. ಇಂಥ ಆಶ್ರಮಗಳು ಮಕ್ಕಳ ನೋಟಕ್ಕಲ್ಲ."

"ಈಗ ಆಯ್ತಲ್ಲ. ಇನ್ನು ಮುಂದೆ ಕರ್ಕೊಂಡು ಬರದಿದ್ದರಾಯ್ತು."

"ನನ್ಮೇಲ್ಯಾಕೆ ರೇಗ್ತೀರಿ! ಇನ್ನು ಮುಂದೆ ನಾನಂತೂ ಬರುಲ್ಲ."

"ಬಹುಶಃ ಇನ್ನ್ಯಾರೂ ಇಲ್ಲಿಗೆ ಬರುಲ್ಲ" ತನ್ನಲ್ಲೇ ಎಂಬಂತೆ ಹೇಳಿಕೊಂಡ. ರಾಧಾ ಮಾತಾಡಲಿಲ್ಲ. ಅವಳಿಗೆ ಕೋಪ ಬಂದಿತ್ತು.

ನಂಜುಂಡಸ್ವಾಮಿ, ಒಂದು ದೊಡ್ಡ ಲೋಟದಲ್ಲಿ ಹದವಾದ ಬಾದಾಮಿ ಹಾಲನ್ನು ತಂದು ಗೌರಮ್ಮನ ಮುಂದಿಟ್ಟ. ಗೌರಮ್ಮ ಇತ್ತ ತಿರುಗಲಿಲ್ಲ. "ಅಲ್ಲಿ ಬಡಿಸ್ತಿದಾರೆ. ನೀವು ಮೂವರೂ ಹೋಗಿ ಊಟ ಮಾಡ್ಕೊಂಡು ಬನ್ನಿ. ನಾನು ಇಲ್ಲಿ ಅಮ್ಮನ ಬಳಿ ಇರ್ತೀನಿ" ಪ್ರಭಾವತಿ ತಮ್ಮನ ಕಡೆ ನೋಡಿದಳು. ಕೇಶವ ರಾಧಾಳ ಕಡೆ ನೋಡಿದ. ನಂಜುಂಡಸ್ವಾಮಿ ಮತ್ತೆ ನುಡಿದ.

"ನಾನು ಇವರ ಹತ್ರ ಸ್ವಲ್ಪ ಮಾತನಾಡೋದಿದೆ. ನೀವುಗಳು ಹೋಗಿ."

"ನನಗೆ ಯಾರ ಹತ್ರವೂ ಮಾತು ಬೇಕಿಲ್ಲ. ನಾನು ಒಬ್ಬಳೇ ಕೂತಿರ್ತೀನಿ. ನೀವುಗಳು ಹೋಗಿ ತಿಂದು ಬನ್ನಿ" ಅವರುಗಳು ಅಲ್ಲಿಂದ ಸರಿದರು.

"ಅಮ್ಮಾ ನೀವು ತುಂಬಾ ಬೇಸರಗೊಂಡಿರುವಂತಿದೆ. ನಿಮ್ಮ ಮಗನ ಭೇಟಿ ಮಾಡಿಸಲು ನಿಮ್ಮನ್ನು ಇಲ್ಲಿಗೆ ಕರೆತಂದದ್ದು ಸರಿ ಹೋಗಲಿಲ್ಲ. ನಿಮ್ಮ ಮಗನಿಗೆ ನಿಮ್ಮನ್ನು ನೋಡಿ ಕ್ಷಮಾಪಣೆ ಕೇಳುವುದಿತ್ತು. ಅದಕ್ಕೇ ಈ ವ್ಯವಸ್ಥೆ ಮಾಡಿದೆ. ತಪ್ಪು ನನ್ನದು ನನ್ನನ್ನು ಕ್ಷಮಿಸಿ."

"ಈ ಬೂಟಾಟಿಕೆಯ ಮಾತುಗಳು ಸಾಕು. ನಾವುಗಳು ಬೇಡ ಅಂತ ಅವನಿಗೆ ಅನ್ನಿಸಿದಾಗ ನಮ್ಮ ಮನೆ ಬಿಟ್ಟು ಹೋದ. ಈಗ ನೋಡ್ಬೇಕು ಅಂತ ಅನ್ನಿಸಿದಾಗ ಈ ಉಪಾಯ ಹೂಡಿದ. ಈಗ ನನ್ನಿಂದೇನಾಗಬೇಕಂತೆ? ಹೀಗೆ ಅಂತ ಗೊತ್ತಿದ್ದಿದ್ರೆ ನಾನು ಖಂಡಿತಾ ಬರುತ್ತಿರಲಿಲ್ಲ."

"ಹೇಳಿದ್ನಲ್ಲ ತಾಯೀ ನನ್ನಿಂದ ತಪ್ಪಾಯಿತು. ನೀವೂ ನಿಮ್ಮ ಮಗನ ತಪ್ಪನ್ನು ಮನಸ್ನಲ್ಲೇ ಇಟ್ಕೊಂಡು ಕೊರಗೋದು ಯಾಕೆ ಅಂತ? ಇನ್ನು ಮುಂದೆ ಅವರು ಯಾವ ತಪ್ಪನ್ನು ಮಾಡಲು ಸಾಧ್ಯವಿಲ್ಲ."

"ಅವನು ಹಿಂದೆ ಮಾಡಿದ ತಪ್ಪನ್ನು ನಾನು ಮರೆಯುವುದಿಲ್ಲ. ಅವನನ್ನು ಕ್ಷಮಿಸುವುದಿಲ್ಲ. ಇದೇ ನಾನು ಅವನಿಗೆ ಕೊಡುವ ಶಿಕ್ಷೆ."

"ನಿಮ್ಮನ್ನು ನೋಡಿಯೇ ಅವರಿಗೆ ಕ್ಷಮೆ ಸಿಕ್ಕಿದೆ. ಅಷ್ಟು ಸಾಕು."

"ಇಷ್ಟೆಲ್ಲಾ ಅವನ ಪರ ವಹಿಸ್ಕೊಂಡು ಮಾತಾಡ್ತೀರಲ್ಲ ನೀವು ಯಾರು? ನಿಮಗೂ ಅವನಿಗೂ ಏನು ನೆಂಟಸ್ತಿಕೆ.?"

"ಅವರು ನನ್ನ ಭಾವ... ನನ್ನ ಸ್ವಂತ ತಂಗಿಯ ಗಂಡ."

"ಏನು? ಮೂರ್ತಿ ನಿನ್ನ ಭಾವನೇ... ಹೆಂಡ್ತೀನ ಬಿಟ್ಟು ಬಂದು ಇಲ್ಲಿ ಈ ಆಶ್ರಮದಲ್ಲಿ ಯಾಕೆ ಅಡಗಿಕೊಂಡಿದಾನೆ? ನೀವ್ಯಾಕೆ ಸುಮ್ಮನಿದೀರಿ! ನಾನು ಈಗ ಅವನಿಗೆ ತಿಳುವಳಿಕೆ ಹೇಳ್ಬೇಕು ಅಂತ ಮಾತ್ರ ಕೇಳ್ಬೇಡಿ. ಆ ಕಾಲ ಎಂದೋ ಹೋಯ್ತು. ಮತ್ತೆ ಬರುಲ್ಲ."

"ಇಲ್ಲ ತಾಯೀ... ಆ ಗಳಿಗೆಯೇ ಬರುವುದಿಲ್ಲ. ನನ್ನ ತಂಗಿ ಈಗ ಈ ಲೋಕದಲ್ಲಿಯೇ ಇಲ್ಲ. ಅವಳು ಸತ್ತು ಹದಿನಾರು ವರ್ಷಗಳಾದವು"

"ಓ ಹೆಂಡತಿ ಸತ್ತಮೇಲೆ ವಿರಕ್ತಿ ಮೂಡಿರಬೇಕು. ಅವನನ್ನು ಮತ್ತೆ ಸಂಸಾರಕ್ಕೆ ಎಳೆಯುವ ಆಸೆಯಲ್ಲಿದೀರಾ? ಏನು ಬೇಕಾದ್ರೂ ಮಾಡ್ಕೊಳ್ಳಿ. ನೀವುಂಟು. ನಿಮ್ಮ ಭಾವನುಂಟು. ನನ್ನನ್ನ ಏನೂ ಕೇಳ್ಬೇಡಿ. ನನಗೆ ಏನೂ ಹೇಳ್ಬೇಡಿ."

"ಇಲ್ಲ ತಾಯೀ. ಹಾಗೆಲ್ಲಾ ಯಾವ ಆಲೋಚನೆಯೂ ಇಲ್ಲ. ಒಂದು ವೇಳೆ ಇದ್ದರೂ, ಹದಿನಾಲ್ಕು ವರ್ಷ ಜೈಲು ಶಿಕ್ಷೆಯನ್ನು ಅನುಭವಿಸಿರುವ ಅಪರಾಧಿಗೆ ಯಾರು ಹೆಣ್ಣು ಕೊಡ್ತಾರೆ ನೀವೇ ಹೇಳಿ."

"ಹುಂ. ಅದೇನೋ... ಜೈಲುವಾಸ, ಶಿಕ್ಷೆ ಅಂತ ಹೇಳ್ದ. ಏನಾದ್ರೂ ಮಾಡ್ಕೊಳ್ಳಲಿ ನನಗ್ಯಾಕೆ ಬಿಡಿ."

"ಹೌದು. ಈಗ ಆ ಹಳೆಯ ವಿಷಯ ಯಾರಿಗೂ ಬೇಡ. ನನಗೂ ಬೇಡ. ನಾನೂ ನನ್ನ ತಂಗಿಯನ್ನು ಮರೆಯಲು ಪ್ರಯತ್ನಿಸುತ್ತಿದ್ದೇನೆ. ಆದರೆ ಅದು ಅಷ್ಟು ಸುಲಭವಲ್ಲ. ನನ್ನ ತಂಗಿಯನ್ನು ಕೊಂದವರು ನಿಮ್ಮ ಮಗ ನನ್ನ ತಂಗಿಗೆ ಹುಟ್ಟಿದ ಮಗನನ್ನು ನಾನು ಸಾಕಿ ಬೆಳೆಸಿದ್ದೇನೆ. ನನ್ನ ಮನೆಯಲ್ಲಿಟ್ಟುಕೊಂಡು ಕಾಪಾಡಿದ್ದೇನೆ. ನಾನೂ ನಿಮ್ಮಹಾಗೇ ಯೋಚಿಸಿದ್ದರೆ, ನಿಮ್ಮ ಮೊಮ್ಮಗ ಬೀದಿಪಾಲಾಗುತ್ತಿದ್ದ. ಅನಾಥನಾಗಿರುತ್ತಿದ್ದ. ಆದರೆ ನಾನು ಹಾಗೆ ಮಾಡಲಿಲ್ಲ. ನಿಮ್ಮ ಮಗನ ಮಗನನ್ನು ನಾನು ಜೋಪಾನ ಮಾಡಿದ್ದೇನೆ."

"ನೀನು ನಿನ್ನ ತಂಗಿಗಾಗಿ ಮಾಡಿದೆಯಪ್ಪಾ. ಅದರಲ್ಲಿ ಯಾವ ಹೆಚ್ಚುಗಾರಿಕೆ? ಆದರೆ..."

"ನಿಮ್ಮ ಮೊಮ್ಮಗನ್ನ ಒಮ್ಮೆ ನೋಡ್ಬೇಕು ಅಂತ ಅನ್ನಿಸುಲ್ವಾ ತಾಯೀ ನಿಮಗೆ?"

"ಇಲ್ಲ. ನನಗೆ ಏನೂ ಅನ್ನಿಸುಲ್ಲ. ನನಗೆ ಯಾವ ಸಂಬಂಧವೂ ಬೇಡ.... ಈಗ ಈ ಮಾತುಗಳು ಸಾಕು. ಕೇಶವನ್ನ ಕರೀರಿ, ನಾವು ಇಲ್ಲಿಂದ ಹೊರಟರೆ ಸಾಕಾಗಿದೆ." ನಂಜುಂಡಸ್ವಾಮಿ ಪೆಚ್ಚಾದ. ಹಳೆಯ ಕಾಲದ, ಹೆಂಗಸು ಎಲ್ಲಾ ಮರೆತು ಮಗನನ್ನು ಮೊಮ್ಮಗನನ್ನು ಸ್ವೀಕರಿಸುವಳೆಂದುಕೊಂಡಿದ್ದು ತಪ್ಪಾಯಿತೇನೋ ಅಂತ ಅನ್ನಿಸಿತು. ಮಗನ ಮೇಲೆ ವ್ಯಾಮೋಹವಿಲ್ಲದಿರುವಾಗ ಮೊಮ್ಮಗನನ್ನು ಹೇಗೆ ಒಪ್ಪಿಕೊಳ್ಳುತ್ತಾಳೆ! ಈಕೆಯೇ ಹೀಗಾಡಿದರೆ, ಕೇಶವನೂ ಈ ಸಂಬಂಧವನ್ನು ತಪ್ಪಿಸಿಕೊಳ್ಳದೇ ಇರುವನೇ? ಈಗ ತಾನು ಸುಮ್ಮನಿದ್ದುಬಿಟ್ಟರೇ, ಇದು ಹೀಗೇ ಮುಂದುವರೆಯುತ್ತದೆ. ಹಾಗಾಗಬಾರದು ಎಂದುಕೊಂಡು ಗೌರಮ್ಮನ ಕಾಲುಗಳನ್ನು ಹಿಡಿದುಕೊಂಡ. ಅವಳು ತಬ್ಬಿಬ್ಬಾದಳು.

"ನನ್ನ ತಪ್ಪುಗಳನ್ನು ಕ್ಷಮಿಸಿ. ನಾನು ಬಡವ ನನ್ನ ಸಂಸಾರವನ್ನೇ ನನ್ನಿಂದ ನಿಭಾಯಿಸಲು ಆಗುತ್ತಿಲ್ಲ. ನನ್ನ ತಂಗಿಗಾಗಿ, ಅವಳ ಮದುವೆಗಾಗಿ ಅವಳ

ಮಗನಿಗಾಗಿ ನಾನು ಎಷ್ಟೋ ತ್ಯಾಗವನ್ನು ಮಾಡಿದ್ದೇನೆ. ಈಗ ನಿಮ್ಮ ಮೊಮ್ಮಗ ನನಗಿಂತ ಎತ್ತರಕ್ಕೆ ಬೆಳೆದು ನಿಂತಿದ್ದಾನೆ. ಅವನ ಭವಿಷ್ಯವನ್ನು ರೂಪಿಸಬೇಕಾಗಿದೆ. ಅದು ನಿಮ್ಮಿಂದ ಮಾತ್ರ ಸಾಧ್ಯ. ದಯವಿಟ್ಟು ಅವನ ಭವಿಷ್ಯವನ್ನು ಹಾಳು ಮಾಡಬೇಡಿ. ನಿಮ್ಮ ಮಗನ ಪರವಾಗಿ ನಾನು ಕ್ಷಮೆ ಕೇಳ್ತೀನಿ. ಅವರು ಮಾಡಿದ ತಪ್ಪಿಗೆ, ಈ ಹುಡುಗನ್ಯಾಕೆ ಶಿಕ್ಷೆಯನ್ನು ಅನುಭವಿಸಬೇಕು?"

"ಬಿಡಿ ನನ್ನ ಕಾಲುಗಳನ್ನು ಯಾರ ಭವಿಷ್ಯವೂ ನನ್ನಿಂದ ಹಾಳಾಗುವುದಿಲ್ಲ. ಎಲ್ಲಾ ಅವರವರ ಕೈಯಲ್ಲಿದೆ. ನೀವ್ಯಾಕೆ ಹೀಗೆ ಅತಿಯಾಗಿ ಆಡ್ತಿದೀರೋ ನನಗೆ ಅರ್ಥವಾಗ್ತಿಲ್ಲ. ನಿಮ್ಮ ತಂಗಿಯ ಮದುವೆಯ ಸಮಯದಲ್ಲಿ ನಾವುಗಳು ಇದೀವೋ ಇಲ್ಲವೋ ಅಂತ ವಿಚಾರಿಸಿದವರು ನೀವು.... ಅದೇನು ಈಗ? ಈಗ ಸಂಬಂಧಗಳನ್ನು ಹುಡುಕಿಕೊಂಡು ಮಾತಾಡ್ತೀದರಲ್ಲ. ನಿಮಗೆ ಹೀನಾಯ ಅಂತ ಅನ್ನಿಸ್ತಿಲ್ಲವೇ?" ನಂಜುಂಡಸ್ವಾಮಿ ಎದ್ದು ಕೈಕಟ್ಟಿನಿಂತ.

"ಅನ್ನಿಸ್ತಿದೆ... ಹೃದಯಾನ ಒಂದು ಹಿಡಿ ಮಾಡಿಕೊಂಡು ಮಾತಾಡ್ತಿದೀನಿ. ಈ ಹಿಂದೆಯೂ, ನಿಮ್ಮ ಮಗನ ಸ್ನೇಹವನ್ನು ಮಾಡಿದ ನನ್ನ ತಂಗಿ, ಮದುವೆಗೆ ಮೊದಲೇ ಗರ್ಭಿಣಿಯಾಗಿದ್ದಾಗ, ಈ ದೇಹವನ್ನು ಒಂದು ಹಿಡಿ ಮಾಡಿಕೊಂಡು ನಿಮ್ಮ ಮಗನೊಡನೆ ಮಾತನಾಡಿ, ಮದುವೆಗೆ ಒಪ್ಪಿಸಿದೆ. ನನ್ನ ತಂಗಿಯನ್ನು ಸಂದೇಹದಿಂದ ನೋಡಿ, ಅವಳೊಡನೆ ಜಗಳವಾಡಿ ಅವಳನ್ನು ಹೊಡೆದು ಅವಳಸಾವಿಗೆ ಕಾರಣನಾದವನು ನಿಮ್ಮ ಮಗ. ಒಂದು ಕಡೆ ತಂಗಿ ಹೆಣವಾಗಿ ಬಿದ್ದಿರುವಾಗ, ಪೋಲೀಸರು ಮೂರ್ತಿಯನ್ನು ಎಳೆದುಕೊಂಡು ಹೋಗುವಾಗ ನನ್ನ ಸ್ಥಿತಿ ಹೇಗಿತ್ತು ಅಂತ ಹೇಗೆ ಹೇಳಲಿ? ಇದ್ಯಾವುದರ ಅರಿವಿಲ್ಲದ ಮಗುವನ್ನೂ ನಾನು ಎತ್ತಿಕೊಂಡು ಬಂದು ಸಾಕಿದೆ. ನನ್ನ ತಂಗಿ ಮಣ್ಣಾದಳು. ಅವಳ ಗಂಡ ಜೈಲು ಸೇರಿದ. ನನ್ನ ಕಷ್ಟವನ್ನು ಕೇಳುವವರ್ಯಾರು? ಆದರೆ ನಾನು ಸಂಬಂಧಗಳನ್ನು ಮರೆಯಲಿಲ್ಲ. ಆವೇಶದಲ್ಲಿ ದುರಂತಕ್ಕೆ ಕಾರಣನಾಗಿದ್ದ ಮೂರ್ತಿ ಪಶ್ಚಾತ್ತಾಪದಿಂದ ಹುಚ್ಚನಾಗಿದ್ದ. ಆದರೆ ಕೊಲೆಗಾರನ ಮಗನೆಂದು ಜನ ತನ್ನ ಮಗನನ್ನು ಗುರುತಿಸದಿರಲಿ ಎಂದು ತಾನು ಅಜ್ಞಾತವಾಗಿಯೇ ಉಳಿದುಕೊಂಡ. ಈಗಲೂ ಈ ಹುಡುಗನಿಗೆ ತನ್ನ ತಂದೆ ಬದುಕಿದ್ದಾನೆಂದು ತಿಳಿದಿಲ್ಲ..."

"ಆ ಹುಡುಗ ಎಲ್ಲಿ ಕರೆಸಿ. ನಾನು ಅವನಿಗೆ ನಿಜ ಹೇಳ್ತೀನಿ..."

"ನೀವೆಂಥಾ ಹೆಂಗಸು! ತಂದೆ ತಾಯಿಯಿಲ್ಲದ ಹುಡುಗ... ಅವನ ಮನಸ್ಸು ಬಹಳ ಸೂಕ್ಷ್ಮ. ಈ ವಿಷಯ ತಿಳಿದರೆ ಅವನ ಹೃದಯ ಒಡೆಯಬಹುದು. ಮನಸ್ಸಿಗೆ ಆಘಾತವಾಗಬಹುದು. ಬೇಸರಹುಟ್ಟಿ ಆತ್ಮಹತ್ಯೆ ಮಾಡಿಕೊಳ್ಳಬಹುದು."

"ಸರಿ. ಹೀಗೇ ಮುಂದುವರೆಯಲಿ ಬಿಡಿ."

"ಇಲ್ಲ. ಈಗ ನನ್ನ ಸಂಸಾರ ಬೆಳೆದಿದೆ. ಮಕ್ಕಳು ದೊಡ್ಡವರಾಗಿದಾರೆ. ನನ್ನ ಹೆಂಡತಿ, ಮಕ್ಕಳ ಕಡೆಗೆ.... ಈ ಹುಡುಗನನ್ನು ಎಲ್ಲರೂ ಹೀನಾಯವಾಗಿ ಕಾಣ್ತಾರೆ. ನನ್ನ ಹೊಟ್ಟೆ ಕಲಕಿ ಹೋಗುತ್ತದೆ."

"ಇದನ್ನೆಲ್ಲ ನಿಮ್ಮ ಭಾವಂಗೆ ಹೇಳಿ. ಸನ್ಯಾಸಿಯ ವೇಷ ತೊಟ್ಟುಕೊಂಡು ಕೂತರೆ ನಡೆಯುಲ್ಲ. ದುಡಿದು ಸಂಪಾದಿಸಲಿ. ಮಗನಿಗೆ ಕೊಡಲಿ."

"ಈ ವಯಸ್ನಲ್ಲಿ ನಿಮ್ಮ ಮಗನಿಗೆ ಯಾರು ಕೆಲಸ ಕೊಡ್ತಾರೆ? ಅಲ್ಲದೆ ಕೊಲೆಗಾರನೆಂಬ ಪಟ್ಟವೂ ಇದೆ. ದಿಕ್ಕು ತಪ್ಪಿದವರಾಗಿ, ಇಲ್ಲಿ ಬಂದು ಸೇರಿಕೊಂಡಿದಾರೆ. ಅವರಿಂದ ಯಾವ ಪ್ರಯೋಜನವೂ ಇಲ್ಲ. ಈಗ ನೀವೇ ಏನಾದರೂ ದಾರಿ ಮಾಡಬೇಕು..."

"ಇದರಿಂದ ನಿಮಗಾಗುವ ಲಾಭ?"

"ಲಾಭ? ನನಗೇನು ಲಾಭ? ಮನಸ್ಸಿಗೆ ನಿರಾಳವಾಗುತ್ತೆ ಅಷ್ಟೆ."

"ಬರೀ ಇವಿಷ್ಟೇ ಅಲ್ಲ. ನಿಮ್ಮ ಉದ್ದೇಶ ಬೇರೆಯೇ ಇದೆ ಅಂತ ನನಗನ್ನಿಸ್ತಿದೆ."

"ದಯವಿಟ್ಟು ಅಪಾರ್ಥ ಮಾಡ್ಕೋಬೇಡಿ. ದೇವರಾಣೆ. ಆ ಹುಡುಗನ ಭವಿಷ್ಯ ಉಜ್ವಲವಾಗಿರಲಿ ಅನ್ನೋದಷ್ಟೆ ನನ್ನ ಆಸೆ. ಅದು ತಪ್ಪು ಅಂತ ಅಂತೀರಾ? ಅಲ್ಲದೇ ನಾನು ಬೇರೆ ಯಾರನ್ನೋ ಏನೂ ಕೇಳ್ತಿಲ್ಲ. ಅಥವಾ ಯಾರಿಗೋ ಕೇಳ್ತಿಲ್ಲ. ಅವನು ಬಾಧ್ಯಸ್ಥ. ಅವನಿಗಾಗಿ ನಿಮ್ಮ ಹೃದಯ ಮಿಡಿಯದಿದ್ದರೆ ಅದು ಹೃದಯವೇ ಅಲ್ಲ. ಕಲ್ಲು ಬಂಡೆ..." ನಂಜುಂಡಸ್ವಾಮಿ ಆವೇಶದಲ್ಲಿ ನುಡಿದುಬಿಟ್ಟ. ಗೌರಮ್ಮ ರೋಷದಿಂದ ಕಣ್ಣುಗಳನ್ನರಳಿಸಿದಳು.

"ಹೌದು. ನಾನು ಕಲ್ಲುಬಂಡೆ. ನನಗೆ ಹೃದಯವಿಲ್ಲ ಅಂತ ತಿಳೀತಲ್ಲ. ಇನ್ನೂ ಮಾತು ಸಾಕು." ಎನ್ನುತ್ತಾ ಬಾಗಿಲಿನಿಂದಾಚೆ ಬಂದು ನಿಂತಳು. ಹೊರಗೆ ಕತ್ತಲು ಕವಿದಿತ್ತು. ತಣ್ಣನೆ ಗಾಳಿಯೂ ಬೀಸುತ್ತಿತ್ತು. ವಾತಾವರಣ

ಮೌನವಾಗಿತ್ತು. ಅಲ್ಲಿದ್ದ ಕಲ್ಲುಬೆಂಚಿನ ಮೇಲೆ ಕುಳಿತಳು. ಕಣ್ಣುಗಳನ್ನು ಮುಚ್ಚಿದಳು.

* * * *

"ಅಮ್ಮಾ..." ಪ್ರಭಾವತಿ ಬಂದು ಮುಟ್ಟಿ ಎಬ್ಬಿಸಿದಾಗ ಬೆಚ್ಚಿದಳು. ಗಾಬರಿಯಿಂದ ನೋಡಿದಳು.

"ಯಾಕಮ್ಮ ಇಲ್ಲಿ ಕತ್ತಲೇಲಿ ಒಬ್ಬಳೇ ಕೂತಿದೀಯ! ನಿದ್ದೆ ಬಂದಿತ್ತಾ?"

"ಇಲ್ಲ ಎಲ್ಲಿ ಹೋಗಿದ್ರಿ ನೀವೆಲ್ಲಾ ಇಷ್ಟು ಹೊತ್ತು? ಕೇಶವಂಗೆ ಹೇಳು ಮನೆಗೆ ಹೊರಡೋಣ."

"ಊಟ ತುಂಬಾ ಚೆನ್ನಾಗಿತ್ತು. ಬಿಸಿಬಿಸಿಯಾಗಿ ರುಚಿಯಾಗಿತ್ತು" ಸತ್ಯವತಿ ಬಾಯಿ ಚಪ್ಪರಿಸುತ್ತಾ ನುಡಿದಳು.

"ಸರಿ ಹೊಟ್ಟೆ ತುಂಬಾ ಉಂಡ್ಯೋ ಇಲ್ವೋ ಎಂದೂ ಕಂಡಿಲ್ಲದವಳ ಥರಾ!" ಮಗಳನ್ನು ಮೂದಲಿಸಿದಳು.

"ಹುಂ.... ನಾನಂತೂ ಸಂಕೋಚ ಬಿಟ್ಟು ಕೇಳಿ ಕೇಳಿ ಹಾಕಿಸ್ಕೊಂಡು ತಿಂದೆ. ನಾಲಿಗೆ ಕೆಟ್ಟುಹೋಗಿತ್ತು. ಹಾಲು, ಮೊಸರು, ಬೆಣ್ಣೆ ತುಪ್ಪಾ ದಂಡಿಯಾಗಿ ಬಡಿಸ್ತಾರೆ."

"ಇಲ್ಲೇ ಇದ್ಬಿಡು, ನೀನೂ, ನಿನ್ನಣ್ಣಂಗೆ ಜೊತೆಯಾಗುತ್ತೆ" ಬಾಯಿ ತಪ್ಪಿ ನುಡಿದವಳಂತೆ ನಾಲಿಗೆಯನ್ನು ಕಚ್ಚಿಕೊಂಡಳು. ಮಾತುಗಳು ಅಲ್ಲಿಗೇ ನಿಂತವು.

"ಎಲ್ಲಾ ಬನ್ನಿ." ಕೇಶವ ಅಲ್ಲಿಂದಲೇ ಕರೆದ. ಎಲ್ಲರೂ ವ್ಯಾನಿನ ಬಳಿಗೆ ಬಂದರು. ಷಣ್ಮುಖಪ್ಪ ಎಲ್ಲರನ್ನೂ ಬೀಳ್ಕೊಟ್ಟ. ನಂಜುಂಡಸ್ವಾಮಿ ಎಲ್ಲರಿಗೂ ಕೈಮುಗಿದ. ಎಲ್ಲರೂ ವ್ಯಾನನ್ನು ಹತ್ತಿದರು. ಗಾಡಿಯ ಬೆಳಕಿನಲ್ಲಿ ಅನತಿ ದೂರದಲ್ಲಿ ನಿಂತಿದ್ದ ಮೂರ್ತಿ ಕಂಡ. ಅವನು ವ್ಯಾನಿನ ಕಡೆ ನೋಡುತ್ತಿದ್ದ. ಗೌರಮ್ಮನಿಗೆ ಉಸಿರು ಕಟ್ಟಿದಂತಾಯಿತು. ಇತ್ತ ಕಡೆ ತಿರುಗಿದಳು. ಕಿಟಕಿಯಿಂದ ಹೊರಗೆ ಇಣುಕಿ, ಕೇಶವ ಕೈಯಾಡಿಸಿದ. ಮೂರ್ತಿಯೂ ಕೈಬೀಸಿದ. ವ್ಯಾನು ಗೇಟಿನಿಂದ ಹೊರಬಂದು ರಸ್ತೆಗೆ ಇಳಿಯಿತು.

* * * *

ಕತ್ತಲಾಗಿದ್ದುದರಿಂದಲೋ, ಹೊಟ್ಟೆ ತುಂಬಾ ಉಂಡಿದ್ದರಿಂದಲೋ ಎಲ್ಲರಿಗೂ ನಿದ್ದೆಯ ಮಂಪರು. ಯಾರಿಗೂ ಮಾತುಕತೆಯಾಡುವ

ಉತ್ಸಾಹವಿಲ್ಲ. ಗೌರಮ್ಮನ ಮನ ಮಾತ್ರ ಕದಡಿದ ಕೊಳ. ಇಷ್ಟು ವರ್ಷಗಳಲ್ಲಿ ಮೂರ್ತಿಯನ್ನು ನೆನೆಯದ ದಿನವಿಲ್ಲ. ಆದರೂ ಮತ್ತೆ ನೋಡುವೆನೆಂದುಕೊಂಡಿರಲಿಲ್ಲ. ಸಂಬಂಧವೇ ಕಡಿದುಹೋಗಿತ್ತು. ಈಗ ಮತ್ತೆ ಸಂಬಂಧದ ಎಳೆಯನ್ನು ಎಳೆದು, ನೆಮ್ಮದಿಯನ್ನೇ ಹಾಳು ಮಾಡಿದನೇ. ಇಷ್ಟು ವರ್ಷಗಳು ನೆನಪಿನಲ್ಲಿ ಕಾಡಿದ್ದಲ್ಲದೇ, ಈಗ ಸತಾಯಿಸಲು ಮತ್ತೆ ಬಂದಿರುವನೆ?

ಮೂರ್ತಿ ಗೌರಮ್ಮನಿಗೆ ಚೊಚ್ಚಲ ಮಗ. ಅವನು ಹುಟ್ಟಿದಾಗ ಅವಳಿಗೆ ಕೇವಲ ಹದಿನಾರು ವರ್ಷ. ಅವನ ನಂತರ ನಾಲ್ಕೂವರೆ ವರ್ಷಗಳವರೆಗೆ ದಂಪತಿಗಳಿಗೆ ಮತ್ತೆ ಮಕ್ಕಳಾಗಿರಲಿಲ್ಲ. ಮೊದಲ ಮಗು, ಗಂಡು ಮಗು, ಒಬ್ಬನೇ ಬೇರೆ.... ತಾಯಿಯ ಮುದ್ದು ಎಲ್ಲಾ ಸೇರಿ, ಹಠ ಮೊಂಡುತನ ಹೆಚ್ಚಾಗಿತ್ತು. ಗೌರಮ್ಮ ಯಾವುದೇ ಕಾರಣಕ್ಕೂ, ಬೇಸರಿಸುತ್ತಿರಲಿಲ್ಲ. ಬೈಯುತ್ತಿರಲಿಲ್ಲ. ಹೊಡೆಯುತ್ತಿರಲಿಲ್ಲ. ಗಂಡನಾಗಲೀ, ಅತ್ತೆಮಾವನಾಗಲೀ ಸಿಡುಕಿದರೂ ಗೌರಮ್ಮನಿಗೆ ಸಹಿಸುತ್ತಿರಲಿಲ್ಲ. ಅಷ್ಟು ಮುಚ್ಚಟೆಯ ಮಗನಾಗಿದ್ದ ಐದು ವರ್ಷಗಳ ಅಂತರದಲ್ಲಿ ಹುಟ್ಟಿದವಳು ಪ್ರಭಾವತಿ. ಅವಳು ಹುಟ್ಟಿ, ತಾಯಿಯಿಂದ ತಾನು ದೂರವಿರಬೇಕಾದಾಗ, ಮೂರ್ತಿ ಸಮಸ್ಯೆಯ ಮಗುವಾದ. ಹೊರಹೊರಗೇ ಆಟಪಾಠಗಳಲ್ಲಿ ಕಾಲ ಕಳೆಯತೊಡಗಿದ. ತಾಯಿ ಹತ್ತಿರಕ್ಕೆ ಕರೆದರೂ ಬರುತ್ತಿರಲಿಲ್ಲ. ತಾಯಿಗೆ ಕಾಣದಂತೆ, ತಂಗಿಯನ್ನು ಜುಗುಟಿ, ಪರಚಿ, ಅಳಿಸಿ ಸಂತಸಗೊಳ್ಳುತ್ತಿದ್ದ. ಚಿಕ್ಕ ಮಗುವಿಗೆ ಹಿಂಸೆ ಮಾಡುತ್ತಾನೆಂದು, ಗೌರಮ್ಮ ಅವನನ್ನು ತಂಗಿಯ ಮನೆಯಲ್ಲಿಬಿಟ್ಟಳು. ತಂಗಿಗೆ ಮಕ್ಕಳಿರಲಿಲ್ಲ. ಅಲ್ಲಿ ಅವನದ್ದೇ ಸಾಮ್ರಾಜ್ಯ. ತನ್ನ ವಯಸ್ಸಿನ ಹುಡುಗರನ್ನೂ ಕಟ್ಟಿಕೊಂಡು ಬೀದಿಬೀದಿ ಅಲೆಯುತ್ತಿದ್ದ. ನಂತರ ಎರಡು ವರ್ಷಗಳ ಬಳಿಕ ಹುಟ್ಟಿದವಳು ಸತ್ಯವತಿ. ಈ ಸಮಯದಲ್ಲಿ ತಂಗಿ ಸಂಸಾರ ದೂರದ ಊರಿಗೆ ವರ್ಗವಾಗಿ ಹೋಗಬೇಕಾಗಿ ಬಂತು. ಆ ಸಮಯದಲ್ಲಿ ಮೂರ್ತಿಯನ್ನು ಮತ್ತೆ ತಮ್ಮ ಮನೆಗೆ ಕರೆತಂದರು.

ಆದರೆ ಮೂರ್ತಿಗೆ ಈ ಮನೆ ಬೇಸರವಾಗತೊಡಗಿತು. ತನ್ನ ಮೇಲೆ ಯಾರಿಗೂ ಪ್ರೀತಿ ಇಲ್ಲ. ತಾನು ಈ ಮನೆಯವನಲ್ಲ ಅಂತ ಅನ್ನಿಸತೊಡಗಿತ್ತು. ತಾತನ ಕಿವುಡು, ಅಜ್ಜಿಯ ಮಡಿ ಜುಗುಪ್ಸೆಯನ್ನುಂಟು ಮಾಡುತ್ತಿತ್ತು. ತಾಯಿಗೆ ಚಿಕ್ಕ ಮಗುವಿನ ಲಾಲನೆ ಪಾಲನೆಗೇ ಸಮಯವಿರಲಿಲ್ಲ. ತಂದೆ ಬೆಳಿಗ್ಗೆ ಎದ್ದು ಸ್ನಾನ ಸಂಧ್ಯಾವಂದನೆ ಮುಗಿಸಿ, ತಿಂಡಿ ತಿಂದು ಫ್ಯಾಕ್ಟರಿಯ ಕೆಲಸಕ್ಕೆ ಹೊರಟುಹೋದರೆ ಮತ್ತೆ ವಾಪಸ್ಸು ಬರುತ್ತಿದ್ದುದು ಸಾಯಂಕಾಲದ ವೇಳೆಗೆ.

ಪ್ರಭಾವತಿ ತನಗಿಂತ ತುಂಬಾ ಚಿಕ್ಕವಳು ಅಂತನ್ನಿಸುತ್ತಿತ್ತು. ಅವಳು ಏನಾದರೂ ರಗಳೆ ತೆಗೆದು ಅಣ್ಣನೊಡನೆ ಜಗಳವಾಡಿ, ಅವನ ಮೇಲೆ ಚಾಡಿ ಹೇಳುತ್ತಿದ್ದಳು. ಎಲ್ಲರೂ ಅವನಿಗೆ ಬುದ್ಧಿ ಹೇಳುವವರೇ.... ಒಮ್ಮೊಮ್ಮೆ ಅಳು ಬರುತ್ತಿತ್ತು. ಒಮ್ಮೊಮ್ಮೆ ವಿಪರೀತ ಕೋಪ ಬರುತ್ತಿತ್ತು. ಸಮೀಪದಲ್ಲೇ ಇದ್ದ ದೇವಸ್ಥಾನದ ಆವರಣದಲ್ಲಿದ್ದ ಕೊಳದ ಬಳಿ ಕುಳಿತು, ನೀರಿಗೆ ಕಲ್ಲೆಸೆದು ಕಾಲಕಳೆಯುತ್ತಿದ್ದ. ಒಂಟಿಯಾಗಿ ಕುಳಿತಿರುತ್ತಿದ್ದ ಹುಡುಗನನ್ನು ದೇವಸ್ಥಾನದ ಅರ್ಚಕರು ಕರೆದು ತೀರ್ಥ ಪ್ರಸಾದಗಳನ್ನು ಕೊಡುತ್ತಿದ್ದರು. ಅವರ ಮನೆಯ ಮನೆಗೆಲಸಗಳನ್ನು ಮಾಡಿಕೊಟ್ಟು ಅವರಿಗೆ ಹತ್ತಿರವಾದ. ಮನೆಯಿಂದ ಸ್ಕೂಲಿಗೆ ಅಂತ ಹೊರಟವನು, ಒಮ್ಮೊಮ್ಮೆ ಅರ್ಚಕರ ಮನೆಯಲ್ಲೇ ಉಳಿದುಕೊಂಡು ಅವರೊಡನೆ ಚೌಕಾಭಾರವನ್ನೋ, ಪಗಡೆಯನ್ನೋ ಆಡಿಕೊಂಡು ಕಾಲ ಕಳೆಯುತ್ತಿದ್ದ.

ಹೀಗೇ ದಿನಗಳು ಕಳೆದವು. ಮೂರ್ತಿಗೆ ಹದಿನೈದು ವರ್ಷಗಳು ತುಂಬುವಾಗ ಗೌರಮ್ಮ ಮತ್ತೆ ಗರ್ಭಿಣಿಯಾಗಿದ್ದಳು. ತಾಯಿಯ ಸುಸ್ತು ಸಂಕಟ, ತಂಗಿಯರ ಕಿತ್ತಾಟ ಅವನಿಗೆ ರೋಸಿ ಹೋಗುತ್ತಿತ್ತು. ಹೈಸ್ಕೂಲಿನಲ್ಲಿ ಓದುತ್ತಿದ್ದವನಿಗೆ ಪರೀಕ್ಷೆಗೆಂದು ಓದಲು ಸಹ ಆಗುತ್ತಿರಲಿಲ್ಲ. ಅವನು ಮೆಟ್ರಿಕ್ ಪರೀಕ್ಷೆಗೆ ಹಣವನ್ನು ಕಟ್ಟದೇ ಇದ್ದಾಗ, ಸ್ಕೂಲಿಗೆ ಹೆಡ್ಮಾಸ್ಟರು ಕರೆದು ಕೇಳಿದಾಗ ಮನೆಯ ಪರಿಸ್ಥಿತಿಯನ್ನು ವಿವರಿಸಿದ.

"ಅಪ್ಪನ ಹತ್ರ ದುಡ್ಡನ್ನು ಕೇಳೋಕೆ ನಂಗಿಷ್ಟವಿಲ್ಲ. ನಾನು ಪರೀಕ್ಷೆಗೆ ಕೂರುಲ್ಲ. ನಾನು ಓದಿಲ್ಲ. ಫೇಲಾಗ್ತೀನಿ. ಫೇಲಾದ್ರೆ ಅವಮಾನ. ನಾನು ಇಷ್ಟಕ್ಕೆ ಓದನ್ನು ಬಿಟ್ಟುಬಿಡ್ತೀನಿ" ಅಂತ ಹೇಳಿದ್ದ. ಹೆಡ್ಮಾಸ್ಟರು, ಮೂರ್ತಿಯ ತಂದೆಯನ್ನು ಹುಡುಕಿಕೊಂಡು ಬಂದರು. ಅವರು ಮಾತನ್ನು ಮುಗಿಸಿಕೊಂಡು ಹೋದಮೇಲೆ, ತಂದೆ ಅವನನ್ನು ಕರೆದು ಅವನ ಕೈಗೆ ದುಡ್ಡನ್ನು ಕೊಟ್ಟು ಬೈದರು.

"ನಮಗೆ ಮರ್ಯಾದೆ ತರುಕ್ಕೆ ಹುಟ್ಟಲ್ಲ ನೀನು. ದುಡ್ಡು ಕೊಡುಲ್ಲ ಅಂತ ಹೇಳಿದ್ನಾ? ನಾಳೇನೇ ಪರೀಕ್ಷೆ ಫೀಸನ್ನು ಕಟ್ಟು. ದುಡ್ಡು ಜ್ವಾಪಾನ." ಮೂರ್ತಿ ಮಾತಾಡಲಿಲ್ಲ. ಆ ಹಣವನ್ನು ಜೇಬಿಗಿಳಿಬಿಟ್ಟ. ಆಮೇಲೆ ಅವನೇನು ಮಾಡಿದ ಅಂತ ತಂದೆ ವಿಚಾರಿಸಲಿಲ್ಲ. ಮೂರ್ತಿ ಪರೀಕ್ಷೆಗೆ ಹೋಗಲೇಇಲ್ಲ. ಅದೇ ಸಮಯದಲ್ಲಿ ಗೌರಮ್ಮ ಕೇಶವನನ್ನು ಹೆತ್ತಳು. ಎಲ್ಲರೂ ಮನೆಯಲ್ಲಿ ಈ ಸಂಭ್ರಮದಲ್ಲಿರುವಾಗ, ಮೂರ್ತಿ ಅರ್ಚಕರ ಮನೆಯಲ್ಲಿ ಕುಳಿತು ಅತ್ತಿದ್ದ.

ಅರ್ಚಕರ ಪತ್ನಿ ಕಾಮಾಕ್ಷಮ್ಮ ಅವನನ್ನು ತಬ್ಬಿಕೊಂಡು ಸಂತೈಸಿದ್ದಳು. ಆಕೆ ಅರ್ಚಕರಿಗೆ ಎರಡನೇ ಪತ್ನಿ. ಗಂಡನ ಮೇಲೆ ಆಕೆಗೆ ಪತಿ ಎಂಬ ಭಯವಿತ್ತೇ ಹೊರತು ಪ್ರೀತಿ ಇರಲಿಲ್ಲ. ಮಕ್ಕಳೂ ಆಗಿರಲಿಲ್ಲ. ಆ ಕೋಪವೂ ಇತ್ತು. ನಿರಾಸೆಯೂ ಇತ್ತು. ಪ್ರಾಯಕ್ಕೆ ಬರುತ್ತಿದ್ದ ಮೂರ್ತಿಯನ್ನು ಅವಳು ಮಗನಂತೆ ಕಾಣಲು ಸಾಧ್ಯವಿರಲಿಲ್ಲ. ಚಿಗುರು ಮೀಸೆಯ ಯುವಕನನ್ನು ತನ್ನ ಕಾಮನೆಗಳಿಗೆ ಬಳಸಿಕೊಂಡಳು. ಮೂರ್ತಿ ಹೊಸ ಅನುಭವಗಳಿಂದ ಪುಳಕಿತನಾದ. ಅವಳ ಆಸೆಗಳಿಗೆ ಸ್ಪಂದಿಸಿದ. ತಾನು ಮಾಡುತ್ತಿರುವುದು ತಪ್ಪು ಎಂಬ ಅರಿವೇ ಆಗಲಿಲ್ಲ. ಹೀಗೇ ನಡೆಯಿತು.

ಅರ್ಚಕರನ್ನು ಯಾವುದೋ ವಿಷಯ ಕೇಳಲೆಂದು ಬಂದ ತಂದೆಗೆ ಮೂರ್ತಿಯನ್ನು ಅಲ್ಲಿ ಅವರ ಮನೆಯಲ್ಲಿ ಕಂಡು ಆಶ್ಚರ್ಯವಾಗಿತ್ತು. ಮಗನ ಬಗ್ಗೆ ಅಸಹನೆಯೂ ಉಂಟಾಗಿತ್ತು. ಅರ್ಚಕರು ಮನೆಯಲ್ಲಿ ಇಲ್ಲದ ಸಮಯದಲ್ಲಿ ಮಗ ಅಲ್ಲಿ ಇದ್ದುದು ಸಮಂಜಸವೆನಿಸಲಿಲ್ಲ. ಮೂರ್ತಿ, ತಂದೆಯನ್ನು ಕಂಡು, ಅಲ್ಲಿಂದ ಸೀದಾ ಮನೆಗೂ ಬಾರದೆ ಎಲ್ಲೋ ಹೊರಟುಹೋಗಿದ್ದ. ಅರ್ಚಕರು ಬಂದ ನಂತರ ಕಳಿಸಬೇಕೆಂದು ಹೇಳಿ, ಮನೆಗೆ ವಾಪಸ್ಸು ಬಂದರು. ಮಗ ಮನೆಗೆ ಬಂದಿಲ್ಲದೇ ಇದ್ದುದನ್ನು ಕಂಡು, ಹೆಂಡತಿಯೊಡನೆ ತಮ್ಮ ಸಂಶಯವನ್ನು ಹೊರಗೆಡವಿ, ಮಗನೊಡನೆ ಮಾತನಾಡಬೇಕೆಂದು ಹೇಳಿದರು. ಗೌರಮ್ಮ ಹೌಹಾರಿದಳು. ಗಂಡನಿಗೆ ಯಾಕೆ ಇಂತಹ ಸಂಶಯ? ಮಗ ಇನ್ನು ಚಿಕ್ಕವನು. ಹೀಗೆಲ್ಲಾ ಇರಲು ಸಾಧ್ಯವೆ? ಈ ವಿಷಯವನ್ನು ಮಗನೊಡನೆ ಆಡುವುದಾದರೂ ಹೇಗೆ? ಕತ್ತಲಾಗುತ್ತಾ ಬಂದರೂ ಮಗ ಮನೆಗೆ ಬರದಿದ್ದಾಗ, ತಲ್ಲಣದಿಂದ ನಡುಗಿದಳು. ರಾತ್ರಿ ಎಲ್ಲರೂ ಮಲಗುವ ಸಿದ್ಧತೆಯಲ್ಲಿದ್ದಾಗ ಮೂರ್ತಿ ಮನೆಗೆ ಬಂದ. ಈಗ ರಾತ್ರಿಯ ವೇಳೆಯಲ್ಲಿ ಅಕ್ಕಪಕ್ಕದವರಿಗೆ ಕೇಳಿಸಿತು. ಬೆಳಗಾದ ಮೇಲೆ, ಗಂಡ ಆಫೀಸಿಗೆ ಹೋದನಂತರ ಮಾತನಾಡಿದರಾಯಿತೆಂದುಕೊಂಡಳು.

ಆದರೆ, ಬೆಳಗಾದ ಸ್ವಲ್ಪ ಹೊತ್ತಿನ ನಂತರ ಪೋಲೀಸರು ಮೂರ್ತಿಯನ್ನು ಕೇಳಿಕೊಂಡು ಬಂದಾಗ ಗೌರಮ್ಮ ವಿಪರೀತ ಗಾಬರಿಗೊಂಡಳು. ಗಂಡ ಸ್ವಲ್ಪ ಹೊತ್ತಿಗೆ ಮೊದಲು ಫ್ಯಾಕ್ಟರಿಗೆ ಹೊರಟುಹೋಗಿದ್ದ. ಯಾಕೆ ಏನು ಎಂದು ವಿಚಾರಿಸಲೂ ಅವಕಾಶವಾಗದೇ ಹೋಯಿತು. ಪೋಲೀಸರು ಮೂರ್ತಿಯನ್ನು ಕರೆದೊಯ್ದಿದ್ದರು. ಗೌರಮ್ಮ ಅತ್ತಳು. ವೃದ್ಧ ಅತ್ತೆ ಮಾವ ಅಸಹಾಯಕರಾಗಿದ್ದರು. ಹೆಣ್ಣು ಮಕ್ಕಳಿಗೆ ಏನೂ

ಅರ್ಥವಾಗಿರಲಿಲ್ಲ. ಬೆರಗು ಕಣ್ಣುಗಳಿಂದ ತಾಯಿಯನ್ನು ನೋಡಿದ್ದರು. ಸಾಯಂಕಾಲ ಗಂಡ ಫ್ಯಾಕ್ಟರಿಯಿಂದ ಬರುವವರೆಗೂ ಏನೂ ಮಾಡಲಾಗಿರಲಿಲ್ಲ.

ಮನೆಗೆ ಬಂದ ಗಂಡನಿಗೆ, ಕಾಫಿ ತಿಂಡಿಯನ್ನು ಕೊಡದೆ ನಡೆದ ವಿಷಯವನ್ನು ತಿಳಿಸಿದಳು. "ಅರ್ಚಕರೇ ಕಂಪ್ಲೆಂಟ್ ಕೊಟ್ಟಿರಬಹುದು. ಒಂದು ರಾತ್ರಿ ಲಾಕಪ್‌ನಲ್ಲಿಟ್ಟುಕೊಂಡು ಚೆನ್ನಾಗಿ ಹೊಡೆದು ನಂತರ ಬಿಡ್ತಾರೆ. ಬುದ್ಧಿಬರಲಿಬಿಡು" ಗಂಡನೆಂದಾಗ ಗೌರಮ್ಮ ಬೇತುಕೊಂಡಳು.

"ಮೂರ್ತಿ ನಮ್ಮ ಮಗ. ಯಾರೋ ಬೇರೆಯಲ್ಲ. ಮೊದಲೇ ತಪ್ಪು ದಾರಿ ಹಿಡಿದಿದಾನೆ. ಈಗ ನಮ್ಮ ಬೆಂಬಲವಿಲ್ಲದಿದ್ದರೆ, ಅವನು ನಮ್ಮ ಕೈಬಿಟ್ಟುಹೋಗ್ತಾನೆ." ಅತ ವಿಧಿ ಇಲ್ಲದೆ, ಎದ್ದು ಪೋಲೀಸ್‌ಸ್ಟೇಷನ್‌ಗೆ ಬಂದ. ಅಲ್ಲಿ ತಿಳಿದದ್ದೇ ಬೇರೆ. ಅರ್ಚಕರ ಪತ್ನಿ ಮನೆಬಿಟ್ಟು ನಾಪತ್ತೆಯಾಗಿದ್ದಳು. ಅರ್ಚಕರ ಗುಮಾನಿ ಇದ್ದುದು ಮೂರ್ತಿಯ ಮೇಲೆ. ಪೋಲೀಸರು ಹಿಂದೆ ಮುಂದೆ ಯೋಚಿಸದೇ ಮೂರ್ತಿಯನ್ನು ಅರೆಸ್ಟ್ ಮಾಡಿದ್ದರು. ಆತನಿಗೆ ಸಂದಿಗ್ಧಕ್ಕಿಟ್ಟುಕೊಂಡಿತು. ಆಕೆ ನಾಪತ್ತೆಯಾದುದಕ್ಕೂ ತನ್ನ ಮಗನಿಗೂ ಏನೂ ಸಂಬಂಧವಿಲ್ಲ ಎಂದು ಪೋಲೀಸರಲ್ಲಿ ವಾದಿಸಿದರೂ ಯಾವುದೂ ಪ್ರಯೋಜನವಾಗಲಿಲ್ಲ. ಅರ್ಚಕರು ಬಂದು ಹೇಳಿದರೆ, ಪೋಲೀಸರು ಮಗನನ್ನು ಬಿಡಬಹುದೆಂದು ಎಂದುಕೊಂಡು, ಅರ್ಚಕರ ಮನೆಗೆ ಬಂದರೆ, ಮನೆಯ ಮುಂಬಾಗಿಲೆಗ ಬೀಗ ಹಾಕಿತ್ತು. ಅರ್ಚಕರು ಎಲ್ಲಿ ಹೋದರೆಂದು ಯಾರಿಗೂ ತಿಳಿದಿರಲಿಲ್ಲ. ಅರ್ಚಕರಿಗೆ ಅವಮಾನವಾದಂತಾಗಿತ್ತು. ಪರಿಚಯದವರ ಎದುರಿಗೆ ತಲೆ ಎತ್ತಿ ನಿಲ್ಲಲೂ ಮುಜುಗರವೆನಿಸಿತ್ತು. ಕತ್ತಲಾಗುವವರೆಗೆ ಮನೆಗೇ ಬರಬಾರದೆಂದುಕೊಂಡು, ಸಮೀಪದ ನೆಂಟರೊಬ್ಬರ ಮನೆಗೆ ಹೊರಟುಹೋಗಿದ್ದರು.

ಗಂಡನೊಡನೆ ಜಗಳ ಆಡಿ ಮುಗಿಸಿಕೊಂಡು, ಕೆರೆಗೆ ಹಾರ್ತೀನಿ ಎಂದುಕೊಂಡು, ಕೆರೆಯನ್ನು ಹುಡುಕಿಕೊಂಡು ಹೊರಟಿದ್ದ. ಅರ್ಚಕರ ಪತ್ನಿ ಸ್ವಲ್ಪ ಸಮಯದಲ್ಲೇ ಮನಸ್ಸು ಬದಲಾಯಿಸಿ, ಬಸ್‌ಸ್ಟ್ಯಾಂಡ್‌ಗೆ ಬಂದಳು. ಹೊರಟುನಿಂತಿದ್ದ ಯಾವುದೋ ಬಸ್ಸನ್ನು ಹಿಂದೆ ಮುಂದೆ ಯೋಚಿಸದೇ ಹತ್ತಿದಳು. ಕಂಡಕ್ಟರ್ ಬಂದು ಎಲ್ಲಿಗೆ ಟಿಕೆಟ್ ಕೊಡಬೇಕೆಂದು ಕೇಳಿದಾಗ, ಗಲಿಬಿಲಿಗೊಂಡು, ಈ ಬಸ್ ಎಲ್ಲಿಗೆ ಹೋಗುತ್ತದೆಂದು ಕೇಳಿದಳು. ಕಂಡಕ್ಟರ್ ಮೊದಲಿಗೆ ನಕ್ಕನಾದರೂ, ನಂತರ ಸಂಶಯಗೊಂಡು ಪ್ರಶ್ನಿಸಲಾರಂಭಿಸಿದ.

ಹೆದರಿದ ಆಕೆ, ಮುಂದಿನ ಊರಿನಲ್ಲಿ ಬಸ್ಸು ನಿಂತಾಗ, ಇಳಿದುಬಿಟ್ಟಳು. ಮತ್ತೆ ತನ್ನ ಊರಿಗೆ ವಾಪಸ್ಸು ಬರುವ ಬಸ್ಸಿಗೆ ಹತ್ತಿದಳು. ಮನೆಗೆ ಬಂದಾಗ, ಮುಂಬಾಗಿಲಿಗೆ ಬೀಗ ಹಾಕಿದುದನ್ನು ಗಮನಿಸಿ, ಗಂಡ ಇಲ್ಲೇ ಎಲ್ಲೋ ಹೋಗಿರಬೇಕೆಂದುಕೊಂಡು, ಅಲ್ಲಿದ್ದ ಕಟ್ಟೆಯ ಮೇಲೆ ಕುಳಿತಳು. ದೇವಸ್ಥಾನದಲ್ಲಿ ಕೆಲಸ ಮಾಡುವ ಹೆಂಗಸು ಅವಳನ್ನು ಕಂಡು, ಆಶ್ಚರ್ಯದಿಂದ ಹತ್ತಿರಕ್ಕೆ ಬಂದಳು. ಕೆಲವೇ ಕ್ಷಣಗಳಲ್ಲಿ ನಡೆದ ವಿಷಯಗಳು ತಿಳಿದು ಕಂಗಾಲಾದಳು. ತನ್ನಿಂದಾಗಿ ಏನೂ ತಪ್ಪು ಮಾಡದ ಮೂರ್ತಿ ಲಾಪಕ್‌ನಲ್ಲಿರುವನೆಂದು ತಿಳಿದು ಸೀದಾ ಪೋಲೀಸ್ ಸ್ಟೇಷನ್‌ಗೆ ಬಂದಳು. ಪೋಲಿಸರೊಡನೆ ಮಾತನಾಡಿ, ತಾನೇ ನಾಪತ್ತೆಯಾದವಳೆಂದು ತಿಳಿಸಿ, ಮೂರ್ತಿಯನ್ನು ಬಿಡುಗಡೆ ಮಾಡಿಸಿದಳು. ಅಷ್ಟು ಹೊತ್ತಿಗೆ ಕತ್ತಲಾಗುತ್ತಾ ಬಂದಿತ್ತು.

ಮೂರ್ತಿ ಆಕೆಯೊಡನೆ ತನ್ನ ಮನೆಗೆ ಬಂದ. ಗೌರಮ್ಮನಿಗೆ ಮಗನನ್ನು ಕಂಡು ನೆಮ್ಮದಿ ಎನಿಸಿದರೂ ಆಕೆಯನ್ನು ಕಂಡು ತಿರಸ್ಕಾರ. ಮೂಡಿತು. ಆದರೂ ಏನನ್ನೂ ಕೇಳಲಿಲ್ಲ. ಬೆಳಗಿನಿಂದ ಮಗ ಹಸಿದುಕೊಂಡಿರುವನೆಂದು ಅವನಿಗೆ ಊಟವನ್ನು ಬಡಿಸಿದಳು.

"ಅವರೂ, ನೆನ್ನೆ ರಾತ್ರಿಯಿಂದ ಏನನ್ನು ತಿನ್ನದೇ ಅಲೆದಾಡಿಕೊಂಡಿದ್ದಾರೆ. ಅವರಿಗೂ ಬಡಿಸು" ಎಂದ ಮೂರ್ತಿ. ಗೌರಮ್ಮ ಕೇಳಿಸಿದವಳಂತೆ ಸುಮ್ಮನಿದ್ದುಬಿಟ್ಟಳು. ಮೂರ್ತಿ ಸಿಟ್ಟಿನಿಂದ ತಾಯಿಯನ್ನು ಕೆಕ್ಕರಿಸಿ ನೋಡಿದ.

"ನೀನೀಗ ಆಕೆಗೆ ಬಡಿಸದಿದ್ದರೆ ನಾನೆಂದೂ ಈ ಮನೆಯಲ್ಲಿ ಊಟ ಮಾಡುವುದಿಲ್ಲ" ಎನ್ನುತ್ತಾ ತಟ್ಟೆಯನ್ನು ಸರಿಸಿ ಎದ್ದು ನಿಂತ.

"ನನಗೆ ನೀನು ಮುಖ್ಯ. ಆಕೆಯಲ್ಲ. ನಿನ್ನನ್ನು ತಪ್ಪುದಾರಿಗೆ ಎಳೆದು ನೀನು ಲಾಕಪ್‌ಗೆ ಹೋಗುವಂತೆ ಮಾಡಿದವಳು ಈಕೆ. ಇವಳಿಂದ ನಮಗೆ ಅವಮಾನವಾಗಿದೆ. ನಾನು ಆಕೆಗೆ ಒಂದು ಲೋಟ ನೀರನ್ನು ಸಹ ಕೊಡುವುದಿಲ್ಲ" ಎಂದಳು.

"ಸರಿ ಹಾಗಾದ್ರೆ. ನನಗೆ ನಿನ್ನ ಮನೆಯ ಊಟವೂ ಬೇಡ" ಎಂದು ನುಡಿದು, ತಟ್ಟೆಯನ್ನು ದಾಟಿಕೊಂಡು ಮುಂಬಾಗಿಲಿನ ಕಡೆಗೆ ಬಂದ. ಅರ್ಚಕರ ಪತ್ನಿಯೊಡನೆ ಮಾತನಾಡುತ್ತಿದ್ದ ತಂದೆಯನ್ನು ಕಂಡರೂ ಅವನ ಕಾಲುಗಳು ನಿಲ್ಲಲಿಲ್ಲ. ಬಿರಬಿರನೆ ಮಗ ಎತ್ತ ಹೋಗುತ್ತಿದ್ದಾನೆಂದು ತಂದೆಗೆ

ಅರ್ಥವಾಗಲಿಲ್ಲ. 'ಮೂರ್ತಿ' ಎಂದು ಕರೆಯುತ್ತಾ ಬಂದ ಗೌರಮ್ಮ ಒಳ ಬಾಗಿಲಿನಲ್ಲೇ ನಿಂತಳು. ಮೂರ್ತಿಯ ತಂದೆಯನ್ನು ಕಂಡು ಭಯದಿಂದ ಕುಸಿದಳು. ಮೂರ್ತಿ ಗೇಟನ್ನು ತೆಗೆದು, ರಸ್ತೆಗೆ ಇಳಿದ.

ಆ ದಿನ ಮನೆಬಿಟ್ಟು ಹೋದವನು, ನನ್ನ ಮಾತನ್ನು ಧಿಕ್ಕರಿಸಿ ಹೋದವನು. ಈಗ ಇಷ್ಟು ವರ್ಷಗಳ ನಂತರ ನನ್ನ ನೆನಪಾಯಿತೆ? ಪಶ್ಚಾತ್ತಾಪಗೊಂಡು, ಹಿಂದಿರುಗಿ ಬರುತ್ತಾನೆಂದು ಕಾತರಿಸಿ ಕಾದಿದ್ದ ದಿನಗಳೂ ಉಂಟು. ಆದರೆ ಚಿಕ್ಕವಯಸ್ಸಿನಲ್ಲೇ ತಪ್ಪುದಾರಿ ಹಿಡಿದು, ಅವಮರ್ಯಾದೆ ಮಾಡಿದವನು ಮನೆಗೆ ಬಂದರೆ, ಗಂಡ ಸೇರಿಸುವುದಿಲ್ಲವೆನ್ನುವ ಅನುಮಾನವೂ ಇತ್ತು. ಗಂಡನಿಗೆ, ಸ್ವಂತ ಮಗನ ಮೇಲೆ ತಿರಸ್ಕಾರ. ಅಭಿಮಾನ ಪಡುವಂಥ ಕೆಲಸವನ್ನೇನೂ ಮಾಡಿರಲಿಲ್ಲ. ಅಪರಾಧಗಳನ್ನು ಮಾಡಿ, ಈಗ ಆಶ್ರಮವಾಸಿಯಾಗಿಬಿಟ್ಟರೆ, ಮಹಾತ್ಮನಾಗಿ ಬಿಡುತ್ತಾನೆಯೆ? ಇವನಿಂದ ಆಶ್ರಮಕ್ಕೆ ಕೆಟ್ಟ ಹೆಸರು ಬರದಿದ್ದರೆ ಸಾಕು. ವ್ಯಾನು ನಿಂತಿತು. ಗೌರಮ್ಮನ ಚಿತ್ತ ಇತ್ತ ಹರಿಯಿತು. ಎಲ್ಲರೂ ಇಳಿದರು. ಪ್ರಯಾಣದ ಆಯಾಸವನ್ನು ಪರಿಹರಿಸಿಕೊಳ್ಳುವವರಂತೆ ಅಲ್ಲಲ್ಲೇ ಕುಳಿತರು.

ಗೌರಮ್ಮ ಬಚ್ಚಲು ಮನೆಗೆ ಹೋಗಿ ಕೈಕಾಲು ತೊಳೆದು ಬಂದು, ಮಡಿ ಸೀರೆಯನ್ನುಟ್ಟು ದೇವರಿಗೆ ತುಪ್ಪದ ದೀಪಗಳನ್ನು ಹಚ್ಚಿದಳು. ಅಮ್ಮನಿಗೆ ಮಗನನ್ನು ನೋಡಿ ಸಂತೋಷವಾಗಿದೆ. ಅದಕ್ಕೆ ದೇವರಿಗೆ ತುಪ್ಪದ ದೀಪ ಎಂದುಕೊಂಡರು. ಆದರೂ ಮಕ್ಕಳ ಎದುರಿಗೆ ಯಾವ ಮಾತೂ ಬೇಡವೆಂದುಕೊಂಡು ಎಲ್ಲರೂ ಮಲಗುವ ಸಿದ್ಧತೆ ಮಾಡಿದರು. ಒಂದು ಲೋಟ ತಣ್ಣನೆಯ ನೀರನ್ನು ಕುಡಿದು ಗೌರಮ್ಮ ಮಲಗಿದಳು. ಆದರೂ ಅವಳ ಎದೆಗುದಿ ಕಡಿಮೆಯಾಗಿರಲಿಲ್ಲ. ಏನೋ ತಳಮಳ; ಏನೋ ಕಳವಳ. ಅನೇಕ ಬಾರಿ ಮಗ್ಗುಲು ಬದಲಾಯಿಸಿದಳು. ಸಮೀಪದಲ್ಲೇ ಹಾಸಿಗೆ ಹಾಸಿಕೊಂಡು ಮಲಗಿದ್ದ ಪ್ರಭಾವತಿಗೆ ತಾಯಿಯ ಚಡಪಡಿಸಿ ಅರ್ಥವಾಗಿತ್ತು.

"ಯಾಕಮ್ಮಾ ನಿದ್ದೆ ಬರ್ತಿಲ್ವಾ?" ಸುಮ್ಮನೆ ಎಂಬಂತೆ ಕೇಳಿದಳು.

"ಹ್ಯಾಗೆ ನಿದ್ದೆ ಬರುತ್ತೆ? ನೀನೇ ಹೇಳು."

"ಅಣ್ಣನ ಬಗ್ಗೆ ಯೋಚಿಸ್ತಿದೀಯಾ? ಇಷ್ಟು ವರ್ಷ ಇಲ್ಲದ್ದು."

"ಇಷ್ಟು ವರ್ಷದ ಮೇಲೆ ಮತ್ಯಾಕೆ ಕಣ್ಣಿಗೆ ಬಿದ್ದ ಅಂತ.... ಏನೋ ದಿಗಿಲಾಗುತ್ತೆ ಕಣೇ."

"ಅವನನ್ನು ಮತ್ತೆ ಮನೆಗೆ ಸೇರಿಸಿಕೊಳ್ಳೋಕೆ ಇಷ್ಟ ಇಲ್ವಾ?"

"ಇಷ್ಟದ ಪ್ರಶ್ನೆ ಅಲ್ಲ. ಸರಿ ಹೋಗುತ್ತಾ ಹೇಳು."

"ಕೇಶವಂಗೆ, ರಾಧಂಗೆ ಏನನ್ನಿಸುತ್ತೋ ಅಂತ ಚಿಂತೇನಾ? ಇದು ಅವನಿಗೂ ಸೇರಿದ ಮನೆ. ನಿನಗೇನನ್ನಿಸುತ್ತೆ ಹೇಳು."

"ಕೇಳೋರಿಗೆ ಏನು ಹೇಳ್ಲಿ? ಇವನೇನು ದಂಡೆತ್ತಿ ಹೋಗಿದ್ನಾ? ದೇಶಾಂತರ ಹೋಗಿದ್ನಾ? ಏನೂ ಇಲ್ಲ. ಜೈಲಲ್ಲಿ ಇದ್ನಂತೆ." ಪಿಸುದನಿಯಲ್ಲಿ ಹೇಳಿದಾಗ, ಸತ್ಯವತಿಯೂ ಎದ್ದು ಕೂತಳು.

"ನೀನ್ಯಾಕೇ ಎದ್ದೆ. ಮಲಕ್ಕೋ. ಬೆಳಿಗ್ಗೆ ಊರಿಗೆ ಬೇರೆ ಹೊರಡಬೇಕು. ಅಮ್ಮಂಗೆ ನಿದ್ದೆ ಬರದೇ ಹೊರಳಾಡ್ತಿದ್ಲು. ಅದಕ್ಕೆ ಮಾತಾಡ್ತಿದ್ದೆ" ಪ್ರಭಾವತಿ ತಾನೂ ಮಲಗಿದಳು.

"ಅಕ್ಕಾ, ನಿಜಕ್ಕೂ ಅವನು ನಮ್ಮ ಅಣ್ಣನೇನಾ?" ಸತ್ಯವತಿ ಸಂದೇಹವನ್ನು ಹೊರಗೆಡವಿದಳು.

"ಯಾಕೇ? ಏನು ಅನುಮಾನ ನಿನಗೆ?"

"ನನಗೆ ನೋಡಿದ ನೆನಪೇ ಇರ್ಲಿಲ್ಲ. ನಿನಗೆ ನೆನಪಿತ್ತಲ್ವಾ?"

"ಹುಂ. ಆಗ ಹೀಗಿರಲಿಲ್ಲ. ಈಗ ವಯಸ್ಸಾಗ್ತಾ ಬಂದಿದೆ. ಅಮ್ಮಂಗೆ ಅವನ ಗುರುತು ಸಿಗ್ತಲ್ವಾ ಸಾಕು."

"ಅವನು ಆಶ್ರಮದಲ್ಲೇ ಇರಲಿ. ಅವನನ್ನು ಮತ್ತೆ ಮನೆಯೊಳಕ್ಕೆ ಸೇರಿಸುವುದು ಬೇಡ."

"ಯಾಕೆ? ನಿಂಗೇನು ಕಷ್ಟ?"

"ಅಮ್ಮಂಗೆ, ಕೇಶವಂಗೆ, ಎಲ್ರಿಗೂ ಕಷ್ಟವೇ. ಕೇಳ್ದೋರಿಗೆಲ್ಲಾ ಏನು ಹೇಳೋದು. ಎಲ್ಲರೂ ಹಳೆಯ ಕತೇನ ಮರೆತಿರ್ತಾರೆ. ಮತ್ತೆ ಕೆದಕಿದರೆ ನಾಚಿಕೆಗೇಡು. ಅವನು ಆಶ್ರಮದಲ್ಲಿರೋದೇ ಸರಿ."

"ನಮಗ್ಯಾಕೆ? ನಾವು ಮದುವೆಯಾಗಿ ಈ ಮನೆಯಿಂದ ಹೊರಗೆ ಹೋದವರು. ಅವನು ಈ ಮನೆಯ ಮಗ. ಆ ಅಧಿಕಾರ ಅವನಿಗಿದೆ."

"ಅಧಿಕಾರ ಇದೆ ಅಂತ ಚಲಾಯಿಸಿದರೆ, ಕೇಶವಂಗೆ ಕಷ್ಟವಾಗುತ್ತೆ. ಹೆಣ್ಣು ಮಕ್ಕಳ ವಿದ್ಯಾಭ್ಯಾಸ, ಮದುವೆ... ಬೇಕಾದಷ್ಟು ಜವಾಬ್ದಾರಿಗಳಿವೆ. ಅವನಿಗೆ ಯಾರಿದಾರೆ? ಅವನ ಸಂಸಾರವಿಲ್ಲ. ಒಬ್ಬನೇ ಇದಾನೆ. ಎಲ್ಲೋ ಇದ್ಕೋತಾನೆ. ಇದುವರೆಗೆ ಹೇಗಿದ್ನೋ ಹಾಗೆ...

"ಅವನಿಗೂ ಮದುವೆಯಾಗಿತ್ತಂತೆ. ಒಬ್ಬ ಮಗನೂ ಇದಾನಂತೆ." ಗೌರಮ್ಮ ಕೆಳದನಿಯಲ್ಲಿ ನುಡಿದಳು.

"ಹೌದಾ? ನಿಂಗ್ಯಾರು ಹೇಳಿದ್ರು?"

"ಅದ್ಯಾರೋ ಸ್ವಾಮಿ ಅಂತ... ಅಲ್ಲಿದ್ನಲ್ಲ. ಅವನು ಹೇಳ್ದ. ಅವನ ತಂಗೀನ್ನೆ ಮಾಡಿಕೊಂಡಿದ್ನಂತೆ ಪಾಪಿ."

"ಅವಳೆಲ್ಲಿದ್ದಾಳಂತೆ? ಮಗನ್ನ ಅವಳನ್ನು ಬಿಟ್ಟು ಇವನ್ಯಾಕೆ ಆಶ್ರಮದಲ್ಲಿ ಕೂತಿದಾನಂತೆ.?"

"ಹೆಂಡ್ತೀನ ಸಾಯ್ಸಿ, ಜೈಲಿಗೆ ಹೋಗಿ ಕೂತಿದ್ದ ಬಿಡುಗಡೆಯಾದ್ಮೇಲೆ ಆಶ್ರಮದಲ್ಲಿ ದಂಡಪಿಂಡವಾಗಿ ಕೂತಿದಾನೆ..."

"ಅಮ್ಮಾ... ಮಲಗ್ಬಾರ್ದಾ? ಅರ್ಧರಾತ್ರಿ ಕಳೆದ್ಹಿದೆ. ಏನೇ ನೀವಿಬ್ರೂ ಯಾಕೆ ನಿದ್ದೆಗೆಟ್ಟು ಮಾತಾಡ್ತಿದೀರಿ?" ಕೇಶವ ಕಣ್ಣು ಹೊಸಕಿಕೊಳ್ಳುತ್ತಾ ಬಂದು ನುಡಿದಾಗ, ಮಾತು ನಿಲ್ಲಿಸಿದರು. ಕೇಶವ ದೀಪವನ್ನಾರಿಸಿ, ಮತ್ತೆ ಮಲಗಲು ಬಂದ. ಆದರೆ ಅವನ ನಿದ್ದೆ ಹಾರಿಹೋಗಿತ್ತು. ರಾಜನೇ ಮೂರ್ತಿಯ ಮಗ ಅಂತ ತಿಳಿದರೇ.... ಅಮ್ಮನ ಪ್ರತಿಕ್ರಿಯೆ ಹೇಗಿರುತ್ತದೆ? ರಾಧಾ ಏನನ್ನೂತ್ತಾಳೋ? ಸ್ವತಃ ರಾಜನಿಗೇ ಈ ವಿಷಯ ತಿಳಿಯದು. ಅವನಿಗೆ ತಿಳಿದರೆ ಏನಾಗಬಹುದು?" ಮಂದಾರ ಕನವರಿಕೆಯಲ್ಲಿ ಮಾತನಾಡಿದಳು. ರಾಧಾ ಅವಳನ್ನು ಗದರಿ ಬಾಯಿ ಮುಚ್ಚಿಸಿದಳು. ದೂರದಲ್ಲೆಲ್ಲೋ ಮೂರು ಗಂಟೆ ಹೊಡೆದ ಸದ್ದು ಕೇಳಿಸಿತು. ಕೇಶವ ಮಗ್ಗುಲು ಬದಲಾಯಿಸಿದ.

* * * *

ರಾಧಾ ಅತ್ತಿಗೆಯರಿಗೆ ತಾಂಬೂಲದೊಂದಿಗೆ ಉಡುಗೊರೆಯನ್ನಿತ್ತಳು. ಇಬ್ಬರೂ ಸಂತೋಷದಿಂದ, ಸಂಕೋಚವನ್ನು ವ್ಯಕ್ತಪಡಿಸುತ್ತಾ ಉಡುಗೊರೆಗಳನ್ನು ಸ್ವೀಕರಿಸಿದರು.

"ಮಧೂ, ಮೈನೆರೆದ ಗಳಿಗೆ ತುಂಬಾ ಚೆನ್ನಾಗಿರಬೇಕು. ಕಳೆದುಹೋಗಿದ್ದ ಅಣ್ಣ ಮತ್ತೆ ಸಿಕ್ಕಿದ." ಪ್ರಭಾವತಿ ನುಡಿದಾಗ, ರಾಧಾ ಮೌನವನ್ನು ನಟಿಸಿದಳು.

"ಹೌದು ಗಳಿಗೆ ಎಂಥದು ಅಂತ ಶಾಸ್ತ್ರಿಗಳನ್ನ ಕೇಳಬೇಕು. ಏನಾದರೂ ಶಾಂತಿ ಮಾಡಿಸ್ಬೇಕು" ಗೌರಮ್ಮ ಬಿಗುವಾಗಿ ನುಡಿದಳು.

"ಹಾಗೇ ಶಾಸ್ತ್ರಿಗಳನ್ನ ಕೇಳು... ಅವನ ಮಗ ಈಗ ಎಲ್ಲಿದಾನೆ ಅಂತ. ತಾಯಿಯಿಲ್ಲದ ತಬ್ಬಲಿ. ತಂದೆ ಇದ್ದೂ ಇಲ್ಲದ ಹಾಗೆ.... ಏನು ಕರ್ಮವೋ?"



"ಇನ್ನೆಲ್ಲಿರ್ತಾನೆ? ಅವನ ಮಾವ ಸಾಕಿದಾನಂತೆ. ಅಲ್ಲೇ ಇರ್ತಾನೆ..."

"ಈಗ ಎಷ್ಟು ವರ್ಷವೋ ಆ ಹುಡುಗನಿಗೆ. ಹೇಗಿದಾನೋ? ಏನು ಓದುತ್ತಾ ಇದಾನೋ...?"

"ನಂಜುಂಡಸ್ವಾಮೀನ ಕೇಳಿದ್ರೆ ಹೇಳ್ತಿದ್ದ. ನಾನು ಕೇಳಲಿಲ್ಲ...."

"ಯಾವ ನಂಜುಂಡಸ್ವಾಮಿ? ಅವನ ಸೋದರಮಾವ ತಾನೇ."

"ಹೂಂ. ಅವನೇ ಪಡಪೋಶಿ ಮನುಷ್ಯ..."

"ಅಮ್ಮಾ... ಹಾಗಾದ್ರೆ ರಾಜಾನೇ ನಮ್ಮ ಅಣ್ಣನ ಮಗ ಇದ್ದರೂ ಇರಬಹುದು.... ಅಲ್ವೇನಮ್ಮಾ....?" ಅನುಮಾನವನ್ನು ವ್ಯಕ್ತಪಡಿಸಿದಳು.

"ಅದ್ಹೇಗೇ ಸಾಧ್ಯ? ಹಾಗಿದ್ದಿದ್ರೆ ಹೇಳ್ದೇ ಇರ್ತಿದ್ನಾ ಆ ಮನುಷ್ಯ! ರಾಜನ್ನ ನೋಡಿದ್ರೆ ಮೂರ್ತಿಯ ಮಗ ಅಂತ ಅನ್ನೋಕೆ ಆಗುಲ್ಲ. ಅಲ್ಲದೇ ಕೇಶವಂಗೆ ವಿಚಾರ ಗೊತ್ತಿಲ್ದೇ ಇರ್ತಿತ್ತಾ?..."

"ಕೇಶವಂಗೆ ಗೊತ್ತಿದೆಯೋ ಇಲ್ವೋ...? ಕೇಶವಾ... ಕೇಶವಾ..." ಕೇಶವ ಬಂದ. ಕತ್ತು ತಗ್ಗಿಸಿ ಮೌನವಾಗಿ ನಿಂತ. ಗೌರಮ್ಮನಿಗೂ ಸಂಶಯ ಇಣುಕಿತು.

"ನಿನ್ನ ಮೌನವನ್ನು ನೋಡಿದ್ರೆ, ಏನೋ ರಹಸ್ಯವನ್ನು ಮುಚ್ಚಿಡುವ ಹಾಗೆ ಅನ್ನಿಸ್ತಿದೆ. ನೀನೂ ಸೇರಿದೀಯ ಅನ್ನು."

"ಇಲ್ಲ. ಈ ಮುಂಚೆ ನನಗೆ ಏನೂ ಗೊತ್ತಿರ್ಲಿಲ್ಲ. ನನಗೂ ನೆನ್ನೇನೇ ಗೊತ್ತಾದದ್ದು. ನನಗೆ ಅಣ್ಣನೇ ಹೇಳಿದ..." ರಾಜಾ ಅವನ ಮಗ.

"ನೋಡಿದ್ಯಾ ಈ ನಂಜುಂಡಸ್ವಾಮಿ ಕಿತಾಪತಿಯ ಮನುಷ್ಯ ಅಂತ. ಮೊದಲು ಆ ಹುಡುಗನ್ನ ಇಲ್ಲಿಗೆ ಕಳಿಸಿ, ಆಮೇಲೆ ಏನೂ ತಿಳಿಯದವನಂತೆ ನಾಟಕ ಆಡಿದಾನೆ..." ಗೌರಮ್ಮ ಅವನನ್ನು ಬೈಯಲಾರಂಭಿಸಿದಳು.

"ನಂಜುಂಡಸ್ವಾಮಿ ನಿಂಗೆ ಈ ವಿಷಯವನ್ನು ತಿಳಿಸಬಾರ್ದಾಗಿತ್ತು."

"ಯಾಕೆ.? ಅವನು ತಿಳಿಸಿದ್ದೇ ಒಳ್ಳೇದಾಯ್ತು. ಇಲ್ದಿದ್ರೆ, ನೀನಂತೂ ಖಂಡಿತಾ ಹೇಳ್ತಿರಲಿಲ್ಲ."

"ಇಲ್ಲಮ್ಮ. ಹಾಗೇನಿಲ್ಲ. ನಿಧಾನವಾಗಿ ಹೇಳ್ತಿದ್ದೆ."

"ನಿಧಾನವಾಗಿ ತಿಳಿದ್ರೂ ಒಂದೇ. ಯಾವಾಗ ತಿಳಿದ್ರೂ ಒಂದೇ. ಅವನು ಕೇಡಿಗ. ಅವನಾದ್ರೂ ಹೇಳಿದ್ನಾ ನಂಗೆ?"

"ಹೋಗ್ಲೀ ಈಗೇನು ಮಾಡೋಣ ಹೇಳು..."

"ನಂಜುಂಡಸ್ವಾಮಿಗೆ ಫೋನು ಮಾಡು. ಈ ಹುಡುಗನ್ನ ಇಲ್ಲಿಂದ ಕಳಿಸು. ಎಲ್ಲಿ ಬೆಳೆದ್ನೋ ಅಲ್ಲೇ ಇರಲಿ. ನಮಗೂ ಅವನಿಗೂ ಏನೂ ಸಂಬಂಧವಿಲ್ಲ."

"ಅವನು ನಿನ್ನ ಮೊಮ್ಮಗ್ರ ಕಣಮ್ಮಾ..."

"ಏನು ಮೊಮ್ಮಗ್ರ? ಮಗನೇ ನಮ್ಮ ಜತೇಲಿಲ್ಲ. ಅವನ ಮಗನ್ನ ಕಟ್ಟಿಕೊಂಡು ನಮಗೇನಾಗಬೇಕಾಗಿದೆ?"

"ಹೀಗೆ ನಿಷ್ಠುರವಾಗಿ ಮಾತಾಡ್ಬೇಡ. ಆ ಹುಡುಗಂದೇನು ತಪ್ಪು? ಓದುಕ್ಕೆ ಅಂತ ಬಂದಿದಾನೆ. ಓದು ಪೂರೈಸಲಿ. ಆಮೇಲೆ ಎಲ್ಲಿ ಕೆಲಸ ಸಿಗುತ್ತೋ ಅಲ್ಲಿಗೆ ಹೋಗ್ತಾನೆ..."

"ಹಾಗಾದ್ರೆ ಅವನನ್ನು ಹಾಸ್ಟೆಲ್ಲಿಗೆ ಸೇರಿಸಿಬಿಡು. ಅವನು ಈ ಮನೇಲಿರೋದು ಮಾತ್ರ ಬೇಡ."

"ನಿಂಗೆ ಗಂಡು ಮೊಮ್ಮಕ್ಕಳಿಲ್ಲ ಅನ್ನೋ ಕೊರತೆ ಇತ್ತು ಅಲ್ವೇನಮ್ಮ? ಈಗ ಮೊಮ್ಮಗ್ರ ತಾನಾಗಿಯೇ ಬಂದಿದಾನೆ ಇರಲಿ ಬಿಡು."

"ಇರಲಿ ಬಿಡು. ನಿಂಗೇನು ಕಷ್ಟ ಹೇಳು. ನಿನ್ನ ಪಾಡಿಗೆ ನೀನು ಊರಿಗೆ ಹೋಗ್ತೀಯ. ಅವನನ್ನು ಕಂಡಾಗಲೆಲ್ಲಾ ನನ್ನ ಹಳೆಯ ನೆನಪುಗಳು ನನ್ನನ್ನು ಕೆರಳಿಸುತ್ತವೆ. ನನ್ನ ಹೊಟ್ಟೇಲಿ ಸಂಕಟ ಆಗುತ್ತೆ.

"ಹೋಗಲಿ, ಈಗ ಮಾತ್ಯಾಕೆ? ನಾನು ಹಾಸ್ಟೆಲ್ಲಿನ ವ್ಯವಸ್ಥೆ ಮಾಡ್ತೀನಿ. ಅಲ್ಲೀವರೆಗೂ ನೀನು ಸುಮ್ನಿರು. ಅವನಿಗೆ ಮಾತ್ರ ಈ ನಿಜ ತಿಳಿಯಬಾರದು. ಅವನ ಭವಿಷ್ಯ ಹಾಳಾಗಿ ಹೋಗುತ್ತದೆ."

"ಒಂದಲ್ಲ ಒಂದು ದಿನ ಗೊತ್ತಾಗ್ದೇ ಇರುತ್ತಾ?"

"ಆಗ ನೋಡಿಕೊಳ್ಳೋಣ. ಈಗ ಮಾತ್ರ ದಯವಿಟ್ಟು ಎಲ್ಲರೂ ಸುಮ್ಮನಿರಿ. ಅಪ್ಪ ಮಾಡಿದ ತಪ್ಪಿಗೆ, ಮಗನಿಗೇಕೆ ಶಿಕ್ಷೆಯಾಗಬೇಕು?"

"ಹೌದು. ಕೇಶವ ಹೇಳೋದು ಸರಿ."

"ನೀವಿಬ್ರೂ ಇನ್ನೊಂದು ವಾರ ಇದ್ದು ಹೋಗ್ರೇ.... ನಂಗ್ಯಾಕೋ ಬುದ್ಧೀನೇ ಓಡೆದ ಹಾಗಾಗಿದೆ."

"ನಾನೇನೋ ಇರ್ತೀನಿ. ಆದರೆ ಸತ್ಯ ಹೊರಡ಼್ಲೇಬೇಕು. ಆ ಹುಡ್ಗಿಗೆ ಕಾಲೇಜು ಹೋಗುತ್ತಲ್ಲ."

"ನಾನು ಬೇಕಾದ್ರೆ ಇನ್ನೆರಡು ದಿನ ಇರ್ತೀನಿ. ಚುನ್ನೀನ ಬಸ್ಸು ಹತ್ತಿಸಿದ್ರೆ ಊರು ಸೇರ್ಕೋತಾಳೆ.... ಊರಿಗ್ಮುಂಚೆ ಉಡುಗೊರೇನ ಇಸ್ಕೊಂಡ ಹಾಗಾಯ್ತು..." ಅಕ್ಕ ತಂಗಿಯರು ಪರಸ್ಪರ ಮುಖ ನೋಡಿ ನಕ್ಕೊಂಡರು.

"ಇಲ್ಲಮ್ಮ ನಾನು ಇವತ್ತು ಹೊರಟು ಬಂದುಬಿಡ್ತೀನಿ ಅಂತ ನಿನ್ನ ಅಳಿಯಂಗೆ ಹೇಳಿಬಿಟ್ಟಿದೀನಿ. ಹೋಗ್ದೇ ಇದ್ರೆ ಕೋಪಿಸ್ಕೊಳ್ತಾರೆ. ಮತ್ತೆ ಇನ್ನೆಂಟು ದಿನಕ್ಕೆ ಬರ್ತೀನಿ."

"ಹುಂ. ನೀನು ಬರೋಳೇ.... ನನಗೋಸ್ಕರ ಯಾವಾಗ ಬಂದಿದೀಯ ಹೇಳು. ಸತ್ಯಾ ನೀನೇನು ಮಾಡ್ತೀಯ ಇಲ್ಲಿ ಇದ್ಕೊಂಡು? ನೀನೂ ಹೊರಡು. ನಿಮ್ಮನಿಮ್ಮ ಸಂಸಾರ ತಾಪತ್ರಯ ನಿಮಗೆ. ನನಗೋಸ್ಕರ ಯಾಕೆ ಒದ್ದಾಡ್ತೀರಿ. ಹೊರಡಿ ಹೊತ್ತಾಯ್ತು."

"ಅಮ್ಮ ಕೋಪ ಮಾಡ್ಕೋಬೇಡಮ್ಮ. ನಮ್ಗೂ ಸ್ವಾತಂತ್ರ್ಯವಿಲ್ಲ.'

"ನಂಗೂ ಗೊತ್ತು ಕಣ್ರೇ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಅಂತ ಗಾದೇನೇ ಹೇಳುತ್ತಲ್ಲ. ಮುಂದಿನ ವರ್ಷ, ಮಯೂರ ಮೈನೆರೆದಾಗ ಬಂದು ಆರತಿ ಎತ್ತೋರಂತೆ. ಆದರೆ.... ನನಗೂ ವಯಸ್ಸಾಯ್ತು. ಅಲ್ಲೀವರೆಗೂ ನಾನು ಇರಬೇಕಲ್ಲ."

"ಏನೇನೋ ಮಾತಾಡ್ಬೇಡ ನೀನು. ನಮಗೆಲ್ಲಾ ಬೇಸರವಾಗುತ್ತೆ."

"ನನ್ನ ಎಲ್ಲಾ ಮಾತೂ ನಿಮಗೆ ಬೇಸರವೇ." ಎನ್ನುತ್ತಾ ತಲೆಯ ಮೇಲಿನ ಸೆರಗನ್ನು ಸರಿಯಾಗಿ ಹೊದ್ದು ಹಿಂಬಾಗಿಲಿನಿಂದ ಹೊರಕ್ಕೆ ಹೊರಟುಹೋದಳು. ಅಕ್ಕತಂಗಿಯರು ಕೇಶವನ ಕಡೆ ಪೆಚ್ಚಾಗಿ ನೋಡಿದರು. ಆಟೋ ತರಲು ಹೋಗಿದ್ದ ರಾಜ ಆಟೋದೊಂದಿಗೆ ವಾಪಸ್ಸಾಗಿದ್ದ. ಕೇಶವ ಲಗೇಜುಗಳನ್ನು ಆಟೋದೊಳಗೆ ಇರಿಸಿದ. ಅಕ್ಕತಂಗಿಯರು ದೇವರಿಗೆ ನಮಸ್ಕರಿಸಿದರು.

"ಚುನ್ನೀ ಎಲ್ಲಿದೀಯೇ.... ಅಜ್ಜಿಗೆ, ಅತ್ತೆ ಮಾವಂಗೆ ನಮಸ್ಕಾರ ಮಾಡು ಬಾ. ಹೊತ್ತಾಗುತ್ತೆ" ಸತ್ಯವತಿ ಮಗಳನ್ನು ಕರೆದಳು. ಚುನ್ನಿ ಅಜ್ಜಿಯನ್ನು ಒಳಕ್ಕೆ ಕರೆತಂದು, ಮೂವರಿಗೂ ನಮಸ್ಕರಿಸಿದಳು. ಗೌರಮ್ಮ ಮುಖವನ್ನು ಊದಿಸಿಕೊಂಡೇ ಎಲ್ಲರಿಗೂ ಆಶೀರ್ವಾದ ಮಾಡಿದಳು.

"ರಾಜಾ, ನಾನೂ ಬಸ್ ಸ್ಟ್ಯಾಂಡ್‌ಗೆ ಹೋಗಿ ಬರ್ತೀನಿ" ಕೇಶವನೆಂದ. ಎಲ್ಲರೂ ರಾಜನನ್ನು ಹೊಸಬನನ್ನು ನೋಡುವಂತೆ ನೋಡುತ್ತಿದ್ದರು. ಗೌರಮ್ಮ ಮೊಮ್ಮಗನಲ್ಲಿ, ಮಗನ ಹೋಲಿಕೆಯನ್ನು ಹುಡುಕಿದಳು. ಇವನು ನಿಜವಾಗಿಯೂ ನಮ್ಮ ಅಣ್ಣನ ಮಗನೇನಾ ಎನ್ನುವಂತೆ ಅಕ್ಕತಂಗಿಯರು ಅವನನ್ನು ಮತ್ತೆ ಮತ್ತೆ ನೋಡಿದರು. ಏನೂ ಅರಿಯದ ರಾಜ, ಚುನ್ನಿಯ ಕಡೆ ನೋಡಿ ಮುಗುಳ್ನಕ್ಕ. ಅವಳು ಅವನಲ್ಲಿ ಆತ್ಮೀಯತೆಯನ್ನು ಕಂಡಳು. ದೊಡ್ಡವರಾಡಿದ ಮಾತುಗಳನ್ನು ಸ್ವಲ್ಪ ಸ್ವಲ್ಪ ಕೇಳಿಸಿಕೊಂಡಿದ್ದಳು. ರಾಧಾ, ಒಳಬಾಗಿಲಲ್ಲಿ ನಿಂತು ರಾಜನನ್ನು ಅನೇಕ ಬಾರಿ ನೋಡಿದಳು. ಅವಳಲ್ಲಿ ಹೊಸ ಆಸೆಯೊಂದು ಮೊಳೆಯಿತು. ಎಲ್ಲರೂ ಮುಂಬಾಗಿಲಿಗೆ ಬಂದರು. ಹೊರಟವರನ್ನು ಕಳುಹಿಸಿಕೊಟ್ಟು, ಅತ್ತೆ ಸೊಸೆ ಇಬ್ಬರೂ ಒಳಬಂದರು. ಇಬ್ಬರಿಗೂ ಯಾವ ಮಾತೂ ಬೇಕಿರಲಿಲ್ಲ. ಆದರೂ ಗೌರಮ್ಮನಿಗೆ ಒಂದು ವಿಷಯ ಇತ್ಯರ್ಥವಾಗಬೇಕಾಗಿತ್ತು. ಸ್ಕೂಲಿಗೆ ಹೋಗಿರುವ ಮಕ್ಕಳು ವಾಪಸ್ಸಾಗುವುದರೊಳಗೆ ಮಾತನಾಡಿಬಿಡಬೇಕೆಂದುಕೊಂಡು, ಸೊಸೆಯನ್ನು ಕರೆದಳು.

"ಏನಂದ ನಿನ್ನ ಗಂಡ? ಅವನ ಮನಸ್ನಲ್ಲಿ ಏನಿದೆ?" ಹಿಂದೆ ಮುಂದೆ ಅರಿವಾಗದೇ ರಾಧಾ ಅತ್ತೆಯನ್ನು ನೋಡಿದಳು.

"ಯಾವ ವಿಷಯ? ಯಾರ ಬಗ್ಗೆ ಕೇಳ್ತಿದೀರಿ?"

"ಇನ್ಯಾರು? ಅದೇ ತಬ್ಬಲಿ, ಮುಂಡೇದರ ವಿಷಯ? ನಿನ್ನ ಗಂಡನಿಗೆ ಈ ವಿಷಯ ಮುಂಚೇನೇ ಗೊತ್ತಿತ್ತಂತಾ?"

"ಇಲ್ಲಾಂತ ಕಾಣುತ್ತೆ.... ನೆನ್ನೇನೇ ಅವರು ಮೊದಲು ನನಗೆ..."

"ಅಂದ್ರೇ ನೆನ್ನೇನೇ ನಿನಗೆ ಗೊತ್ತಿತ್ತು." ಗೌರಮ್ಮ ಸಿಡುಕಿದಳು.

"ಇಲ್ಲ ಅತ್ತೆ... ಬರೀ ನಿಮ್ಮ ಮಗನ ವಿಷಯಾನ ಹೇಳಿದ್ರು. ಅವರ ಮಗನ ಬಗ್ಗೆ ಅವರಿಗೂ ಗೊತ್ತಿರಲಿಲ್ಲ. ಗೊತ್ತಿದ್ದಿದ್ರೆ ಹೇಳಿರುತಿದ್ರು..."

"ಸರಿ ಸರಿ ಗಂಡ ಹೆಂಡತಿ ಇಬ್ರೂ ಸೇರ್ಕೊಂಡು, ನನಗೇ ಮುಚ್ಚುಮರೆ ಮಾಡ್ತಿದೀರಿ. ನೀವೂ ಮಕ್ಕಳೊಂದಿಗರು. ನಾಳೆ ನಿಮ್ಮ ಮಕ್ಕಳೇ ನಿಮಗೆ ಮೋಸ ಮಾಡ್ದಾಗ, ಆ ನೋವು ಏನೂಂತ ಅನುಭವಕ್ಕೆ ಬರುತ್ತೆ."

"ನನ್ನನ್ನ ನಂಬಿ ಅತ್ತೆ. ನಾನು ಏನೂ ಮುಚ್ಚುಮರೆ ಮಾಡಿಲ್ಲ. ನನ್ನ ಮಕ್ಕಳ ಮೇಲಾಣೆ."

"ಥೂ... ಇದಕ್ಕೆಲ್ಲಾ ಬೆಳೆಯುತ್ತಿರುವ ಮಕ್ಕಳ ಮೇಲಾಣೆ ಯಾಕೆ? ಈಗ ಆ ಹುಡುಗನ್ನ ಏನು ಮಾಡ್ಬೇಕು ಅಂತಿದೀರಿ...?"

"ನಿಮಗೆ ಒಪ್ಪಿಗೆ ಇದ್ರೆ, ಒಂದ್ಮಾತು ಕೇಳ್ತೀನಿ. ನೀವು ಬೇಜಾರು ಮಾಡ್ಕೋಬಾರದು."

"ಇನ್ನು ಯಾವ್ಯಾವುದಕ್ಕೆ ಅಂತ ಬೇಜಾರು ಮಾಡ್ಕೊಳ್ಳಿ? ಅದೇನು ಹೇಳ್ತಿಯೋ ಹೇಳಿಬಿಡು. ಕೇಳಿಯೇ ಬಿಡ್ತೀನಿ."

"ನಿಮಗೆ ಒಪ್ಪಿಗೆ ಆದ್ರೆ, ನಾವು ರಾಜನ್ನ ದತ್ತು ತಗೋತೀವಿ."

"ಆಂ? ಏನಂದೆ?..." ತಮಾಷೆಯ ಮಾತು ಎಂಬಂತೆ ಪ್ರಶ್ನಿಸಿದಳು.

"ಹುಂ. ಅತ್ತೆ... ಹೇಗೂ ರಾಜ ನಿಮ್ಮ ಮೊಮ್ಮಗನೇ.... ನಮ್ಮ ಹಿರಿಮಗನಾಗಿ ಈ ಮನೇರಿರ್ಲಿ ಅಂತ ನಂಗೆ ಆಸೆ..."

"ಚೆನ್ನಾಗಿದೆ ನಿನ್ನ ಆಸೆ. ಅವನು ನನ್ನ ಮೊಮ್ಮಗ ಅಂತ ನಾನೇನು ಒಪ್ಪಿಕೊಂಡಿಲ್ಲ. ಅವನ್ಯಾರೋ? ನಾವ್ಯಾರೋ?"

"ಹಾಗನ್ಬೇಡಿ ಅತ್ತೆ... ಪಾಪ ಆ ಹುಡುಗಂದೇನು ತಪ್ಪು.?

"ತಪ್ಪು ಯಾರದ್ದೇ ಇರಲಿ.... ಇವನು ಆ ತಪ್ಪಿನ ಫಲ.... ನನ್ನ ಮಗನೇ ನನಗೆ ಬೇಡವಾಗಿರುವಾಗ, ಇವನ್ಯಾಕೆ? ಇವನನ್ನು ಆದಷ್ಟು ಬೇಗ ಹಾಸ್ಟೆಲ್ಲಿಗೆ ಸೇರಿಸಿ. ಕೈತೊಳ್ಕೊಳ್ಳಿ. ಇವನಿಂದ ನಮಗೆ ಏನೂ ಆಗಬೇಕಾಗಿಲ್ಲ."

"ನನಗೆ ಆಗಬೇಕಾಗಿದೆ. ಗಂಡು ಮಕ್ಕಳಿಲ್ಲ ಎನ್ನುವ ಕೊರತೆ ನನಗಿದೆ. ಇನ್ನು ನಮಗೆ ಮಕ್ಕಳಾಗುವ ಸಾಧ್ಯತೆ ಇಲ್ಲ. ಇದ್ದರೂ ಗಂಡು ಮಗು ಹುಟ್ಟುತ್ತೆ ಅನ್ನಾವುದಾದ್ರೂ ಹೇಗೆ?"

"ಅದಕ್ಕೇ...?" ಪ್ರಶ್ನೆಯಲ್ಲಿ ಏನೋ ತಳಮಳ.

"ರಾಜಾ ಈ ಮನೆಯ ಹುಡುಗ.... ಇಲ್ಲಿ ಬಂದು ಸೇರಿದಾನೆ. ಅವನು ಇಲ್ಲಿಯೇ ಇರಲಿ..."

"ನೀನು ಹೀಗೆಲ್ಲಾ ಎಂದೂ ಮಾತಾಡ್ತಿದ್ದೋಳಲ್ಲ. ರಾಜ ಏನು ಮಂಕುಬೂದಿ ಎರಚಿದಾನೆ! ಅವನನ್ನೇ ದತ್ತು ತಗೋಬೇಕು ಅಂತೇನಿಲ್ಲ. ಬೇರೆ ಯಾವುದಾದ್ರೂ ಚಿಕ್ಕ ಮಗೂನ ದತ್ತು ತಗೊಂಡ್ರೆ ಆಯ್ತು.... ನಿನ್ನ ಹೆಣ್ಣು ಮಕ್ಕಳು ಏನನ್ನುತ್ತೋ.... ಈ ಕಾಲ್ದೋವ್ರು. ಎಲ್ಲಾ ಗೊತ್ತಿರುತ್ತೆ."

"ಮಕ್ಕಳ ವಿಷಯ ನನಗಿರಲಿ. ಆದ್ರೆ ಒಂದ್ಮಾತು. ದತ್ತು ತಗೊಂಡ್ರೆ ರಾಜನ್ನ ಮಾತ್ರ... ಬೇರೆ ಯಾರೂ ಬೇಡ."

"ಇದು ಆಗದ ಹೋಗದ ಮಾತು. ಅತ್ಲಾಗೆ ಬಿಟ್ಹಾಕು. ಕೇಶವ ವಾಪಸ್ಸು ಬರಲಿ.ಇವತ್ತೇ ಒಂದು ಇತ್ಯರ್ಥ ಮಾಡ್ತೀನಿ."

"ದಯವಿಟ್ಟು, ರಾಜನ ಎದುರಿಗೆ ಯಾವ ಮಾತೂಬೇಡ ಅತ್ತೆ."

"ನಂಗೇನು ಅಷ್ಟೂ ಗೊತ್ತಾಗುಲ್ವಾ? ನಂಗೆ ಹೇಳಿಕೊಡ್ತೀಯಲ್ಲ ಎನ್ನುತ್ತಾ ಮಾತನ್ನು ಮುಂದುವರೆಸುವ ಆಸೆ ಇಲ್ಲದೇ ಅಲ್ಲಿಂದ ಸರಿದುಹೋದಳು. ರಾಧಾಳಿಗೆ ಅಸಮಾಧಾನವಾಗಿತ್ತು. ನಾನು ಆಡಿದ್ದರಲ್ಲಿ ತಪ್ಪೇನಿದೆ. ಇವರ ಮನೆಯ ಒಳ್ಳೆಯದಕ್ಕೇ ತಾನೇ ಹೇಳುತ್ತಿರುವುದು. ನಾನು ಇದುವರೆಗೂ ಭಾವನನ್ನು ನೋಡಿರಲಿಲ್ಲ. ರಾಜ, ಭಾವನ ಮಗ ಅಂತ ತಿಳಿದಿರಲಿಲ್ಲ. ಅತ್ತೆ ಹೀಗೆಯೇ ಒರಟಾಗಿ ಮಾತನ್ನಾಡಿ ಮಗ ಮನೆಯಿಂದ ಹೋಗುವಂತೆ ಮಾಡಿರಬೇಕು. ನನ್ನ ಈ ಆಸೆಗೆ, ಬಹುಶಃ ಗಂಡ ಬೇಡ ಎನ್ನಲಾರ. ಇವರ ಸಹಕಾರ ಇದ್ದರೆ ನನ್ನ ಮಾತು ನಡೆಯುತ್ತದೆ ಎಂದುಕೊಂಡಳು.

* * * *

"ಹದಿನೈದು ದಿನಗಳ ಮಟ್ಟಿಗೆ, ನಾನು ಆಫೀಸಿನ ಕೆಲಸದ ಮೇಲೆ ಬಾಂಬೆಗೆ ಹೋಗಬೇಕಾಗಿದೆ" ಕೇಶವ ಆಫೀಸಿನಿಂದ ಬರುತ್ತಿದ್ದಂತೆಯೇ ಹೆಂಡತಿಗೆ ಹೇಳಿದ.

"ಹದಿನೈದು ದಿನಗಳು? ಇಲ್ಲಿ?" ಆತಂಕದಿಂದ ಕೇಳಿದಳು.

"ಅಮ್ಮ ಇದಾಳೆ. ರಾಜಾ ಇರ್ತಾನೆ.... ಏನೂ ತೊಂದರೆ ಆಗುಲ್ಲ"

"ನಿಮ್ಮಮ್ಮಂದೇ ಒಂದು ಸಮಸ್ಯೆ. ಅವರಿಗೆ ರಾಜನ್ನ ಕಂಡರೆ ಆಗುಲ್ಲ. ಅವನೊಡನೆ ಜಗಳ ಆಡಿ, ಅವನನ್ನು ಮನೆಬಿಟ್ಟು ಓಡಿಸಿಬಿಟ್ಟರೇ....?"

"ಹಾಗೆಲ್ಲಾ ಏನೂ ಮಾಡುಲ್ಲ. ಅವಳ ಮೊಮ್ಮಗ ಅವನು."

"ಮಗನನ್ನೇ ದೂರ ಮಾಡಿಕೊಂಡವರು ನಿಮ್ಮಮ್ಮ... ಮೊಮ್ಮಗನ ಮೇಲೆ ಏನು ಪ್ರೀತಿ ಇದೆ?."

"ಪ್ರೀತಿ ಇಲ್ಲ ಅಂತ ಹೇಗೆ ಹೇಳ್ತೀಯ?"

"ಇಡೀ ದಿನವೆಲ್ಲಾ ಅವರ ಜೊತೇಲಿ ಇರೋಳು ನಾನು. ಅವರ ಮಾತು, ಭಾವನೆ, ನಿಮಗಿಂತ ಚೆನ್ನಾಗಿ ಅರ್ಥವಾಗುತ್ತೆ."

"ರಾಜನ್ನ ಬೈದಳಾ?.... ಇಲ್ವಲ್ಲಾ..."

"ಮಾತನ್ನೇ ಆಡಿಸುಲ್ಲ. ಸಿಡಿಸಿಡಿ ಅಂತ ಅಂತಾರೆ."

"ನೀನೂ ಸಿಡಿಮಿಡಿಗೊಳ್ತಿದ್ದೆ. ಅದೇನು ಈಗ ಬದಲಾಗಿರುವ ಹಾಗಿದೆ."

"ನಾನೊಂದು ಮಾತು ಹೇಳ್ತೀನಿ. ನಿಮಗೇನನ್ನಿಸುತ್ತೋ?"

"ಏನಾದರೂ ಅನ್ನಿಸಲಿ. ಏನು ಹೇಳ್ತೀಯೋ ಹೇಳಿಬಿಡು. ಕಡೆಗೆ ನಡೆಯೋದು ನಿನ್ನ ಮಾತೇ."

"ಏನಿಲ್ಲ..." ರಾಧಾ ಸೀರೆಯ ಸೆರಗಿನ ತುದಿಯನ್ನು ಬೆರಳಿಗೆ ಸುತ್ತಿಕೊಳ್ಳುತ್ತಾ ನುಡಿದಳು.

"ಅದೇನು ಬೇಗ ಹೇಳ್ಬಾರ್ದಾ? ಈ ವೈಯಾರ ಎಲ್ಲಾ ಯಾಕೆ? ವೈಯಾರ ಆಡೋ ವಯಸ್ಸಾ ನಿಂದು! ಮಗಳು ಮದುವೆಗೆ ಸಿದ್ಧವಾಗಿದಾಳೆ."

"ಹೀಗೆಲ್ಲಾ ಆಡಿದ್ರೆ ನಂಗೆ ಕೋಪ ಬರುತ್ತೆ.... ನಾನು ನಿಮ್ಮ ಹತ್ರ ಮಾತನ್ನೇ ಆಡುಲ್ಲ ಅಷ್ಟೇ."

"ಸರಿ ಹೇಳೇ ಮಹಾರಾಯ್ತಿ. ಇಷ್ಟಕ್ಕೆಲ್ಲಾ ಕೋಪ ಯಾಕೆ? ನಂಗೆ ಸ್ವಲ್ಪ ಬೇರೆ ಕೆಲಸ ಇದೆ. ತಿಂಡಿ ಕಾಫಿ ಕೊಡು" ಅವಳ ಸೆರಗಿನೊಳಗೆ ತನ್ನ ಕೈಗಳನ್ನು ತೂರಿಸಿದ. ಅಷ್ಟರಲ್ಲಿ ಗೌರಮ್ಮನ ನೆರಳು ಕಂಡಿದ್ದರಿಂದ ಕೇಶವ ಕೈಗಳನ್ನು ಹಿಂದಕ್ಕೆ ತೆಗೆದುಕೊಂಡ. ರಾಧಾ ಅಲ್ಲಿಂದ ಸರಿದಳು. ಮಾತುಗಳೂ ನಿಂತವು.

"ಅದೇನೋ ಬೇಗ ಬಂದ್ಯಾ? ಮಕ್ಕಳಿನ್ನೂ ಸ್ಕೂಲ್ನಿಂದ ಬಂದಂತಿಲ್ಲ."

"ಹೂಂ. ಸ್ವಲ್ಪ ಬೇಗ ಬಂದೆ. ಮತ್ತೆ ಹೋಗ್ಬೇಕು. ರಾಧಾ, ಕಾಫಿ ಕೊಡ್ತೀಯಾ? ಮುಖ ತೊಳ್ಕೊಂಡು ಬರ್ತೀನಿ" ಅಲ್ಲಿಂದ ಕದಲಿದ್ದ. ಗೌರಮ್ಮ ಅವನು ಹೋದ ದಿಕ್ಕನ್ನೇ ನೋಡಿದಳು. ಮಗನ ಮೇಲೆ ಅಸಹನೆ ಮೂಡಿತ್ತು. "ನನ್ನ ಕಣ್ಣು ತಪ್ಪಿಸಿ ಮಾತಾಡ್ತಾನೆ. ಅಂಥದ್ದೇನು ಆಗಿರೋದು ಈಗ?"...

ಕಾಫಿ ತಿಂಡಿ ಮುಗಿಸಿ, ಕೇಶವ ಮತ್ತೆ ಹೊರಕ್ಕೆ ಹೊರಟುಹೋಗಿದ್ದ. ಮಕ್ಕಳು ಒಬ್ಬೊಬ್ಬರಾಗಿ ಸ್ಕೂಲಿನಿಂದ ಹಿಂತಿರುಗಿದ್ದರು. ಮಧುರ ಯಾಕೋ ಸಪ್ಪಗಿದಾಳೆಂದೆನಿಸಿತ್ತು. ಹತ್ತಿರ ಹೋಗಿ ಕೇಳಿದಳು.

"ಯಾಕೇ ಏನಾಯ್ತೇ? ಹುಶಾರಾಗಿದೀಯ ತಾನೇ?"

"ಹೂಂ. ನಮ್ಮ ಇವತ್ತು ಕಡೇ ಪಿರಿಯಡ್ ಪಿ.ಟಿ. ಕ್ಲಾಸಿತ್ತು. ಯಾಕೋ ಸುಸ್ತಾಗಿದೆ. ಕಾಲುಗಳು ನೋಯ್ತಿವೆ."

"ಹಾರ್ಲಿಕ್ಸ್ ಮಾಡಿಕೊಡ್ತೀನಿ. ಕುಡಿದು ಒಂದು ಗಳಿಗೆ ಮಲಕ್ಕೋ..."

"ಒಂದು ರಾಶಿ ಹೋಂವರ್ಕ್ ಇದೆ." ಮಧುರ ಸ್ಕೂಲ್ ಬ್ಯಾಗುಗಳನ್ನಿಟ್ಟು ಯೂನಿಫಾರಂ ಬಿಚ್ಚಿ, ನೈಟಿ ಧರಿಸಿ ಹೊರಬಂದಳು.

"ಈ ನೈಟಿ ತುಂಬಾ ಬಿಗಿಬಿಗಿಯಾಗಿ ಕಾಣ್ತಿದೆ. ಇದನ್ನು ಬಿಚ್ಚಿ, ಚೂಡಿದಾರ್ ಹಾಕ್ಕೋ" ರಾಧಾ ಸಲಹೆಯನ್ನಿತ್ತಳು.

"ಏನಿಲ್ಲ. ಹಿತವಾಗಿದೆ. ಹೊಸದು ಇದು. ಇರಲಿ ಬಿಡು."

"ಹೇಳಿದಷ್ಟು ಕೇಳು ಮಧು.... ಈಗ ನೀನು ಚಿಕ್ಕ ಹುಡುಗಿಯಲ್ಲ. ಅಲ್ಲದೇ ರಾಜನೂ ಇದಾನೆ."

"ಹೋಗಮ್ಮ ನೀನೊಬ್ಬಳು. ನಾನು ರಾಜನ ಎದುರಿಗೇ ಓಡಾಡುಲ್ಲ. ಮಯೂರ ನಂಗಿಂತ ದಪ್ಪಕ್ಕಿದ್ದಾಳೆ. ಅವಳಿಗೆ ನೀನು ಏನೂ ಹೇಳುಲ್ಲ" ಮಧುರ ಮುನಿಸಿಕೊಂಡು ಮತ್ತೆ ರೂಮಿನೊಳಕ್ಕೆ ಹೋಗಿ ಬಾಗಿಲನ್ನು ಹಾಕಿಕೊಂಡಳು.

"ಏನಂತೆ ಅವಳಿಗೆ? ಬರ್ತಿದ್ದ ಹಾಗೇ ಕೋಪ?" ಗೌರಮ್ಮ ಹಿಂದೆ ನಿಂತು ಕೇಳಿದಾಗ, ರಾಧಾ ಮಾತಾಡಲಿಲ್ಲ.

"ಅಲ್ಲ, ನಿಂಗ್ಯಾಕೆ ನನ್ಮೇಲೆ ಮುನಿಸು ಅಂತ?.... ರಾಜ ಏನು ನಿನ್ನ ಅಕ್ಕನ ಮಗನೇ? ಅಣ್ಣನ ಮಗನೇ.... ನಿಂಗ್ಯಾಕೆ ಅತೀ ಅಭಿಮಾನ..."

"ಹಾಗೇನಿಲ್ಲ ಅತ್ತೆ. ಈಗ ಮಕ್ಕಳ ಎದುರಿಗೆ ಈ ಮಾತೆಲ್ಲಾ ಯಾಕೆ?"

"ಮಕ್ಕಳು ಚಿಕ್ಕವರಲ್ಲ. ಇನ್ನೆರಡು ವರ್ಷ ಕಳದ್ರೆ, ನಿನ್ನ ಮಗಳಿಗೆ ವರಗಳನ್ನು ನೋಡಬೇಕಾಗುತ್ತೆ. ಇನ್ನು ಆ ಮಯೂರಿನೋ ಬಜಾರಿ... ಅಕ್ಕನ ಜೊತೆಜೊತೆಗೆ ನೆರೆದು ನಿಲ್ತಾಳೆ."

"ಯಾರನ್ನಜ್ಜಿ ಬಜಾರಿ ಅನ್ನೋದು. ನೀವೂ ಚಿಕ್ಕೋರಾಗಿದ್ದಾಗ ನನ್ನ ಹಾಗೇ ಇದ್ರಂತೆ. ನನ್ನ ಹಾಗೇ ಆಡ್ತಿದ್ರಂತೆ. ನೀವೇ ಹೇಳಿದ್ರಿ..."

"ಇದಕ್ಕೇ ನಿನ್ನನ್ನ ಬಜಾರಿ ಅಂದದ್ದು. ನಾನು ನಿನ್ನ ಹಾಗೇ ಇದ್ದದ್ದು, ಆಡ್ತಿದದ್ದು ನಿಜ.... ಆದರೆ ಅಜ್ಜೀನ ಎಂದೂ ದಬಾಯಿಸ್ಲಿಲ್ಲ ನಾನು"

"ಯಾಕ್ಹೇಳಿ? ನಿಮಗೆ ಅಜ್ಜೀನೇ ಇರ್ಲಿಲ್ಲ. ನೀವು ಹುಟ್ತಿದ್ದ ಹಾಗೆ ಅವರು ಗೊಟಕ್ ಅಂದಿದ್ರು." ಮಯೂರ ಕೇಕೇ ಹಾಕಿ ನಕ್ಕಳು.

"ಹಾಕ್ತೀನಿ ನೋಡು" ಗೌರಮ್ಮ ಕೈ ಎತ್ತಿದಳು. ಮಯೂರ ತಪ್ಪಿಸಿಕೊಂಡಳು. ನೋಡು ಹೇಗೆ ಮಾತಾಡ್ತಾಳೆ ಎನ್ನುವಂತೆ ರಾಧಳ ಕಡೆ ನೋಡಿದಳು.

"ಮಯೂರ, ವಿಪರೀತ ಆಯ್ತು ನಿಂದು. ದೊಡ್ಡೋರ ಜೊತೆ ಹೀಗಾ ಮಾತಾಡೋದು... ಅವರು ನಿನ್ನ ಅಜ್ಜಿ."

"ಅಜ್ಜಿ ಆಗಿದ್ದಕ್ಕೆ ನಾನು ಮಾತಾಡಿದ್ದು. ಬೇರೆ ಯಾರೋ ಆಗಿದ್ದಿದ್ರೆ ನಾನು ಮಾತನ್ನೇ ಆಡ್ತಿರಲಿಲ್ಲ. ಅಲ್ವಾ ಅಜ್ಜೀ.... ಅದೇನದು ಇವತ್ತು ಇಷ್ಟು ಮನೇಲೇ ಇದೀರಿ. ದೇವಸ್ಥಾನಕ್ಕೆ ಹೋಗ್ಲಿಲ್ವಾ?"

"ಹುಂ. ಈಗ ಹೊರಡ್ತೀನಿ. ನೀನೂ ಬರ್ತಿಯೇನು ನನ್ನ ಜೊತೆಗೆ."

"ದೇವರು, ದೇವಸ್ಥಾನ ಎಲ್ಲಾ ನಿಮಗೇ ಅಜ್ಜಿ.... ನಂಗೆ ಒಂದು ರಾಶಿ ಹೋಂವರ್ಕ್ ಇದೆ. ಅಮ್ಮ ತಿನ್ನೋಕೆ ಏನು ಕೊಡ್ತೀಯ? ವಿಪರೀತ ಹೊಟ್ಟೆ ಹಸೀತಿದೆ..."

"ಹುಂ... ಕೊಡ್ತೋಣ. ಮಂದಾರ ಎಲ್ಲಿ ನಿನ್ನ ಜೊತೆಗೆ ಬರ್ಲಿಲ್ವಾ?"

"ಇಲ್ಲ. ಅವಳೆಲ್ಲೂ ಕಾಣ್ಲಿಲ್ಲ. ನಾನು ನನ್ನ ಫ್ರೆಂಡ್ಸ್ ಜೊತೇಲಿ ಬಂದೆ. ಅವಳೆಲ್ಲಿದ್ಲೋ ಯಾರಿಗ್ಗೊತ್ತು?"

"ದಿನಾ ಒಟ್ಟಿಗೇ ಬರ್ಬೇಕು ಅಂತ ಗೊತ್ತುತಾನೇ.... ಅಷ್ಟು ನಿಗಾ ಬೇಡ್ವಾ? ನಿಂಗೆ?"

"ಬರ್ತಾಳೆ ಬಿಡಮ್ಮ. ಅವಳೇನು ಚಿಕ್ಕ ಮಗುವಲ್ಲ. ನೀನ್ಯಾಕೆ ಇಷ್ಟು ಗಾಬರಿಯಾಗ್ತೀಯ?"

"ನಾನು ಗುಡಿಗೆ ಹೋಗಿ ಬರ್ತೀನಿ" ಎನ್ನುತ್ತಾ ಗೌರಮ್ಮ ಹೊರಟಳು. ಮಧುರ ಚೂಡಿದಾರ್ ಧರಿಸಿ ಹೊರಬಂದಳು. ಎದುರಿಗೆ ಕಂಡ ಮಯೂರ ಮಿಕಮಿಕ ಅಕ್ಕನನ್ನೇ ನೋಡಿದಳು.

"ಇವತ್ತಿಂದ ಈ ಮನೇಲಿ ನೈಟಿ ಬಂದ್.... ಏನಿದ್ರೂ ಚೂಡಿದಾರ್..." ದುಪ್ಪಟವನ್ನು ಸರಿ ಮಾಡಿಕೊಳ್ಳುತ್ತಾ ನುಡಿದಳು.

"ಯಾಕೇ ಏನಾಯ್ತು? ಅಜ್ಜಿ ಏನಾದ್ರೂ ಅಂದ್ರಾ?"

"ಅಜ್ಜಿ, ಅಮ್ಮ ಎಲ್ಲಾ ಒಂದೇ. ರಾಜ ಈ ಮನೇಲಿ ಇರುವವರೆಗೆ ನಾವು ಫ್ರೀಯಾಗಿ ಓಡಾಡೋದಂತೂ ಸಾಧ್ಯವಿಲ್ಲ."

"ಅವನೇನು ಮಹಾರಾಜಾನಾ?... ಬರೀ ರಾಜ.... ಈ ಮನೆಯ ಪೇಯಿಂಗ್ ಗೆಸ್ಟ್. ಅವನಿಗ್ಯಾಕೆ ಕೇರ್ ಮಾಡ್ಬೇಕು. ನಾವು ಮಿನಿಸ್ಕರ್ಟ್ ಹಾಕ್ಕೊಂಡು ತಿರುಗಾಡಿದ್ರೂ. ಅವನ ಕಣ್ಣು ನಮ್ಮ ಮೇಲೆ ಹರಿದಾಡಬಾರದು. ಹೌದಲ್ವಾ?"

"ಸಾಕು ತಲೆಹರಟೆ. ಬನ್ನಿ ತಿಂಡಿ ತಿನ್ನಿ. ಮಂದಾರ ಯಾಕೋ ಇನ್ನು ಬಂದಿಲ್ಲವಲ್ಲ ಅಂತ ನನಗೆ ಕಳವಳ ಆಗ್ತಿದೆ. ಯಾವುದೋ ಚರ್ಚೆ ನಿಮಗೆ" ರಾಧಾ, ಮುಂಬಾಗಿಲಿಗೆ ಬಂದು ನಿಂತಳು.

ಮುಂಬಾಗಿಲಿನಲ್ಲಿ ಆತಂಕದ ಮುಖವನ್ನು ಹೊತ್ತು ನಿಂತಿದ್ದ ರಾಧಾಳಿಗೆ, ರಾಜನನ್ನು ಕಂಡು ಸ್ವಲ್ಪ ಧೈರ್ಯ ಬಂತು. ಅವನೂ ವಿಸ್ಮಯದಿಂದ ಅವಳನ್ನೇ ನೋಡಿದ. ತನಗಾಗಿ ಈಕೆ ಕಾಯುತ್ತಿರಬಹುದೇ ಅಂತ ಅನ್ನಿಸಿದಾಗ ಒಂದು ಗಳಿಗೆ ಮನ ಉಲ್ಲಾಸಗೊಂಡಿತು. ಮರುಗಳಿಗೆಯೇ ಈಕೆಯೇನು ನನ್ನ ಸ್ವಂತ ತಾಯಿಯೇ, ತನಗೋಸ್ಕರ ಕಾಯುವವರ್ಯಾರಿಲ್ಲ ಎನ್ನುವ ವಾಸ್ತವದ ಅರಿವಾದಾಗ ಮನಸ್ಸು ಮುದುಡಿತು. ಪಕ್ಕದಲ್ಲಿದ್ದ ಮೆಟ್ಟಲ ಬಳಿಗೆ ಹೋಗುವಷ್ಟರಲ್ಲಿ ರಾಧಾ ಕರೆದಳು. ಅವನು ತಿರುಗಿದ.

"ಮಂದಾರ ಯಾಕೋ ಇನ್ನೂ ಬಂದಿಲ್ಲ. ಅವಳಿಗೋಸ್ಕರ ಕಾಯ್ತಾ ನಿಂತಿದ್ದೆ" ಸುಮ್ಮನೆ ಎಂಬಂತೆ ಹೇಳಿದಳು.

"ಹೌದಾ ಅಮ್ಮ.... ನಾನು ಹೋಗಿ ನೋಡ್ಕೊಂಡು ಬರ್ಲಾ?" ಅವನಿಂದ ಆ ಉತ್ತರವನ್ನು ನಿರೀಕ್ಷಿಸಿದ್ದವಳಿಗೆ ಧೈರ್ಯ ಮೂಡಿತು.

"ಮೊದಲು ಕಾಫಿ ತಿಂಡಿ ತಗೋ.... ಆಮೇಲೆ ಹೋಗುವಂತೆ" ತನ್ನ ಸ್ವಾರ್ಥವನ್ನೂ ಬದಿಗಿಟ್ಟು ನುಡಿದಳು.

"ಪರವಾಗಿಲ್ಲ ಅಮ್ಮಾ, ಮೊದಲು ಹೋಗಿ ನೋಡ್ಕೊಂಡು ಬರ್ತೀನಿ. ನಿಮಗೆ ತುಂಬಾ ಆತಂಕ ಆಗ್ತಿದೆ."

"ಹೌದು ರಾಜ. ಮಕ್ಕಳು ಮನೆಗೆ ಬರೋ ಹೊತ್ತಿಗೆ ಬರದಿದ್ದರೆ ಎದೆ ಹೊಡೆದುಕೊಳ್ಳುತ್ತೆ. ಇವರೂ ಮನೇಲಿಲ್ಲ. ಅಜ್ಜಿ ದೇವಸ್ಥಾನಕ್ಕೆ ಹೋದರು. ನಿನ್ನನ್ನು ಕಂಡು ನಂಗೆ ಎಷ್ಟೋ ಧೈರ್ಯ ಬಂತು. "ಅವಳ ಮಾತು ಮುಗಿಯುತ್ತಿದ್ದಂತೆ. ಅವನು ಮತ್ತೆ ರಸ್ತೆಗೆ ಇಳಿದ.

"ಅಮ್ಮಾ ಯಾರ ಹತ್ರ ಮಾತಾಡ್ತಿದ್ದೆ! ಮಂದಾ ಬಂದ್ಲಾ?" ಎನ್ನುತ್ತ ಮಯೂರ ಬಳಿಗೆ ಬಂದಳು.

"ನೀನಿನ್ನೂ ಯೂನಿಫಾರಂ ಬಿಚ್ಚಲಿಲ್ವಾ?... ಸ್ಕೂಲು ಮೈಲಿಗೆ. ಮೊದಲು ಬಿಚ್ಚಿ ಚೂಡಿದಾರ್ ಹಾಕ್ಕೋ."

"ಚೂಡಿದಾರ್ ಯಾಕೆ? ನೈಟಿ ಹಾಕ್ಕೊಂಡ್ರೆ ಏನೀಗ?"

"ಹೇಳಿದಷ್ಟು ಕೇಳು. ನೈಟಿ ಬೇಡ" ಸಿಡುಕಿದಳು.

"ಮಂದಾ ಬಂದಿಲ್ಲ ಅನ್ನೋ ಆತಂಕಕ್ಕೆ ನನ್ಮೇಲೆ ಯಾಕೆ ರೇಗ್ತೀಯ?" ಮಯೂರ ಕಾಲನ್ನು ದಪ್ ದಪ್ ಎಂದು ಎತ್ತಿ ಹಾಕುತ್ತಾ ಒಳ ನಡೆದಳು. ಕಾಲಿನ ಗೆಜ್ಜೆ ಝಣ್ ಝಣ್ ಎಂದು ಸದ್ದು ಮಾಡಿತು.

"ಗೆಜ್ಜೇನ ಇನ್ನೂ ತೆಗೆದಿಲ್ವಾ ನೀನು..."

"ಇಲ್ಲ ತೆಗೆದಿಲ್ಲ. ತೆಗೆಯೋದೂ ಇಲ್ಲ. ಗೆಜ್ಜೆ ಹಾಕ್ಕೋಬೇಡ, [illegible] ಹಾಕ್ಕೋಬೇಡ. ನೈಟಿ ಬೇಡ. ಸ್ಕರ್ಟ್ ಬೇಡ. ಥತ್ ಯಾವುದಕ್ಕೂ ಸ್ವಾತಂತ್ರ್ಯ ಇಲ್ಲ ಈ ಮನೇಲಿ." ಮಗಳ ಕೆನ್ನೆಗೆ ಬಾರಿಸುವಷ್ಟು ಕೋಪ ಬಂದಿತ್ತು. ಆದರೂ ತಡೆದುಕೊಂಡಳು.

"ಯಾಕೇ ಹೀಗೆಲ್ಲಾ ಮಾತಾಡ್ತೀಯ? ಮಧುರ ಹೇಳಿದ ಹಾಗೆ ಕೇಳುಲ್ವಾ? ನಿನಗೇನಾಗಿದೆ ಅಂತ. ಹೋಗ್ಲಿ ಮಂದಾರಳ ಫ್ರೆಂಡ್ಸ್ ಮನೆಗಳು ಗೊತ್ತಾ ನಿಂಗೆ?"

"ಬರ್ತಾಳೆ ಬಿಡಮ್ಮ ಯಾಕೆ ಹೀಗಾಡ್ತೀಯ? ಅವಳೇನು [illegible]ನ? ದಿನ ಓಡಾಡುವ ರಸ್ತೆ. ಎಲ್ಲೋ ಮಾತಾಡ್ತಾ ನಿಂತಿರ್ತಾಳೆ."

"ನೀನೂ ಅವಳೂ ದಿನಾ ಒಟ್ಟಿಗೇ ಬರೋರು. ಇವತ್ಯಾಕೆ ನೀನು ಅವಳಿಗೆ ಕಾಯಲಿಲ್ಲ?"

"ಅವಳು ನಂಗಿಂತ ಮುಂಚೆ ಬಂದಿರಬಹುದು ಅಂತ ಅಂದ್ಕೊಂಡೆ. ಈಗೇನು? ಹೋಗಿ ನೋಡ್ಬೇಕು ತಾನೇ? ಎಲ್ಲೋ ನಿಂತಿರ್ತಾಳೆ. ಒದ್ದು ಎಳೆದ್ಕೊಂಡು ಬರ್ತೀನಿ" ಮಯೂರ ಚಪ್ಪಲಿ ಮೆಟ್ಟಿದಳು. ರಾಧಾ ಮತ್ತೆ ಬಾಗಿಲಲ್ಲಿ ಕಾಯುತ್ತಾ ನಿಂತಳು. ಮಧುರ ಸಂಗೀತಾಭ್ಯಾಸಕ್ಕೆ ಕುಳಿತಳು.

* * * *

ಎಷ್ಟೋ ಹೊತ್ತಿನ ನಂತರ, ರಸ್ತೆಯ ತಿರುವಿನಲ್ಲಿ ಒಟ್ಟಾಗಿ ಬರುತ್ತಿದ್ದ ಮೂವರನ್ನು ಕಂಡಳು. ನಿರಾಳವಾದ ಉಸಿರು ಹೊರಬಂತು. ಆದರೂ ಕೋಪ ಆರಿರಲಿಲ್ಲ. ಒಳಬಂದ ಅವರುಗಳಿಗಾಗಿ ಕಾದಳು. ನಗುನಗುತ್ತಾ ಒಳಬಂದ ಮಂದಾರಳನ್ನು ಕಂಡು ಅವಳ ಸಹನೆ ಮೀರಿತು. ಅವಳನ್ನು ಒರಟಾಗಿ ಎಳೆದುಕೊಂಡು, ಕೆನ್ನೆಗೆ ಹೊಡೆದಳು.

"ನಾನು ಇಲ್ಲಿ ಆತಂಕದಿಂದ ಸಾಯ್ತಾಇದೀನಿ. ಎಲ್ಲೇ ಹೋಗಿದ್ದೆ ಇಷ್ಟು ಹೊತ್ತು?" ಮಗಳ ಮೇಲೆ ಅರಚಿದಳು. ಚುರ್ ಎನ್ನುತ್ತಿದ್ದ ಕೆನ್ನೆಯನ್ನು ಉಜ್ಜಿಕೊಳ್ಳುತ್ತಾ ಮಂದಾರ ಹಿಂದೆ ಸರಿದಳು. ಕಣ್ಣುಗಳಲ್ಲಿ ನೀರು

ತುಂಬಿಕೊಂಡಿತು. ಮಯೂರ ಪೆಚ್ಚಾದಳು. ಮಧುರಳ ಹಾಡು ನಿಂತಿತು. ರಾಜ ಬೆಪ್ಪಾದ. ತಾನೇ ತಪ್ಪು ಮಾಡಿದವನಂತೆ ತಲೆತಗ್ಗಿಸಿದ.

"ಫ್ರೆಂಡ್ ಮನೇಲಿ ಬರ್ತ್ ಡೇ ಇತ್ತಂತೆ. ಎಲ್ಲರೂ ಅಲ್ಲಿಗೆ ಹೋಗಿದ್ದರಂತೆ" ನಿಧಾನವಾಗಿ ರಾಜ ಉಸುರಿದ.

"ನಿನಗೆಲ್ಲಿ ಸಿಕ್ಕಿದ್ಲು ಇವಳು? ಇವಳಿಗೆ ಹೇಳ್ಬಾರ್ದಾಗಿತ್ತಾ?" ಮಂದಾರ ಉತ್ತರಿಸಲಿಲ್ಲ. ಮತ್ತೆ ಹೊಡೆಯಲೆಂದು ಬಂದ ರಾಧಾಳಿಗೆ ರಾಜ ಅಡ್ಡ ಬಂದ.

"ಪ್ಲೀಸ್ ಹೊಡೀಬೇಡಿ ಅಮ್ಮಾ..... ಬಂದಾಯ್ತಲ್ಲ ಇನ್ನೇನು?"

"ಇಲ್ಲ ರಾಜ. ನೀನು ಸುಮ್ಮನಿರು. ಇವಕ್ಕೆಲ್ಲ ಸ್ವತಂತ್ರ ಹೆಚ್ಚಾಯಿತು. ಹೇಳೋರು ಕೇಳೋರು ಯಾರಿಲ್ಲ ಅಂತ ಅಂದ್ಕೊಂಡಿದಾರೆ." ಮಯೂರ ಮುಂದೆ ಬಂದಳು. "ಈಗೇನಾಯ್ತು ಅಂತ ಹೀಗಾಡ್ತಿದೀಯ? ಯಾವುದೋ ಕೋಪಾನ ಇವಳ ಮೇಲೆ ತೀರಿಸಿಕೊಳ್ತಿದೀಯ.... ನನ್ನ ಮೇಲೆ ಸಿಟ್ಟಿದ್ರೆ ನನ್ನನ್ನು ಹೊಡಿ.... ಅವಳು ಚಿಕ್ಕೋಳು. ನೋಡು ಅವಳ ಕೆನ್ನೆ ಹೇಗೆ ಕೆಂಪಾಗಿದೆ?" ರಾಧಾ ಇಬ್ಬರನ್ನು ದುರದುರನೆ ನೋಡಿ, ತನ್ನ ರೂಮಿಗೆ ಹೋಗಿ ಮಂಚದ ಮೇಲೆ ಕುಳಿತುಬಿಟ್ಟಳು. ಸ್ವಲ್ಪ ಹೊತ್ತು ಮನೆಯಲ್ಲಿ ನಿಶ್ಯಬ್ದ ಆವರಿಸಿಕೊಂಡಿತ್ತು. ಎಷ್ಟೋ ಹೊತ್ತಿನನಂತರ ರಾಧಾಳ ಮನಸ್ಸು ತಿಳಿಯಾಯಿತು. ಮಗಳ ಮೇಲೆ ಕೈಮಾಡಿದ್ದು ತಪ್ಪು ಅಂತನ್ನಿಸತೊಡಗಿತ್ತು. ಅವಳು ಇನ್ನು ಅಳುತ್ತಿರಬಹುದು, ಕರೆದು ಸಮಾಧಾನ ಮಾಡಬೇಕೆಂದುಕೊಂಡು ಹೊರಬಂದಳು. ರಾಜ ಅವಳನ್ನು ಕಂಡು ಎದ್ದು ನಿಂತ. ಮಧುರ ಓದುತ್ತಿರುವವಳಂತೆ ನಟಿಸಿದಳು. ಮಂದಾರ, ಮಯೂರಳ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿದ್ದಳು. ಮಯೂರ, ಮಂದಾರಳ ತಲೆಯನ್ನು ಸವರುತ್ತಿದ್ದಳು.

ಮಲಗಿದ್ದ ಮಂದಾರಳ ಬಳಿಗೆ ಬಂದು ಕುಳಿತಳು. ಅವಳ ತಲೆಯನ್ನೆತ್ತಿ ತನ್ನ ಮಡಿಲಿಗೆ ಇರಿಸಿಕೊಂಡಳು. ಕೆಂಪಾಗಿದ್ದ ಕೆನ್ನೆಯ ಮೇಲೆ ಕೈಯಾಡಿಸಿದಳು.

"ಜೋರಾಗಿ ಬಿತ್ತೇನೇ ಏಟು" ನಗುತ್ತಾ ಕೇಳಿದಳು.

"ಹುಂ.... ಮತ್ತೆ... ಯಾಕೆ ನೀನು ಹೊಡೆದದ್ದು?" ಮಂದಾರ ಮುನಿಸಿನಿಂದ ಕೇಳಿದಳು. ರಾಧಾ ಅವಳನ್ನು ತಬ್ಬಿಕೊಂಡಳು.

"ನಿಮಗೆ ನನ್ನ ಆತಂಕ ಅರ್ಥ ಆಗುಲ್ಲ. ರಾಜ ಇದ್ದುದರಿಂದ ಸರಿಹೋಯ್ತು. ಅವನನ್ನು ತಕ್ಷಣವೇ ಕಳಿಸ್ಬಿಟ್ಟೆ. ಅಂದ್ಹಾಗೇ ರಾಜ, ಕಾಫಿ ತಿಂಡಿ

ಸಹ ತೊಗೊಂಡಿಲ್ಲ. ಹೋಗು ರಾಜಾ, ಅಲ್ಲಿ ತಿಂಡಿ ಇಟ್ಟಿದೀನಿ. ಕಾಫೀನ ಬಿಸಿ ಮಾಡ್ಕೋ."

"ಪರವಾಗಿಲ್ಲ ಅಮ್ಮಾ ನಂಗೆ ಹಸಿವಿಲ್ಲ."

"ಏನು ಹಸಿವಿಲ್ಲ? ನೀನೂ ಇವರುಗಳ ಹಾಗೇ ಆಡಿದ್ರೆ ನಿಂಗೂ ಬೀಳುತ್ತೆ ನೋಡು ಏಟು..." ರಾಧಾ ನಗುತ್ತಾ ನುಡಿದಳು.

"ಹಸಿವಿಲ್ಲ ಅಂತ ಹೇಳಿದ್ರೆ ಅದೂ ತಪ್ಪಾ?" ಮಯೂರ ಕೆಣಕಿದಳು.

"ಸುಳ್ಳು ಹೇಳ್ತಿದಾನೆ.... ಮುಖ ನೋಡು."

"ಹೌದು ಅಮ್ಮಾ ಹಸಿವೇನೋ ಆಗ್ತಿದೆ.... ಆದರೆ..."

"ನನ್ನ ಕೋಪಾನ ಕಂಡು ಹೆದರಿಬಿಟ್ಟೆ ಅಲ್ವಾ?.... ನಾನೂ ನಿನಗೆ ಅಮ್ಮನ ಹಾಗೇನೇ.... ಅಮ್ಮ ಅಂತಲೇ ಕರಿ.... ಚೆನ್ನಾಗಿರುತ್ತೆ."

"ನನಗೆ ನನ್ನ ಅಮ್ಮನ ನೆನಪೇ ಇಲ್ಲ..... ನಾನು ನಿಮ್ಮನ್ನು ಅಮ್ಮ ಅಂತ ಕರೆದ್ರೆ ಇವರ್ಯಾರಿಗೂ ಬೇಸರವಾಗುಲ್ಲ ತಾನೇ." ಅನುಮಾನವನ್ನು ವ್ಯಕ್ತಪಡಿಸಿದ

"ಇದರಲ್ಲಿ ಬೇಸರವಾಗೋದು ಏನಿದೆ? ಹೋಗು ಮೊದಲು ಕಾಫಿ ತಿಂಡಿ ತಗೋ.... ಏಳೇ ಮಂದಾರ ಕಾಲು ನೋಯ್ತಿದೆ. ಆರಾಮವಾಗಿ ಮಲಗೇಬಿಟ್ಲು ಇವಳು..." ಹ್ಞಾಂ ಎನ್ನುತ್ತಾ ರಾಧಾ ಕಾಲನ್ನು ಸರಿಮಾಡಿಕೊಂಡಳು.

"ಈ ದೊಡ್ಡ ಕೂಸನ್ನು ಮಲಗಿಸಿಕೊಂಡ್ರೆ ಕಾಲು ನೋಯದೇ ಇರುತ್ತಾ? ಮುದ್ದು ಸಾಕು. ಏಳು. ಎದ್ದು ಹೋಂವರ್ಕ್ ಮಾಡು..." ಮಯೂರ ತಂಗಿಯನ್ನು ತಿವಿದಳು.

"ನಿಂಗ್ಯಾಕೇ ಹೊಟ್ಟೆಕಿಚ್ಚು? ಬೇಕಾದ್ರೆ ನೀನೂ ಮಲಕ್ಕೋ...."

"ನೀನು ಹುಟ್ಟಿದ್ಮೇಲೆ ಅಮ್ಮ ನನ್ನನ್ನ ಮರೆತೇಬಿಟ್ಟಿದಾಳೆ. ನನ್ನ ಮೇಲೆ ಪ್ರೀತೀನೇ ಇಲ್ಲ."

"ಹೀಗೆಲ್ಲಾ ಮಾತಾಡಿದ್ರೆ ಬೀಳುತ್ತೆ ನೋಡು."

"ಮತ್ತಿನ್ನೇನು? ಇವಳು ಚಿಕ್ಕೋಳು ಇವಳನ್ನು ಮುದ್ದು ಮಾಡ್ತೀಯ.... ಮಧುರ ದೊಡ್ಡೋಳು. ಅವಳನ್ನು ಪ್ರೀತಿಸ್ತೀಯ.... ನಾನು ಮಧ್ಯದೋಳು..... ಯಾರಿಗೂ ಬೇಡ" ತಾಯಿ ಮಕ್ಕಳ ಸರಸ ಸಲ್ಲಾಪಗಳನ್ನು ಗಮನಿಸುತ್ತಿದ್ದ ರಾಜ ಮೆಲ್ಲನೆ ನುಡಿದ.

"ಹಾಗೆ ಹೇಳಬಾರ್ದು. ತಾಯಿಗೆ ಎಲ್ಲ ಮಕ್ಕಳೂ ಒಂದೇ ಸಮಾನ. ಒಬ್ಬರು ಹೆಚ್ಚು, ಒಬ್ಬರು ಕಮ್ಮಿ ಅಂತ ಏನಿಲ್ಲ."

"ಈಗ ನಿನ್ನನ್ಯಾರು ಕೇಳಿದ್ರು?" ಮಯೂರ ಗೊಣಗಿದ್ದು ರಾಧಾಳಿಗೆ ಕೇಳಿಸಿತ್ತು. 'ಶ್' ಎಂದು ಬೆದರಿಸಿದಳು. ಮಯೂರ ಅಲ್ಲಿಂದ ಸರಿದಿದ್ದಳು.

"ನನಗೆ ತಾಯಿಯಿಲ್ಲ? ತಂದೆ ಇಲ್ಲ. ನಿಮ್ಮಂಥ ಸೋದರಿಯರಿಲ್ಲ. ಈ ಸಂಬಂಧಗಳೆಲ್ಲ ಎಷ್ಟು ಚೆನ್ನ ಅಂತ ಅನ್ನಿಸುತ್ತೆ.... ಅದಕ್ಕೇ ಹೇಳ್ದೆ."

"ಹಾಗೆಲ್ಲ ನೊಂದ್ಕೋಬೇಡ ರಾಜ. ನಮ್ಮಗಳನ್ನೇ ನಿನ್ನ ತಂದೆತಾಯಿ ಅಂತ ಅಂದ್ಕೋ..."

"ನಾನೇನೋ ಹಾಗೇ ಅಂದ್ಕೊಂಡು ಬಿಟ್ಟಿದೀನಿ. ಮಾವ ಒಂದೊಂದ್ಸಲ ಹೇಳ್ತಿದ್ರು.... ಅಪ್ಪ, ಅಂಕಲ್ ಇದ್ಹಾಗೇ ಇದ್ರಂತೆ." ರಾಧಾ ಗಂಭೀರಳಾದಳು. ನಿಮ್ಮ ಅಪ್ಪ ಅಮ್ಮನ ಬಗ್ಗೆ ನಿನ್ನ ಮಾವ ಏನು ಹೇಳಿದಾರೆ ಎಂದು ಕೇಳುವ ಮನಸ್ಸಾದರೂ ತಡೆದುಕೊಂಡಳು.

"ಓದೋದು ಇದ್ದರೆ ಹೋಗು ಓದ್ಕೋ ಹೋಗು. ಊಟದ ಹೊತ್ತಿಗೆ ಕರೀತೀನಿ" ರಾಜ ತಲೆಯಾಡಿಸಿ ಹೊರಟುಹೋದ. ರಾಧಾ, ಚಿಂತಿಸಲು ಪ್ರಾರಂಭಿಸಿದಳು.

* * * *

"ಆ ಹುಡುಗನ್ನ ಹಾಸ್ಟೆಲ್ಲಿಗೆ ಯಾವಾಗ ಬಿಟ್ಟುಬರ್ತೀಯಾ?" ಇದ್ದಕ್ಕಿದ್ದಂತೆ ಗೌರಮ್ಮ ಕೇಳಿದಾಗ ಕೇಶವ ಹೆಂಡತಿಯ ಕಡೆ ನೋಡಿದ. "ಅವಳನ್ನೇನು ನೋಡ್ತೀಯ? ನನ್ನ ಪ್ರಶ್ನೆಗೆ ಉತ್ತರ ಕೊಡು."

"ಹಾಸ್ಟೆಲ್ಲಿನಲ್ಲಿ ವಿಚಾರಿಸಿದೀನಿ. ರೂಮು ಸಿಗಬಹುದು. ನಾನು ಹತ್ತು ದಿನ ಊರಿನಲ್ಲಿರುಲ್ಲ. ಮುಂಬೈಗೆ ಹೋಗ್ಬೇಕು. ಬಂದ್ಮೇಲೆ ನೋಡೋಣ."

"ಅದಕ್ಕೂ ಇದಕ್ಕೂ ಏನು ಸಂಬಂಧ? ಈ ಮೊದಲೂ ಟೂರ್ ಹೋಗ್ತಿದ್ದೆಯಲ್ಲ."

"ಹತ್ತು ಹನ್ನೆರಡು ದಿನ ಎಂದೂ ಹೋಗಿಲ್ಲ. ಮಧುರ, ಮಯೂರ ಬೆಳೆದಿದಾರೆ. ನಿಂಗೂ ವಯಸ್ಸಾಯ್ತು.ಅವನು ಗಂಡು ಹುಡುಗ."

"ಯಾರೋ ಹುಡುಗ ಮನೆಯವನಾಗುಲ್ಲ. ಇನ್ಮುಂದೆ ಟೂರ್‌ಗೆ ಹೋಗೋದನ್ನ ಕಡಿಮೆ ಮಾಡು."

"ಹಾಗೆಲ್ಲಾ ಹೇಳಿದ್ರೆ ಬೇರೆ ಊರಿಗೆ ವರ್ಗ ಮಾಡ್ತಾರೆ. ಅದೂ ಸುಲಭವಲ್ಲ... ರಾಧಾ, ನಾನು ನಾಳೆ ಸಾಯಂಕಾಲದ ಟ್ರೈನಿಗೆ ಹೊರಡ್ತಿದೀನಿ. ನನ್ನ ಬಟ್ಟೆಗಳನ್ನ ಇಸ್ತ್ರಿ ಮಾಡಿಸಿ, ಪ್ಯಾಕ್ ಮಾಡಿಬಿಡು" ರಾಧಾ ಕತ್ತನ್ನು ಆಡಿಸಿದಳು. ಕೇಶವ ಕಣ್ಣು ಸಂಜ್ಞೆ ಮಾಡಿ, ಎದ್ದು ಹೊರಬಂದು ಮಹಡಿಯ ಮೆಟ್ಟಿಲುಗಳನ್ನೇರಿದ. ಐದು ನಿಮಿಷಗಳ ನಂತರ, ರಾಧಾ ತಾನೂ ಮಹಡಿಯನ್ನೇರಿದಳು.

"ಅಮ್ಮನ್ನ ಒಪ್ಪಿಸೋಕೇ ಆಗುಲ್ವೇನೋ.... ಏನ್ಮಾಡೋದು?"

"ನಂಗೂ ಹಾಗೇ ಅನ್ನಿಸ್ತಿದೆ. ನಿಮ್ಮ ಅಮ್ಮಂಗೆ ಇಷ್ಟವಿಲ್ಲ. ಮಯೂರಾನೂ ಪ್ರತಿಷ್ಠೆಯ ಮಾತುಗಳನ್ನಾಡುತ್ತಾಳೆ. ಮಧುರ, ಮಯೂರ ಇಬ್ಬರೂ ದೊಡ್ಡವರಾಗಿದಾರೆ. ತಿಳುವಳಿಕೆ ಇದೆ. ನಂಗೂ ಯೋಚನೆ ಆಗಿದೆ."

"ಹಾಗಾದ್ರೆ ಸುಮ್ಮನಿದ್ದುಬಿಡೋಣ. ದೇವರು ಮಾಡಿಸಿದ ಹಾಗಾಗ್ಲೀ."

"ಒಂದು ನಿರ್ಧಾರ ತಗೊಂಡ್ಮೇಲೆ ಸುಮ್ಮನಿರೋಕೆ ಹೇಗೆ ಆಗುತ್ತೆ?"

"ಹೌದೂ.... ಅದ್ಯಾಕೆ ಇದ್ದಕ್ಕಿದ್ದಹಾಗೆ ನಿನಗೆ ಈ ಆಲೋಚನೆ ಯಾಕೆ ಬಂತು ಅಂತ...?"

"ಅದಕ್ಕೆ ಎರಡು ಮೂರು ಕಾರಣಗಳಿವೆ. ಎಲ್ಲಕ್ಕಿಂತ ಮುಖ್ಯವಾಗಿ ನನಗೆ ನಂಜುಂಡಸ್ವಾಮಿಯವರ ಮೇಲೆ ನಂಬಿಕೆ ಇಲ್ಲ. ಇದುವರೆಗೆ ಸುಮ್ಮನಿದ್ದರೂ, ಮುಂದೆ ಆಸ್ತಿಯ ಪ್ರಸ್ತಾಪ ಬರದೇ ಇರುತ್ತಾ?.... ಆಗ ನಿಮ್ಮ ಅಣ್ಣನಿಗೆ ಪಾಲು ಕೊಡಬೇಕಾಗುತ್ತದೆ. ಎಲ್ಲಾ ವಿಷಯ ಹೊರಬೀಳುತ್ತದೆ."

"ಅವನು ಕೇಳಿದರೆ ಕೊಡಬೇಕಾಗಬಹುದು. ಅದು ನ್ಯಾಯ ತಾನೇ?"

"ಏನಿದೆ ಬೇರೆ ಕೊಡೋಕೆ? ಇರೋದು ಇದೊಂದು ಮನೆ. ಇದರಲ್ಲಿ ಅರ್ಧ ಅವರಿಗೆ ಸೇರಿಬಿಟ್ಟರೆ, ಮುಂದೆ ನಮ್ಮ ಮಕ್ಕಳಗತಿ? ಮದುವೆಗೆ ಇದೇ ಆಧಾರ."

"ಹೇಗೋ ನಡೆಯುತ್ತೆ ದೇವರಿದಾನೆ."

"ದೇವರಿದಾನೆ ನಿಜ. ಅದೊಂದೇ ಮಂತ್ರಾನ? ನಮ್ಮ ಪ್ರಯತ್ನ ಏನೂ ಇಲ್ವಾ?"

"ಏನು ನಿನ್ನ ಪ್ರಯತ್ನ?"

"ರಾಜ, ಕಾನೂನಿನ ಪ್ರಕಾರ ನಮ್ಮ ಮಗನಾಗಿಬಿಟ್ಟರೆ, ಅವನ ಭಾಗದ ಆಸ್ತಿಯೂ ಇಲ್ಲೇ ಉಳಿಯುತ್ತದೆ. ಅವನು ಕೆಲಸಕ್ಕೆ ಸೇರಿಕೊಂಡರೆ, ಅವನ

ಸಂಪಾದನೆಯು ಅಲ್ಪಸ್ವಲ್ಪ ಹಣ ನಮಗೂ ಸಿಗುತ್ತೆ. ಎಲ್ಲಕ್ಕಿಂತ ಮಿಗಿಲಾಗಿ, ನಮಗೆ ಸಹಾಯಕನಾಗಿರುತ್ತಾನೆ. ಹೆಣ್ಣು ಮಕ್ಕಳಿಗೆ ಹಿರಿಯಣ್ಣನಾಗಿರ್ತಾನೆ."

"ಎಲ್ಲಾ ನೀನಂದುಕೊಂಡಂತೆಯೇ ಆಗುತ್ತೆ ಅಂತ ಏನು ಗ್ಯಾರಂಟಿ?" ರಾಜ ಏನಂತಾನೋ? ನಿನ್ನ ಹೆಣ್ಣು ಮಕ್ಕಳು ಒಪ್ಪಬೇಡವೆ?"

"ಹೆಣ್ಣು ಮಕ್ಕಳನ್ನು ನಾನು ಒಪ್ಪಿಸ್ತೀನಿ. ಮಯೂರ ಒಬ್ಬಳೇ ಸ್ವಲ್ಪ ಅಧಿಕಪ್ರಸಂಗಿ. ಮಧುರ ಸುಮ್ಮನಿರ್ತಾಳೆ. ಮಂದಾರ ಇನ್ನು ಚಿಕ್ಕದು."

"ರಾಜನಿಗೆ ನಮ್ಮ ಬಗ್ಗೆ ಏನು ಅಭಿಪ್ರಾಯ ಇದೆ ಅಂತ ತಿಳಿದುಕೊಳ್ಳಬೇಕು ಮೊದಲು."

"ಅವನಿಗೆ ನಮ್ಮನ್ನು ಕಂಡರೆ ಪ್ರೀತಿ ವಿಶ್ವಾಸ ಎರಡೂ ಇದೆ. ಖಂಡಿತಾ ಒಪ್ಕೋತಾನೆ. ಅವನು ಚಿಕ್ಕವನಾಗಿದ್ದಾಗಲೇ, ನಮಗೆ ಕೊಟ್ಟುಬಿಟ್ಟಿದ್ದರೆ ಚೆನ್ನಾಗಿತ್ತು. ಈಗ ಬೆಳೆದುಬಿಟ್ಟಿದಾನೆ. ಅದೇ ಮುಜುಗರ"

"ಹದಿನೈದು ವರ್ಷಗಳ ಹಿಂದಿನ ಮಾತು. ಆಗ ನೀನು ನನ್ನ ಹೆಂಡತಿಯೇ ಆಗಿದ್ಯೋ ಇಲ್ಲವೋ? ನಂಜುಂಡಸ್ವಾಮಿಯೂ ಹೀಗೆಲ್ಲಾ ಕಷ್ಟಬರುತ್ತೆ ಅಂತ ಯೋಚಿಸಿರಲಾರ..." ಅವನನ್ನು ಒಂದ್ಮಾತು ಕೇಳಬೇಕು. ಅವನ ಅಂತರಂಗದಲ್ಲಿ ಏನಿದೆಯೋ?"

"ಇನ್ನೇನಿರುತ್ತೆ? ಬರೀ ಸ್ವಾರ್ಥ. ಅವನ ಭಾಗದ ಆಸ್ತೀನ ಅವನಿಗೆ ಕೊಡಿಸಿ, ಅವನನ್ನು ತಾನೇ ಇಟ್ಟುಕೊಳ್ಳುವ ಪ್ಲಾನ್ ಇರಬಹುದು."

"ಇರಬಹುದು. ಅದು ತಪ್ಪು ಅಂತ ಹೇಳುಕ್ಕಾಗುಲ್ಲವಲ್ಲ."

"ತಪ್ಪೋ ಸರಿಯೋ! ನಿಮ್ಮಮ್ಮ ಕೊಡುಲ್ಲ. ಹಾಗೆ ಹೀಗೆ ಅಂತ ಗಲಾಟೆ ಆಗುತ್ತೆ. ಕೋರ್ಟು ಕಛೇರಿ ಅಂತ ಅಲೆದಾಡಬೇಕಾಗಬಹುದು."

"ಇದೆಲ್ಲ ಅಮ್ಮನಿಗೆಲ್ಲಿ ಅರ್ಥವಾಗುತ್ತೆ. ಏನೋ ಆಡ್ತಾಳೆ."

"ನಿಮ್ಮ ತಾಯಿಗೆ ಅರ್ಥವಾಗುವಂತೆ ವಿವರಿಸಿ ಹೇಳಿ."

"ಟೂರ್‌ನಿಂದ ಬಂದ್ಮೇಲೆ ಮಾತಾಡ್ತೀನಿ" ಇಬ್ಬರೂ ಕೆಳಗಿಳಿದು ಬಂದರು. ಗೌರಮ್ಮ ಅವರನ್ನೇ ಸಂಶಯಾತ್ಮಕವಾಗಿ ನೋಡಿದಳು.

* * * *

ಇಸ್ತ್ರಿ ಮಾಡಿಸಲೆಂದು ಕೇಶವನ ಬಟ್ಟೆಗಳನ್ನು ತೆಗೆದುಕೊಂಡು ಹೋಗಿದ್ದ ಮಯೂರ ಕೆಟ್ಟ ಮುಖ ಮಾಡಿಕೊಂಡು ಬಂದು ತಾಯಿಯ ಮುಂದೆ ನಿಂತಳು.

"ಏನಾಯ್ತೆ? ಯಾರಾದ್ರೂ ಏನಾದ್ರೂ ಅಂದ್ರೇನೆ?"

"ಇಸ್ತ್ರಿಯೋನ ಅಂಗಡಿಗೆ ಇನ್ಮೇಲೆ ನಾನು ಹೋಗುಲ್ಲ. ಅವನ ವರ್ತನೆ ಸರಿಯಾಗಿಲ್ಲ."

"ಇದ್ದಕ್ಕಿದ್ದ ಹಾಗೆ ಏನಾಯ್ತು ಅವನಿಗೆ? ಏನಂದ?" ರಾಧಾ ನಗುತ್ತಾ ಕೇಳಿದಳು.

"ನನ್ನ ಕೈ ಮುಟ್ಟಿ ಏನೇನೋ ಮಾತಾಡ್ದ. ನಂಗೆ ಭಯವಾಯ್ತು." ಮಯೂರ ಅಳುಮುಖ ಮಾಡಿದಳು.

"ಅವನು ಅಂಥೋನಲ್ಲ ಮಯೂರ. ಅವನು ಚಿಕ್ಕ ವಯಸ್ಸಿಂದ ನಿನ್ನನ್ನ ನೋಡಿದಾನೆ. ಚಿಕ್ಕವಳು ಅಂತ ಕೈ ಮುಟ್ಟಿರಬಹುದು. ಮಾತಾಡಿರಬಹುದು."

"ಪ್ರತಿದಿನವೂ ಇರ್ತಿದ್ದವನು ಇರಲಿಲ್ಲ. ಯಾರೋ ಬೇರೆಯವನು ಇದ್ದದ್ದು" ರಾಧಾ ಗಂಭೀರಳಾದಳು.

"ಸರಿ ನಾನು ವಿಚಾರಿಸ್ತೀನಿ. ನೀನು ಈ ವಿಷಯವನ್ನು ಯಾರಿಗೂ ಹೇಳ್ಬೇಡ. ನಾನೇ ಹೋಗಿ ಬಟ್ಟೆಗಳನ್ನ ತರ್ತೀನಿ."

"ನೀನೂ ಹೋಗ್ಬೇಡ. ರಾಜನ್ನ ಕಳಿಸು. ಅವನೂ ಸ್ವಲ್ಪ ಕೆಲ್ಸ ಮಾಡ್ಲಿ."

"ಹೇಳಿದ್ರೆ ಮಾಡ್ತಾನೆ. ಆದರೆ ಅವನಿನ್ನು ಹೊಸಬ. ಅವನನ್ನು ಜೊತೆಗೆ ಕರೆದ್ಕೊಂಡು ಹೋಗು. ಆಗ ಅವರುಗಳೂ ತೆಪ್ಪಗಿರ್ತಾರೆ."

"ಅವನ ಜೊತೆ ಹೋದ್ರೆ ಗೇಲಿ ಮಾಡಬಹುದು. ಅವನೊಬ್ಬನೇ ಹೋಗಲಿ. ನಾನು ಮತ್ತೆ ಹೋಗುಲ್ಲ. ನೀನೇ ಬೇಕಾದ್ರೆ ಹೋಗು."

"ನಾನು ಹೋದ್ರೆ, ನೀನು ಹೆದರಿದೀಯ ಅಂತ ಅಂದ್ಕೊಳ್ತಾರೆ. ರಾಜ ಜತೇಲಿದ್ರೆ, ಇವರ್ಮನೇಲೂ ಒಬ್ಬ ಗಂಡು ಹುಡುಗ ಇದಾನೆ ಅನ್ನೋ ಅಂಜಿಕೆ ಅವರಿಗಿರುತ್ತೆ."

"ಒಟ್ನಲ್ಲಿ ಹುಡಗೀರ್ಗೆ ಧೈರ್ಯ ಸಾಲದು. ರಕ್ಷಣೆಗೆ ಗಂಡು ಹುಡುಗ್ರು ಇರಲೇಬೇಕು ಅಂತಾನ ನಿನ್ನ ಮಾತಿನ ಅರ್ಥ?"

"ಮಯೂರ, ಇಷ್ಟೆಲ್ಲಾ ಮಾತ್ಯಾಕೆ? ಇದೊಂದು ಸಲ ನೀನೇ ಹೋಗಿ ಬಂದ್ಬಿಡು. ಎಷ್ಟು ಬಟ್ಟೆ ಇದೆ, ಯಾವ್ಯಾವುದು ಇದೆ ಅಂತ ನಿಂಗೆ ತಾನೇ ಗೊತ್ತಿರೋದು?" ಮಯೂರ ಮೂತಿ ಸೊಟ್ಟ ಮಾಡಿದಳು.

"ರಾಜ, ಮಯೂರನ ಜೊತೆ ಇಸ್ತ್ರಿ ಮಾಡುವವನ ಅಂಗಡಿಗೆ ಹೋಗಿ ಬಾ. ಯಾರೋ ಹೊಸಬ ಅಂತೆ. ಅವರೆಲ್ಲಾ ಅಷ್ಟು ಸರಿ ಇಲ್ಲ."

"ಮಯೂರ ಯಾಕೆ? ನಾನೊಬ್ನೇ ಹೋಗ್ತೀನಿ."

"ನಮ್ಮನೆಯೋರ ಬಟ್ಟೆ ಯಾವುದು ಅಂತ ಕೊಟ್ಟೆರೋಳಿಗೆ ಮಾತ್ರ ಗೊತ್ತಿದೆ. ನೀನು ಜೊತೆಗಿದ್ದರೆ ಅವರುಗಳೂ ಸಭ್ಯರಾಗಿರ್ತಾರೆ" ಮಯೂರ ಓರೆಗಣ್ಣಿನಿಂದ ರಾಜನ ಕಡೆ ನೋಡಿದಳು. ಅವನು ನೋಡಲಿಲ್ಲ. ಆದರೆ ಅವಳು ಚಪ್ಪಲಿ ಮೆಟ್ಟಿ ಹೊರಟಾಗ, ಅವಳ ಹಿಂದೆ ತಾನೂ ಹೊರಟ. ಮಯೂರಳ ಪಕ್ಕದಲ್ಲಿ ಕೈಕಟ್ಟಿ ನಿಂತು ಇಸ್ತ್ರಿಯವನನ್ನೇ ಕೆಕ್ಕರಿಸಿ ನೋಡಿದ ರಾಜ. ಅವನು ಮಾತಿಲ್ಲದೇ ತಲೆ ತಗ್ಗಿಸಿ, ಬಟ್ಟೆಗಳನ್ನು ಜೋಡಿಸಿಕೊಟ್ಟ.

"ಆಮೇಲೆ ಮನೇಗೆ ಬಂದು ಕಾಸು ಇಸ್ಕೋಬೇಕಂತೆ" ರಾಜ ಹೇಳಿದಾಗ, ಮಯೂರ ಮಾತನಾಡದೇ ಬಟ್ಟೆಗಳನ್ನು ಹಿಡಿದುಹೊರಟಳು.

"ನೀವು ಯಾರೋ ಗೊತ್ತಾಗ್ಲಿಲ್ಲ. ಅವರ ಮನೆಯೋರ್ಗೆ ಏನಾಗ್ಬೇಕು?" ಇಸ್ತ್ರಿಯವನು ಕೇಳಿದಾಗ ಮಯೂರ ನಿಂತಳು.

"ನಾನು ಇವಳಿಗೆ ಅಣ್ಣನಾಬೇಕು. ಅಷ್ಟು ಸಾಕು" ಎಂದು ರಾಜ ನುಡಿದದ್ದು ಅವಳಿಗೆ ಕೇಳಿಸಿತು. ಏನೋ ಒಂದು ರೀತಿಯ ಗೌರವದ ಭಾವನೆ ಮೂಡಿತು. ಈ ಮೊದಲು, ಅವನನ್ನು ಕಂಡಾಗಿನಿಂದ ಈ ಸಂಬಂಧದ ಕಲ್ಪನೆ ಕೂಡಾ ಅವಳಿಗಾಗಿರಲಿಲ್ಲ. ಎಷ್ಟು ಸರಿಯಾಗಿ ಹೇಳ್ದ. ನಾನೊಂದು ಹೆಣ್ಣು, ಅವನೊಬ್ಬ ಯುವಕ. ಅವನು ನಮ್ಮ ಮನೆಗೆ ಬಂದು, ಮುಜುಗರವನ್ನುಂಟು ಮಾಡುತ್ತಿದ್ದಾನೆ. ಅವನನ್ನು ಸತಾಯಿಸಬೇಕು ಎಂಬ ಭಾವನೆ ಮಾತ್ರ ನನ್ನಲ್ಲಿತ್ತು. ಈ ಹೊಸ ಸುಂದರ ಸಂಬಂಧದ ಬಗ್ಗೆ ತಾನು ಯೋಚಿಸಿರಲೇ ಇಲ್ಲ. ಅಣ್ಣ! ತನಗೊಬ್ಬ ಅಣ್ಣನಿದ್ದಿದ್ದರೇ.... ಮಧುರ ಅಕ್ಕನಾಗುವ ಬದಲು ಅಣ್ಣನಾಗಿದ್ದಿದ್ದರೇ.... ಈಗಲೇ ಹಡಿಜಂಭ! ಗಂಡಾಗಿದ್ದಿದ್ದರೇ ಅವಳನ್ನು ಹಿಡಿಯೋಕೇ ಯಾರೂ ಇರ್ತಿರಲಿಲ್ಲ. ನನ್ನಂತೇ ಅವಳೂ ಹೆಣ್ಣಾಗಿರುವುದೇ ಸರಿ. ನನಗೆ ಇವನು ಅಣ್ಣನಂತೆ ಆದಮೇಲೆ ಅವಳಿಗೂ ಅಣ್ಣನೇ.... ಅವಳ ಜಂಭ ಅಡಗಿಸು ಅಂತ ಹೇಳ್ಬೇಕು. ಆಗ ಮಜ ಇರುತ್ತೆ." ಮಯೂರ ಯಾವುದೋ ಆಲೋಚನೆಯಲ್ಲಿ ಮುಳುಗಿದ್ದವಳು, ಎದುರಿಗಿದ್ದ ಲೈಟು ಕಂಬಕ್ಕೆ ಡಿಕ್ಕಿ ಕೊಟ್ಟು ಆ ರಭಸಕ್ಕೆ ಬಿದ್ದುಬಿಟ್ಟಳು.

ಹಿಂದೆಯೇ ಬರುತ್ತಿದ್ದ ರಾಜ ಅವಳನ್ನು ಎಬ್ಬಿಸಿದ. ನಾಚಿಕೆ ಅವಮಾನಗಳಿಂದ ಅವಳ ಮುಖ ಕೆಂಪಾಗಿತ್ತು. ಕಣ್ಣುಗಳು ತುಂಬಿದ್ದವು. ಸುತ್ತಲೂ ನಾಲ್ಕಾರು ಜನ ಸೇರಿದ್ದರು. ಕೈಯಲ್ಲಿದ್ದ ಬಟ್ಟೆಗಳು ನೆಲದ ಮೇಲೆ ಬಿದ್ದಿದ್ದವು.

"ರಾಜಾ.... ಬಟ್ಟೆ, ಇಸ್ತ್ರಿಯೆಲ್ಲಾ ಹಾಳಾಯ್ತು." ಅಳುತ್ತಾ ನುಡಿದು ನಿಧಾನವಾಗಿ ಎದ್ದಳು. ಬಿದ್ದ ರಭಸಕ್ಕೆ ಕಾಲು ತಿರುಚಿ, ಉಳುಕಿತ್ತು. ಸ್ವಲ್ಪ ನೋವಾಗಿದ್ದುದರಿಂದ ನಿಧಾನವಾಗಿ ನಡೆದಳು. ಅವಳ ಪಕ್ಕದಲ್ಲೇ ಆಸರೆಯಾಗಿ ರಾಜಾ ಹೆಜ್ಜೆ ಹಾಕಿದ. ಕುಂಟುತ್ತಾ ಒಳಬಂದ ಮಗಳನ್ನು ಕಂಡು ರಾಧಾ ನಡುಗಿದಳು.

"ರಾಜ.... ಏನಾಯ್ತು! ಯಾಕೆ ಕುಂಟ್ತಿದಾಳೆ."

"ಎಡವಿ ಬಿದ್ಬಿಟ್ಟೆ ಕಣಮ್ಮಾ.... ಬಟ್ಟೆಯೆಲ್ಲಾ ಮಣ್ಣಾಯ್ತು" ಮಯೂರ ತಾನೇ ಉತ್ತರಿಸಿದಳು.

"ನೊಡ್ಕೊಂಡು ನಡೀಬಾರದಾ? ರಸ್ತೇಲೂ ಡ್ಯಾನ್ಸ್ ಮಾಡ್ಕೊಂಡು ಹೆಜ್ಜೆ ಹಾಕಿದ್ರೆ ಇದೇ ಗತಿ..." ಮಧುರ ಕೆಣಕಿದಳು.

"ಮೊದ್ಲೇ ನೋಯ್ತಿದೆ... ನೋಡಮ್ಮ ಹೇಗಾಡ್ತಾಳೆ ಇವಳು?"

"ಡಾಕ್ಟರ ಷಾಪಿಗೆ ಹೋಗಿ ಬರೋಣ್ವಾ?" ರಾಜ ಕೇಳಿದ.

"ನೋಡೋಣ ಹೆಚ್ಚು ಪೆಟ್ಟಾಗಿಲ್ದಿದ್ರೆ, ಇನ್ನು ಸ್ವಲ್ಪ ಹೊತ್ತಿಗೆ ನೋವು ಕಡಿಮೆ ಆಗುತ್ತೆ. ಮೊದಲು ಚೆನ್ನಾಗಿ ತಣ್ಣೀರ್ನಲ್ಲಿ ಕಾಲು ತೊಳ್ಕೋ.... ಯೂನಿಫಾರಂ ಬಟ್ಟೆ ಎಲ್ಲಾ ಮಣ್ಣಾಗಿದೆ. ಬದಲಾಯಿಸು."

ಮಯೂರ ನೋವಿಗೆ ಮುಖ ಕಿವುಚುತ್ತಾ, ಕುಂಟುತ್ತಾ ನಿಧಾನವಾಗಿ ಬಚ್ಚಲು ಮನೆಯ ಕಡೆಗೆ ನಡೆದಳು. ರಾಜ ಮಂಕಾಗಿದ್ದ. ತನ್ನಿಂದ ಏನಾದರೂ ತಪ್ಪಾಯಿತೇ ಎಂಬಂತೆ ಕೆಟ್ಟ ಮುಖ ಮಾಡಿಕೊಂಡು ನಿಂತಿದ್ದವನನ್ನು ಮಧುರ ನೋಡಿದಳು.

"ಇವನಿಗೇನಾಯ್ತು? ಇವಳ ಜೊತೆ ಹೋಗಿದ್ದ. ಇವನೇ ಕೀಟಲೆ ಮಾಡಿ ಬೀಳಿಸಿರಬಹುದೇ.... ಮುಖ ನೋಡಿದರೆ ಹಾಗೆನ್ನಿಸುಲ್ಲ. ಆದರೂ ಗಂಡು ಹುಡುಗ. ಇವಳೋ ಬಜಾರಿ ಎದುರೆದುರಿಗೇ ಏನೇನೋ ಆಡಿಬಿಡ್ತಾಳೆ. ಒಬ್ಬಳೇ ಸಿಕ್ಕ ಸಮಯ ನೋಡಿಕೊಂಡು ಅವನೂ ಸೇಡು ತೀರಿಸಿಕೊಂಡಿರಬಹುದು. ಹಾಗೆ ಆಗ್ಬೇಕು ಅವಳಿಗೇ. ಕಾಲು ನೆಲದ ಮೇಲೆ ನಿಲ್ತಾನೇ ಇರಲಿಲ್ಲ. ಈಗ ಕುಣಿಯುವ ನವಿಲಿನ ಕಾಲಿಗೆ ಪೆಟ್ಟು.... ತನ್ನಲ್ಲೇ ನಕ್ಕಳು. ಅವಳು ನಕ್ಕ ಧ್ವನಿ ಅವನನ್ನು ತಲುಪಿತ್ತು. ಅವಳ ಕಡೆ ನೋಡಿದ.

"ಅವಳೇ ಬಿದ್ದದ್ದು.... ಯಾರೂ ಬೀಳಿಸ್ಲಿಲ್ಲ. ಪಾಪ ತುಂಬಾ ನೋವಾಗಿರಬಹುದು" ವ್ಯಥೆಯಿಂದ ನುಡಿದ.

"ಅಪ್ಪನ ಬಟ್ಟೆಯೆಲ್ಲಾ ಕೊಳಕಾಗಿದೆ. ಅವರು ಬೈತಾರಲ್ಲ ಆಗ ಇನ್ನು ಹೆಚ್ಚು ನೋವಾಗುತ್ತೆ."

"ಅವರಿಗೆ ಹೇಳೋದೇ ಬೇಡ. ಬಿದ್ದ ಪೆಟ್ಟಿನ ಜತೆಗೆ ಬೈಗುಳದ ಪೆಟ್ಟು ಯಾಕೆ?"

"ಅಪ್ಪ ಕೇಳಿದ್ರೆ ಹೇಳಲೇಬೇಕಲ್ಲ. ಬಟ್ಟೆಗಳು ಅವರದ್ದು" ಅವಳು ನುಡಿದಾಗ ಅವನು ಅವಳನ್ನೇ ತೀಕ್ಷ್ಣವಾಗಿ ನೋಡಿದ. ಅವಳಿಗೆ ಹೀನಾಯವಾದಂತಾಗಿತ್ತು. ನಾನು ಇಷ್ಟು ಮಾತನ್ನಾಡಲೇಬಾರದಾಗಿತ್ತು. ಅವನು ಏನೆಂದುಕೊಂಡನೋ ಎಂದುಕೊಂಡು, ತಲೆ ತಗ್ಗಿಸಿ, ತನ್ನ ಓದಿನ ಕಡೆ ದೃಷ್ಟಿ ಹಾಯಿಸಿದಳು. ರಾಜ ಒಳಗಿನ ಕೋಣೆಗೆ ಬಂದ. ರಾಧಾ ಇಸ್ತ್ರಿಯಾದ ಬಟ್ಟೆಗಳಲ್ಲಿ ಶುಭ್ರವಾಗಿರುವುದನ್ನೇ ಆಯ್ಕೆ ಮಾಡಿ ತೆಗೆದಿಟ್ಟಿದ್ದಳು. ಅಲ್ಪ ಸ್ವಲ್ಪ ಮಣ್ಣಾಗಿದ್ದ ಬಟ್ಟೆಗಳ ಧೂಳನ್ನು ಒರೆಸುತ್ತಿದ್ದಳು.

"ಏನಾದ್ರೂ ಬೇಕಿತ್ತ ರಾಜ?" ಅವನ ಕಡೆ ನೋಡದೇ ಕೇಳಿದಳು.

"ಏನೂ ಬೇಡ.... ನಾನು ನಿಮಗೆ ಹೆಲ್ಪ್ ಮಾಡ್ಲಾ?"

"ಏನೂ ಪರವಾಗಿಲ್ಲ. ಪ್ಯಾಕ್ ಮಾಡಿದ್ರೆ ಆಯ್ತು.... ಇನ್ನೇನು ಅವರು ಬಂದೇಬಿಡ್ತಾರೆ." ಎನ್ನುತ್ತಾ ರಾಧಾ ಮಡಿಸಿಟ್ಟಿದ್ದ ಬಟ್ಟೆಗಳನ್ನು ಸೂಟ್‌ಕೇಸ್‌ನೊಳಗೆ ಜೋಡಿಸಿಟ್ಟಳು. ರಾತ್ರಿಯ ಟ್ರೈನಿಗೆ ಕೇಶವ ಹೊರಟಾಗಿತ್ತು.

* * * *

"ಫೋನು ರಿಂಗಾಯಿತು. ರಾಜ ಎತ್ತಿಕೊಂಡು ಮಾತಾಡಿದ. "ಆಂಟೀ ನಿಮಗೆ ಫೋನು" ರಾಧಾಳಿಗೆ ಹೇಳಿದ.

"ಯಾರದ್ದು?" ಎನ್ನುತ್ತಾ ಬಂದು ರಿಸೀವರ್‌ನೆತ್ತಿಕೊಂಡಳು. ಮಾತಾಡುತ್ತಿದ್ದಂತೆ ಅವಳ ಮುಖದ ಕಳೆ ಬದಲಾಯಿಸಿತ್ತು. ಮಾತು ಮುಗಿಸಿ ಹಾಗೇ ಕುಳಿತುಬಿಟ್ಟಳು.

"ಅಮ್ಮಾ... ಯಾರದ್ದಮ್ಮ ಫೋನು? ನೀನ್ಯಾಕೆ ಹೀಗೆ ಮಂಕಾಗಿದೀಯ?" ಮಧುರ ಕೇಳಿದಳು.

"ಅಣ್ಣಂದು... ಅಮ್ಮಂಗೆ ಹುಷಾರಿಲ್ವಂತೆ. ಆಸ್ಪತ್ರೆಗೆ ಸೇರಿಸಿದಾರಂತೆ." ಅವಳ ಕಣ್ಣುಗಳು ತುಂಬಿದವು. ಧ್ವನಿ ಗದ್ಗದವಾಗಿತ್ತು.

"ಹೋಗಿ ನೋಡ್ಕೊಂಡು ಬಾ. ಇಲ್ಲಿ ಕೂತ್ಕೊಂಡು ಅತ್ರೆ?" ಮಧುರ ನುಡಿದಾಗ ರಾಧಾ, ಅವಳನ್ನೇ ಪಿಳಿಪಿಳಿ ನೋಡಿದಳು.

"ಹೇಗೇ ಹೋಗ್ಲೀ?.... ನಿಮ್ಮಗಳ ಸ್ಕೂಲು, ಮನೆಕೆಲಸ. ನಿಮ್ಮಪ್ಪ ಬೇರೆ ಊರ್ನಲ್ಲಿಲ್ಲ. ನಂಗಂತೂ ದಿಕ್ಕೇ ತೋಚ್ತಿಲ್ಲ."

"ಅಜ್ಜಿ ಇದಾರೆ. ಅಡಿಗೆ ಮಾಡ್ತಾರೆ. ನಾವೂ ದೊಡ್ಡೋರಾಗಿದೀವಿ. ನೀನು ಮಂದಾರನ್ನ ಕರ್ಕೊಂಡು ಹೋಗು."

"ಹುಂ. ನಾನು ಹೋಗುಲ್ಲ. ನನಗೆ ಟೆಸ್ಟಿದೆ."

"ಸುಮ್ನೇ ಹೋಗೇ. ನಿಂಗೆ ತಲೆ ಬಾಚ್ಬೇಕು. ಊಟ ಮಾಡಿಸ್ಬೇಕು. ಅದೆಲ್ಲ ನಂ ಕೈಲಿ ಸಾಧ್ಯವಿಲ್ಲ. ಅಜ್ಜಿ ಮಡಿ. ಅವರು ನಿನ್ನನ್ನು ಮುಟ್ಟಿಸಿಕೊಳ್ಳುಲ್ಲ" ಮಧುರ ಕೀಟಲೆಯ ಧ್ವನಿಯಲ್ಲಿ ಹೇಳಿದಾಗ, ಮಂದಾರ ಅಳಲು ಶುರು ಮಾಡಿದಳು.

"ಶ್.... ನಿಲ್ಸೇ... ನನ್ನ ಚಿಂತೆ ನನಗೆ. ನಿಮಗೆ ಹುಡುಗಾಟ. ಮಧುರ ನೀನು ಸುಮ್ನಿರಬಾರ್ದಾ! ದೊಡ್ಡೋಳಾಗಿ, ಚಿಕ್ಕೋಳ ಜೊತೆ ಏನು ನಿನ್ನ ಜೋರು."

"ನೀನು ನನ್ನನ್ನೇ ಬೈಯಬೇಡ. ಅಜ್ಜೀನ ಹೋಗಿ ನೋಡ್ಕೊಂಡು ಬಾ ಅಂತ ಹೇಳಿದ್ದೇ ತಪ್ಪಾಯ್ತು. ಏನಾದ್ರೂ ಮಾಡ್ಕೋ." ಅವಳು ಮುನಿಸಿನಿಂದ ಅತ್ತ ಸರಿದುಹೋದಳು. ನೋಯುತ್ತಿದ್ದ ಕಾಲನ್ನು ಎಳೆದೆಳೆದು ಹಾಕುತ್ತಾ ಮಯೂರ ತಾಯಿಯ ಬಳಿಗೆ ಬಂದು ನಿಂತಳು.

"ಅಜ್ಜೀನ ನೋಡ್ಕೊಂಡು ಬರೋಕೆ ಹೋಗ್ತಾ ಇದೀಯಾ?" ಕೇಳಿದಳು.

"ನಂಗೊತ್ತಿಲ್ಲ" ಸಿಡುಕಿದಳು. ಮಂದಾರ ಕಿಲಕಿಲನೆ ನಕ್ಕಳು.

"ಯಾರದ್ದೇ ಫೋನು? ಕೇಶವಂದಾ?... ನೀವೇ ಗುಸುಗುಸು ಪಿಸಿಪಿಸಿ ಮಾತಾಡ್ಕೊಳ್ತೀರಿ. ನನ್ನ ತನಕ ಯಾವ ವಿಷಯವೂ ಬರುಲ್ಲ. ಏನಂತೆ? ಯಾವಾಗ ಬರ್ತಾನಂತೆ?" ಗೌರಮ್ಮ ಒಳಗಿನಿಂದಲೇ ಏರುಧ್ವನಿಯಲ್ಲಿ ಕೇಳಿದಳು.

"ಮಾವ, ಫೋನು ಮಾಡಿದ್ರಂತೆ. ಅಜ್ಜಿಗೆ ಹುಶಾರಿಲ್ವಂತೆ. ಆಸ್ಪತ್ರೆಗೆ ಸೇರಿಸಿದಾರಂತೆ." ಮಂದಾರ ನುಡಿದಳು.

"ಯಾರನ್ನ? ನಿಮ್ಮಮ್ಮನ್ನ? ಏನಾಗಿದ್ಯಂತೆ? ಯಾವಾಗ ಸೇರಿಸಿದ್ರಂತೆ?" ಗೌರಮ್ಮ ರಾಧಳ ಎದುರಿಗೆ ನಿಂತು ಕೇಳಿದಳು.

"ಗೊತ್ತಿಲ್ಲ ಅತ್ತೆ. ಅಣ್ಣ ಫೋನು ಮಾಡಿದ್ದ. ನಾನು ಗಾಬರಿಗೆ ಸರಿಯಾಗಿ ಕೇಳಿಸ್ಕೊಳ್ಳಿಲ್ಲ."

"ಅಯ್ಯೋ ಗಾಬರಿ ಯಾಕೆ? ಹೋಗಿ ನೋಡ್ಕೊಂಡು ಬಾ. ನಾನು ಮನೆ ಕಡೆ ನೋಡ್ಕೊಳ್ತೀನಿ. ಜತೆಗೆ ಯಾರನ್ನಾದ್ರೂ ಒಬ್ರನ್ನ ಕರ್ಕೊಂಡು ಹೋಗು."

"ನಾನು ಹೋಗುಲ್ಲ" ಮೂವರು ಒಟ್ಟಾಗಿ ನುಡಿದಾಗ ರಾಜ ನಕ್ಕುಬಿಟ್ಟ.

"ನಂಗೆ ಯಾರ ಜೊತೆಯೂ ಬೇಡ. ನನಗೆ ಇಲ್ಲಿಯದೇ ಚಿಂತೆ."

"ಹೇಗೋ ಆಗುತ್ತೆ. ಒಂದು ದಿನ ತಾನೇ? ನೋಡ್ಕೊಂಡು ಮಾತಾಡಿಸ್ಕೊಂಡು ಬಂದುಬಿಡು."

"ಅಂದ್ರೇ ಇವತ್ತು ಹೋಗಿ ನಾಳೇನೇ ಬಂದುಬಿಡೋದಾ? ಯಾವ ಊರು?" ರಾಜ ವಿಚಾರಿಸಿದ.

"ನಿಂಗ್ಯಾಕೆ! ಈ ವಿಷಯ ನಿನಗೆ ಸಂಬಂಧಿಸಿದ್ದಲ್ಲ" ಗೌರಮ್ಮ ಮುಖಕ್ಕೆ ಹೊಡೆದ ಹಾಗೆ ಹೇಳಿದಾಗ ಅವನು ಪೆಚ್ಚಾದ.

"ಇಲ್ಲೇ ಮಂಡ್ಯದ ಹತ್ತಿರ ಒಂದು ಹಳ್ಳಿ. ಮಧ್ಯಾಹ್ನದ ಮೇಲೆ ಹೊರಟ್ರೂ. ಅಲ್ಲಿಗೆ ಹೋಗಿ ಸೇರೋ ಹೊತ್ಗೆ ಸಾಯಂಕಾಲ ಆಗಿರುತ್ತೆ. ನಾಳೆ ಮಧ್ಯಾಹ್ನ ಮತ್ತೆ ಅಲ್ಲಿಂದ ಹೊರಡಬೇಕಾಗುತ್ತೆ. ನಾನು ಹೋಗುಲ್ಲಬಿಡಿ."

"ಆಮೇಲೆ ನಿನ್ನ ತವರು ಮನೆಯವರು ಆಕ್ಷೇಪಣೆ ಮಾಡ್ತಾರೆ. ತಾಯಿಗೆ ಹುಷಾರಿಲ್ಲ ಅಂತಂದ್ರೂ ಮಗಳನ್ನ ಕಳಿಸಿಕೊಡಲಿಲ್ಲ. ಎಂಥಾ ಕೆಟ್ಟ ಜನ ಅಂತ. ಆ ಅಪಕೀರ್ತಿ ನಮಗೆ ಬೇಡ. ಹೇಗೂ ಕೇಶವ ಊರಲ್ಲಿಲ್ಲ. ಎರಡು ಮೂರು ದಿನ ಇದ್ದುಬಿಟ್ಟೇ ಬಾ. ಇಲ್ಲಿಯ ವಿಷಯ ನಂಗೆ ಬಿಡು."

"ಅತ್ತೇ ಅದು ಹಾಗಲ್ಲ."

"ನಂಗೊತ್ತು ನಿನ್ನ ಆತಂಕ ಏನೂಂತ. ಇವರಿಬ್ರೂ ಬೆಳೆದ ಹುಡುಗೀರು. ಅದು ಚಿಕ್ಕದು. ನನ್ನ ಮಡಿ ಮೈಲಿಗೆ, ಅಡಿಗೆ, ತಿಂಡಿ ಯಾವುದೂ ಸರಿ ಹೋಗುಲ್ಲ ನಿನ್ನ ಮಕ್ಕಳಿಗೆ. ನಾನೇನು ಮಾಡ್ಲೀ? ನಾನು ಇಬ್ಬಿಬ್ಬರು ಹೆಣ್ಣು ಮಕ್ಕಳನ್ನು ಹೆತ್ತು ಬೆಳೆಸಿದೀನಿ. ನನಗೂ ಸಮಯ ಸಂದರ್ಭ ಅಂತಂದ್ರೆ ಹೇಗಿರಬೇಕು ಅಂತ ಗೊತ್ತಿದೆ. ಇಷ್ಟರ ಮೇಲೆ ನಿನ್ನಿಷ್ಟ."

"ಸರಿ ಹಾಗಾದರೆ ಹೋಗಿಬರ್ಲಾ?" ಮಕ್ಕಳ ಕಡೆ ತಿರುಗಿ ಕೇಳಿದಳು. ಅವರ್ಯಾರೂ ಹೂಂ ಎನ್ನಲೂ ಇಲ್ಲ. ಬೇಡ ಎನ್ನಲೂ ಇಲ್ಲ. ರಾಜ ಮತ್ತೆ ನಕ್ಕ. ರಾಧಾ ಎದ್ದು ಸಿದ್ಧತೆ ಮಾಡಿಕೊಂಡಳು. ಹೊರಡುವ ಮೊದಲು ಮಕ್ಕಳಿಗೆ ಬುದ್ಧಿ ಹೇಳಿದಳು.

"ಅಜ್ಜೀನ ಸತಾಯಿಸ್ಬೇಡಿ. ಸ್ಕೂಲ್ನಿಂದ ಸೀದಾ ಮನೆಗೇ ಬಂದುಬಿಡಿ. ಅಲ್ಲಿ ಇಲ್ಲಿ ಸುತ್ತಾಡಲು ಹೋಗ್ಬೇಡಿ" ಮಂದಾರಳ ಕಡೆ ತಿರುಗಿ ಒತ್ತಿ ಹೇಳಿದಳು.

"ಅಮ್ಮಾ... ನಂಗೆ ನಾಳೆ ತಲೆ ಬಾಚಿ ಜಡೇನ ಯಾರು ಹಾಕ್ತಾರೆ?"

"ಒಂದು ದಿನ ಅಜ್ಜಿ ಹತ್ರಾನೇ ಹಾಕಿಸ್ಕೋ. ನಾಳೆ ಹೇಗೂ ಸೋಮವಾರ ಅಜ್ಜಿ ಊಟ ಮಾಡುಲ್ಲ. ನಿಮ್ಮನ್ನೆಲ್ಲ ಸ್ಕೂಲಿಗೆ ಕಳಿಸಿಕೊಟ್ಟು ಆಮೇಲೆ, ಸ್ನಾನ, ಫಲಾಹಾರ ಮಾಡ್ತಾರೆ."

"ಅಮ್ಮಾ ಅಜ್ಜಿಗೆ, ಚೆನ್ನಾಗಿ ಅಡಿಗೆ ಮಾಡಿ ಅಂತ ಹೇಳಿಬಿಡು" ಮಯೂರ ಹೇಳಿದಾಗ ರಾಜ ಮತ್ತೆ ನಕ್ಕ.

"ಅದೇನು ಸುಮ್ಮನೇ ಮಾತುಮಾತಿಗೂ ನಗೋದು? ನಾನೇನು ಜೋಕ್ಸ್ ಹೇಳ್ತಿದೀನಾ?" ಅವನ ಕಡೆ ತಿರುಗಿ ರೇಗಿ ನುಡಿದಳು.

"ಮಯೂರ... ನಂಗೆ ನಿಂದೇ ಚಿಂತೆ. ಸದಾ ಅದೇನು ಕಾಲು ಕೆರೆದುಕೊಂಡು ಜಗಳಕ್ಕೆ ಸಿದ್ಧವಾಗಿರ್ತೀಯಾ?"

"ಈಗ ಕಾಲು ಉಳುಕಿದೆ. ನೆನಪಿರಲಿ" ಮಧುರ ಕೆಣಕಿದಳು.

"ನೀವುಗಳು ಹೀಗೆ ಕಿತ್ತಾಡ್ತಿದ್ರೆ ನಾನು ಎಲ್ಲಿಗೂ ಹೋಗುಲ್ಲ" ರಾಧಾ ಗಂಭೀರವಾಗಿ ನುಡಿದಾಗ ಅವರುಗಳು ಪೆಚ್ಚಾದರು.

"ನಾನು ಆಟೋ ತರ್ಲಾ ಅಮ್ಮಾ?" ರಾಜ ಕೇಳಿದ. ರಾಧಾ ತಲೆಯಾಡಿಸಿ, ಕಿಟ್‌ಬ್ಯಾಗಿಗೆ ಒಂದೆರಡು ತನ್ನ ಬಟ್ಟೆಗಳನ್ನು ತುಂಬಿಕೊಂಡಳು.

"ಅತ್ತೇ... ಹೋಗಿ ಬರ್ತೀನಿ. ಮನೇ ಕಡೇ ಜ್ವಾಪಾನ" ಎಂದು ಎಚ್ಚರಿಕೆ ಹೇಳಿ ಆಟೋ ಹತ್ತಿದಳು. ಮಂಕಾಗಿದ್ದ ಮಕ್ಕಳು ಕೈಯಾಡಿಸಿ ಟಾಟಾ ಎಂದರು.

ರಾಧಾಳನ್ನು ಬಸ್ಸು ಹತ್ತಿಸಿ ರಾಜ ಮನೆಗೆ ವಾಪಸ್ಸು ಬಂದ. ಅವನನ್ನು ಕಂಡೊಡನೆ ಗೌರಮ್ಮ ಹುಬ್ಬು ಗಂಟಿಕ್ಕಿದಳು.

"ಒಬ್ಬಳೇ ಹೋದ್ಲಾ? ನೀನ್ಯಾಕೆ ಜೊತೆಗೆ ಹೋಗ್ಲಿಲ್ಲ?"

"ನಾನು ಹೇಗೆ ಹೋಗ್ಲೀ ಅಜ್ಜಿ? ನಂಗೆ ಕಾಲೇಜಿದೆ. ಅಲ್ಲದೇ ಅಮ್ಮಾ ಬಾ ಅಂತೇನೂ ಹೇಳ್ಲಿಲ್ಲ."

"ಅವಳೇನು ಹೇಳೋದು? ನಿನಗೇ ಗೊತ್ತಾಗಬೇಕಿತ್ತು. ಒಂದು ದಿನ ಕಾಲೇಜಿಗೆ ಹೋಗ್ದೇ ಇದ್ರೆ ಏನೂ ನಷ್ಟವಾಗ್ತಿರಲಿಲ್ಲ."

"ಏನೋ ನಂಗೆ ಗೊತ್ತಾಗ್ಲಿಲ್ಲ ಅಜ್ಜಿ..." ರಾಜ ಪೆಚ್ಚಾಗಿದ್ದ.

"ಅಜ್ಜಿ ಅಜ್ಜಿ ಅಂತ ಯಾಕೆ ಕರೀತೀಯ? ನಾನು ನಿನ್ನ ಅಜ್ಜಿ ಅಲ್ಲ."

ಗೌರಮ್ಮ ಸಿಡಾರನೆ ನುಡಿದಾಗ, ಅವನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಪೆಚ್ಚಾಗಿ ನೋಡುತ್ತಿದ್ದ ಮಂದಾರಳ ಕಡೆ ನೋಡಿದ. ಚಿಕ್ಕವಳ ಮುಂದೆ ಮುಖ ಭಂಗವಾದಂತಾಗಿತ್ತು. ಅಲ್ಲಿ ನಿಲ್ಲದೇ ಸೀದಾ ಮಹಡಿ ಹತ್ತಿದ. ಅಜ್ಜಿಯ ಸಿಡುಕಿನ ಮಾತಿನಿಂದ ಅಕ್ಕತಂಗಿಯರಿಬ್ಬರೂ ಬೇಸರಗೊಂಡಿದ್ದರು.

"ಅಲ್ಲಿ ನೋಡಿದರೆ ಆ ಅಜ್ಜಿಗೆ ಹುಶಾರಿಲ್ಲ. ಇಲ್ಲಿ ಈ ಅಜ್ಜಿ ಯಾಕೆ ಹೀಗಾಡ್ತಾರೋ? ಅಮ್ಮ ಬೇಗ ಬಂದರೆ ಸಾಕು ಅಂತ ಅಂದುಕೊಂಡರು. ಮನೆಯಲ್ಲಿ ಮೌನ ಆವರಿಸಿತ್ತು. ಎಲ್ಲರೂ ಅವರವರ ಪಾಡಿಗೆ ಅವರವರ ಓದು ಬರಹದಲ್ಲಿ ಮುಳುಗಿದ್ದರು. ಇದ್ದಕ್ಕಿದ್ದಂತೆ ಫೋನು ರಿಂಗಾದಾಗ, ಮಂದಾರ ಬೆಚ್ಚಿಬಿದ್ದು ಅಮ್ಮಾ ಅಂತ ಕಿರುಚಿಕೊಂಡಳು. ಮಧುರ ಎದ್ದು ರಿಸೀವರ್‌ನ್ನೆತ್ತಿಕೊಂಡಳು. ಅತ್ತಲಿಂದ ಕೇಶವ ಮಾತಾಡಿದ್ದ.

"ಯಾರು? ಮಧೂನ? ಸ್ವಲ್ಪ ನಿಮ್ಮಮ್ಮನ್ನ ಕರೀತೀಯಾ?"

"ಅಮ್ಮ ಮನೇಲಿಲ್ಲ. ಊರಿಗೆ ಹೋಗಿದಾಳೆ" ಎನ್ನುತ್ತಾ ತಾಯಿ, ಅಜ್ಜಿಯನ್ನು ನೋಡಲು ಹೋಗಿದ್ದನ್ನು ತಿಳಿಸಿದಳು. ಅವಳ ಧ್ವನಿಯೂ ಒಡೆದಿತ್ತು.

"ಹೋಗಲಿ ಸ್ವಲ್ಪ ರಾಜನ್ನ ಕರೀತೀಯಾ?"

"ರಾಜ ಮಹಡಿ ಮೇಲಿದಾನೆ. ಕರೀಲೇಬೇಕಾ? ಏನು ವಿಷಯ ಹೇಳಿ ನಾನು ಅವನಿಗೆ ಹೇಳ್ತೀನಿ."

"ಏನೂ ಇಲ್ಲ. ಹೋಗಲಿ ಬಿಡು. ಎಲ್ಲಾ ಹುಷಾರಾಗಿರಿ. ಅಜ್ಜೀನ ಗೋಳು ಹೊಯ್ದುಕೊಳ್ಳಬೇಡಿ. ಅವಳನ್ನೂ ರೇಗಿಸಬೇಡಿ."

"ಇಲ್ಲಪ್ಪಾ.... ಆದರೆ, ಅಜ್ಜಿ ಇವತ್ತು ರಾಜನ್ನ ಬೈದುಬಿಟ್ಟರು. ಅವನು ಪೆಚ್ಚಾಗಿಬಿಟ್ಟ."

"ಅಜ್ಜೀನ ಕರಿ. ನಾನು ಮಾತಾಡ್ಬೇಕು"

"ಅಜ್ಜಿ ಮನೇಲಿಲ್ಲ. ದೇವಸ್ಥಾನಕ್ಕೆ ಹೋಗಿದಾರೆ."

"ಸರಿ ಬಿಡು. ನಾನು ಆಮೇಲೆ ಮತ್ತೆ ಮಾತಾಡ್ತೀನಿ. ರಾಜಂಗೆ ಹೇಳಿಬಿಡು" ಎಂದು ಹೇಳಿ ಲೈನ್ ಕಟ್ ಮಾಡಿದ. ಮಂದಾರ ಅಳುತ್ತಿದ್ದಳು.

"ನಿಂಗೇನಾಯ್ತು? ಯಾಕೇ ಅಳ್ತಿದೀಯ?"

"ಹೊಟ್ಟೆ ಹಸೀತಿದೆ. ಅಜ್ಜಿ ಕಾಫಿ ತಿಂಡೀನ ಕೊಡ್ಲೇ ಇಲ್ಲ."

"ಅದಕ್ಕೆ ಅಳ್ಬೇಕಾ? ನಾನೇ ಕೊಡ್ತೀನಿ." ಎನ್ನುತ್ತಾ ಅಡಿಗೆ ಮನೆಗೆ ಬಂದಳು. ಹಾಲಿನ ಪಾತ್ರೆಯ ಮುಚ್ಚಳ ತೆರೆದಿತ್ತು. ಪಾತ್ರೆಯೊಳಗೆ ಒಂದು ಹನಿ ಹಾಲಿರಲಿಲ್ಲ. ಬೆಕ್ಕು ಬಂದು ಕುಡಿದುಹೋಗಿತ್ತು. ಅವಳಿಗೂ ಅಳು ಬರುವಂತಾಗಿತ್ತು. ಅಜ್ಜಿಯ ಮೇಲೆ ಕೋಪ ಬಂದಿತ್ತು. ಮಯೂರಳ ಬಳಿಗೆ ಬಂದಳು. "ಅಜ್ಜಿ ಮನೇಲಿಲ್ಲ. ಕಾಫಿ ಮಾಡಿಲ್ಲ. ಹಾಲೂ ಇಲ್ಲ. ಬೆಕ್ಕು ಕುಡಿದು ಬಿಟ್ಟಿದೆ. ಮಂದಾರ ಅಳ್ತಾ ಇದಾಳೆ. ಏನೇ ಮಾಡೋದು?"

"ನನ್ನನ್ನ ಕೇಳಿದ್ರೆ? ನಾನು ನೋವಿನಿಂದ ನರಳ್ತಿದೀನಿ. ನಂಗೂ ಹೊಟ್ಟೆ ಹಸೀತಿದೆ. ಈ ಅಜ್ಜಿಗೆ ಅಷ್ಟು ಗೊತ್ತಾಗ್ಬೇಡ್ವಾ? ಕಾಲು ನೋವು ಇಲ್ದೇ ಇದ್ದಿದ್ರೆ ನಾನೇ ಅಂಗಡಿಗೆ ಹೋಗಿ ಬರ್ತಿದ್ದೆ. ಈಗ ನೀನೇ ಹೋಗಿ ಬಾ."

"ನಾನಾ?" ಅನುಮಾನಿಸಿದಳು.

"ರಾಜಂಗೆ ಹೇಳು. ತಂದು ಕೊಡ್ತಾನೆ."

"ಅಜ್ಜಿ ಹತ್ರ ಬೈಸ್ಕೊಂಡು ಹೋದೋನು. ಕೆಳಗೆ ಇಳಿದೇ ಬಂದಿಲ್ಲ. ಹೇಗೇ ಹೇಳೋದು."

"ಈಗ ನಂಗೇನೂ ಹೇಳ್ಬೇಡ. ನಂಗೆ ಒಂದು ಹೆಜ್ಜೆ ನಡೆಯೋಕೆ ಆಗ್ತಿಲ್ಲ. ಏನಾದ್ರೂ ಮಾಡ್ಕೋ" ಮಧುರ ಮಂದಾರಳ ಕಡೆ ನೋಡಿದಳು. ಅವಳು ಅಳುತ್ತಲೇ ಇದ್ದಳು. ಮಧುರ ಮಹಡಿ ಹತ್ತಿದಳು. ರೂಮಿನ ಬಾಗಿಲು ಹಾಕಿತ್ತು. ಬೆರಳಿನಿಂದ ಬಡಿದಳು. ರಾಜ ಬಾಗಿಲು ತೆಗೆದ. ಅವನು ಅಳುತ್ತಿದ್ದನೆಂದು ಅವನ ಮುಖವೇ ಹೇಳಿತ್ತು. ಸುಮ್ಮನೇ ನಿಂತ.

"ಮಂದಾರ ಅಳ್ತಿದಾಳೆ. ಮಯೂರಂಗೆ ಕಾಲು ನೋವು ಹೆಚ್ಚಾಗಿದೆ. ಅಜ್ಜೀನೂ ಮನೇಲಿಲ್ಲ. ಸ್ವಲ್ಪ ಬರ್ತೀರಾ!" ಅಷ್ಟು ಹೇಳುವ ಹೊತ್ತಿಗೆ ಅವಳು ಬೆವೆತು ಹೋಗಿದ್ದಳು.

"ಮಂದಾರ ಯಾಕೆ ಅಳ್ತಿದಾಳೆ. ಅಜ್ಜಿ ಎಲ್ಲಿಗೆ ಹೋದ್ರು!"

"ತಿನ್ನೋಕೆ ಏನೂ ತಿಂಡಿ ಇಲ್ಲ. ಬೆಕ್ಕು ಹಾಲನ್ನೆಲ್ಲ ಕುಡಿದು ಬಿಟ್ಟಿದೆ."

"ನಾನು ಹಾಲನ್ನು ತಂದುಕೊಡ್ತೀನಿ. ಆದರೆ, ನಿಮ್ಮ ಅಜ್ಜಿ ಬೈಯಲ್ಲ ತಾನೇ?" ಅವನು ಪೆಚ್ಚಾಗಿ ನಗುತ್ತಾ ಕೇಳಿದ. ಇಬ್ಬರೂ ಕೆಳಗೆ ಬಂದರು.

ರಾಜ, ಸಮೀಪದಲ್ಲಿದ್ದ ಬೇಕರಿಯಿಂದ ತಿಂಡಿಗಳನ್ನು, ಹಾಲನ್ನು ತೆಗೆದುಕೊಂಡು ಬಂದ. ತಿಂಡಿಯನ್ನೂ ಮೂವರಿಗೂ ಕೊಟ್ಟು, ಹಾಲನ್ನು ಕಾಯಿಸಿ, ತಾನೇ ಕಾಫಿಯನ್ನು ಬೆರೆಸಿಕೊಟ್ಟ. ಮೂವರಿಗೂ ಶಕ್ತಿ ಬಂದಂತಾಗಿತ್ತು. ಮಧುರ ಮುಗುಳ್ನಕ್ಕು ರಾಜನಿಗೆ ಥ್ಯಾಂಕ್ಸ್ ಹೇಳಿದಳು. ರಾಜ ತಾನೂ ಮುಗುಳ್ನಕ್ಕ. ಮಯೂರಳ ಕಡೆ ತಿರುಗಿದ.

"ನೋವಿಗೆ ಮಾತ್ರೆ, ಮುಲಾಮು ಏನಾದ್ರೂ ಬೇಕಾ? ತಂದುಕೊಡ್ಲಾ?"

"ಇವತ್ತು ಭಾನುವಾರ. ಯಾವ ಅಂಗಡಿಯೂ ಇರುತ್ತೋ ಇಲ್ವೋ? ಅಜ್ಜಿ ಬಂದ್ಮೇಲೆ ಅವರ ಹತ್ರ ಅಮೃತಾಂಜನ ಇರುತ್ತೆ ಇಸ್ಕೋತೀನಿ."

"ಅಜ್ಜಿ ಬೈದ್ರು ಅಂತ ಬೇಜಾರು ಮಾಡ್ಕೊಂಡ್ರಾ? ಅವರು ಹಾಗೇನೇ. ಕೆಟ್ಟೋರು" ಮಂದಾರ ನುಡಿದಳು.

"ಹಾಗೆಲ್ಲಾ ದೊಡ್ಡೋರನ್ನ ಕೆಟ್ಟೋರು ಅಂತ ಅನ್ನಬಾರ್ದು."

"ಯಾಕೆ ಅನ್ನಬಾರ್ದು? ಅವರು ನಿಮ್ಮನ್ಯಾಕೆ ಬೈಯಬೇಕಾಗಿತ್ತು? ನಿಮ್ಮದ್ದೇನು ತಪ್ಪು?"

"ನನ್ನ ತಪ್ಪು ಏನೂಂತ ನಂಗೂ ಗೊತ್ತಿಲ್ಲ. ಆದರೆ ಅಜ್ಜಿ ಬೈದದ್ದೆನ್ನ ನಾನು ಮರೆತುಬಿಟ್ಟಿದೀನಿ. ನಾವೆಲ್ಲಾ ಕೂತು ಏನಾದ್ರೂ ಆಟ ಆಡೋಣ್ವಾ? ಅಜ್ಜಿ ಬಂದ್ಮೇಲೆ ನಾನು ನನ್ನ ರೂಮಿಗೆ ವಾಪಸ್ಸು ಹೋಗ್ತೀನಿ."

"ನಿಮಗೆ ಹೊಟ್ಟೆ ಹಸೀತಿಲ್ವಾ? ನೀವೂ ಏನನ್ನೂ ತಿನ್ನಲಿಲ್ಲ?"

"ಪರವಾಗಿಲ್ಲ. ನಂಗೆ ಬೇಕಾಗಿಲ್ಲ"

"ಸಾರಿ ನಂಗೂ ಗೊತ್ತಾಗ್ಲಿಲ್ಲ. ನಮಗೆ ಮಾತ್ರ ತಿಂಡಿ ತಂದುಕೊಟ್ಟಿದೀರಿ. ನಿಮ್ಮನ್ನು ನಾವು ಕೇಳ್ಲೇ ಇಲ್ಲ."

"ನಂಗೆ ಹಸಿವಾಗಿದ್ದಿದ್ರೆ ನಾನೇ ತಿನ್ನುತ್ತಿದ್ದೆ. ನಂಗೆ ಅಭ್ಯಾಸವಾಗಿದೆ."

"ಇಲ್ಲ. ನಾನು ನಿಮಗೆ ಏನನ್ನಾದ್ರೂ ತಂದುಕೊಡ್ತೀನಿ" ಎನ್ನುತ್ತಾ ಮಧುರ ಹೊರಟಾಗ ಅವನು ತಡೆದ.

"ಬೇಡ. ನೀವು ಹೋಗ್ಬೇಡಿ. ಅದು ಸರಿಯಲ್ಲ."

"ನೀವು ಕಾಫೀನಾದ್ರೂ ಕುಡಿಯಬೇಕಾಗಿತ್ತು. ನಾನು ಮಾಡಿಕೊಡ್ತೀನಿ" ಎನ್ನುತ್ತಾ ಮಧುರ ಅಡಿಗೆ ಮನೆಗೆ ಬಂದಳು. ಪಾತ್ರೆಯಲ್ಲಿದ್ದ ಕಾಫಿಯನ್ನು ಬಿಸಿ ಮಾಡಿದಳು. ರಾಜನಿಗೆ ತಿನ್ನಲು ಕೊಡಲು ಏನೂ ಇಲ್ಲವಲ್ಲ ಎನ್ನುವ ವ್ಯಥೆ ಉಂಟಾಯಿತು. ಎಲ್ಲಾ ಡಬ್ಬಿಗಳನ್ನ ಮುಚ್ಚಳ ತೆಗೆದು ನೋಡಿದಳು. ಒಂದು ಡಬ್ಬಿಯಲ್ಲಿ ದ್ರಾಕ್ಷಿ ಗೋಡಂಬಿ ಬಾದಾಮಿಗಳಿದ್ದವು. ಆ ಡಬ್ಬಿಯನ್ನು ಎತ್ತಿಕೊಂಡು ಕಾಫಿಯ ಬಟ್ಟಲಿನೊಂದಿಗೆ ಹೊರಬಂದಳು.

ರಾಜ, "ಥ್ಯಾಂಕ್ಸ್" ಎಂದು ಹೇಳಿ ಕಾಫಿಯನ್ನು ಕುಡಿದ. ಮಧುರ ದ್ರಾಕ್ಷಿ ಗೋಡಂಬಿ ಬಾದಾಮಿಯನ್ನು ಎಲ್ಲರಿಗೂ ಹಂಚಿ, ತಾನೂ ಒಂದಿಷ್ಟನ್ನೂ ತೆಗೆದಿಟ್ಟುಕೊಂಡಳು. ನಾಲ್ವರೂ ತಿಂದು ಮುಗಿಸಿದರು. ಮಧುರ ಖಾಲಿಯಾದ ಡಬ್ಬಿಯನ್ನು ಸ್ವಸ್ಥಾನದಲ್ಲಿರಿಸಿದಳು. ರಾಜ ಕಾಫಿಯ ಲೋಟಗಳನ್ನು ತೊಳೆದಿಟ್ಟ. ನಾಲ್ವರೂ ಹರಟೆ ಹೊಡೆಯುತ್ತಾ ಕುಳಿತರು. ಗೌರಮ್ಮ ಆಗಮಿಸಿದಳು. ಮಧುರಳೇ ಬಾಗಿಲನ್ನು ತೆಗೆದು ತನ್ನ ಪಾ[illegible]ನು ಪುಸ್ತಕವನ್ನೂ ಹಿಡಿದು ಕುಳಿತಳು. ಗೌರಮ್ಮನ ಕಣ್ಣುಗಳು ರಾಜನ ಕಡೆ ತಿರುಗಿದವು. ರಾಜ ಎದ್ದು ನಿಂತ.

"ನೀನೇನು ಮಾಡ್ತಿದೀಯ ಇಲ್ಲಿ? ಹುಡುಗೀರ ಮಧ್ಯೆ ಕೂತ್ಕೊಂಡು?"

"ಅಂತ್ಯಾಕ್ಷರಿ ಆಟ ಆಡ್ತಿದ್ವು" ಮಂದಾರ ಉಸುರಿದಳು.

"ನೀನು ಸುಮ್ನಿರು. ನಾನು ಕೇಳಿದ್ದು ಇವನನ್ನು."

"ಯಾಕಜ್ಜಿ ಬೈತೀರಿ?... ರಾಜ ಇಲ್ದೇ ಹೋಗಿದ್ದಿದ್ರೆ ಇಷ್ಟು ಹೊತ್ಗೆ ನಾವೆಲ್ಲಾ ಸತ್ತು ಹೋಗಿರುತ್ತಿದ್ದೆವು." ಮಂದಾರ ಮತ್ತೆ ನುಡಿದಳು.

"ಆಹಹಾ.... ಅಂಥದ್ದೇನಾಯ್ತು? ಅವನೇ ಇದ್ನಾ ಮೊದಲ್ನಿಂದ ಈ ಮನೇಲಿ.... ಬಂದು ನಾಲ್ಕು ದಿನಕ್ಕೇ ಇವನು ಹೆಚ್ಚಾಗಿಬಿಟ್ಟ."

"ಪ್ಲೀಸ್, ಸುಮ್ನಿರಿ ಅಜ್ಜಿ. ನೀವು ಎಲ್ಲಿಗೆ ಹೋಗಿದ್ರಿ?"

"ನಾನು ಎಲ್ಲಾದ್ರೂ ಹೋಗ್ತೀನಿ. ನಿಮಗ್ಯಾಕೆ ಹೇಳ್ಬೇಕು?"

"ಅಮ್ಮ ಅಪ್ಪ ಇಬ್ರೂ ಊರಲ್ಲಿಲ್ಲ. ನಾವು ಕಾಫಿ ತಿಂಡಿ ಇಲ್ಲದೇ ಹಸಿದ್ಕೊಂಡು ಬಿದ್ದಿರಬೇಕಾ...?"

"ಈಗ ಬಂದ್ನೆಲ್ಲ. ಕಾಫಿ ಮಾಡಿಕೊಡ್ತೀನಿ. ಬೇಗ ಅಡಿಗೆ ಮಾಡಿ ಊಟ ಬಡಿಸ್ತೀನಿ."

"ಹಾಲನ್ನ ಬೆಕ್ಕು ಕುಡಿದು ಹೋಗಿದೆ."

"ಬೆಕ್ಕು ಬಂದ್ರೆ ಗೊತ್ತಾಗ್ಲಿಲ್ವಾ? ನಿದ್ದೆ ಮಾಡ್ತಿದ್ರಾ? ಅಥವಾ ಹರಟೆ ಹೊಡೀತಿದ್ರಾ.?"

"ಬೆಕ್ಕು ಬರುತ್ತೆ ಅಂತ ನಮಗೇನು ಗೊತ್ತಜ್ಜಿ? ನಾವು ಹೋಂವರ್ಕ್ ಮಾಡ್ತಿದ್ವು. ಅದರ ಪಾಡಿಗೆ ಅದು ಬಂದಿದೆ. ನೀವು ಹೇಳ್ಬಿಟ್ಟು ಹೋಗ್ಬೇಕಾಗಿತ್ತು" ಮಯೂರ ವಾದಿಸಿದಳು.

"ಚೆನ್ನಾಗಿದೆ. ನನ್ನನ್ನೇ ದೂಷಣೆ ಮಾಡ್ತೀರಾ? ಬರಲಿ ನಿಮ್ಮಪ್ಪ.... ನಿಮ್ಮಮ್ಮ ನಿಮ್ಮನ್ನೆಲ್ಲಾ ಸರಿಯಾಗಿ ಬೆಳೆಸಿಲ್ಲ. ಅತೀ ಮುದ್ದು ಮಾಡಿದಾಳೆ. ಹೀಗೇ ಬೆಳೆದರೆ ನಾಳೆ ನಿಮ್ಮ ಗಂಡಂದಿರ ಗತಿ ದೇವರೇ ಗತಿ. ಅತ್ತೆ ಸುಮ್ಮನಿರ್ತಾಳಾ?"

"ಅಮ್ಮನ್ನ ಏನೂ ಅನ್ಬೇಡಿ ಅಜ್ಜಿ. ಅಪ್ಪ ಫೋನು ಮಾಡಿದ್ರು. ನಿಮ್ಮನ್ನ ಕರಿ ಅಂತಂದ್ರು. ನೀವು ಮನೇಲೇ ಇರ್ಲಿಲ್ಲ. ಅಮ್ಮನೂ ಊರಲಿಲ್ಲ ಅಂತ ಹೇಳಿದೀವಿ."

"ಕೇಶವ ಫೋನು ಮಾಡಿದ್ನಾ? ಏನಂತೆ? ಏನು ಹೇಳಿದ?"

"ನಾವು ಬರೀ ಮಕ್ಕಳೇ ಇದೀವಿ ಅಂತ, ಅಪ್ಪ ಏನನ್ನೂ ಹೇಳ್ಲಿಲ್ಲ"

"ಇವನಿದ್ನಲ್ಲ ದಾಂಡಿಗ... ಇವನ ಹತ್ರಾನೂ ಮಾತಾಡ್ಲಿಲ್ವಾ..." ರಾಜ ತಲೆ ತಗ್ಗಿಸಿ ಬಾಗಿಲ ಕಡೆಗೆ ನಡೆದ.

"ಎಲ್ಲಿಗೆ ಹೊರಟೆ! ಕಾಫಿ ಮಾಡ್ತೀನಿ. ಕುಡಿದ್ಕೊಂಡು ಹೋಗು."

"ಹಾಲೇ ಇಲ್ಲವಲ್ಲ ಅಜ್ಜಿ? ಕಾಫಿ ಹೇಗೆ ಮಾಡ್ತೀರಿ?"

"ಯಾರಾದ್ರೂ ಹೋಗಿ ಒಂದುಲೀಟರ್ ಹಾಲು ತಗೊಂಡ್ಬನ್ನಿ" ಗೌರಮ್ಮ ಎಂದಳು. ಯಾರೂ ಹೊರಡುವ ಕಾತುರವನ್ನಾಗಲೀ ಆತುರವನ್ನಾಗಲೀ ತೋರಲಿಲ್ಲ. ಸರಿ ನಂಗೇನಂತೆ! ನಿಮಗೆ ಇಲ್ಲ ಕಾಫಿ." ಅಷ್ಟರಲ್ಲಿ ಮತ್ತೆ ಫೋನು ರಿಂಗಾಗಿತ್ತು. ಮಂದಾರ ರಿಸೀವರ್‌ನೆತ್ತಿಕೊಂಡಳು. ರಾಜ ಮುಂಬಾಗಿಲಿಗೆ ಬಂದು ನಿಂತ.

"ಅಜ್ಜೀ.... ಅಪ್ಪಾ..... ನಿಮ್ಮನ್ನು ಕರೀತಿದಾರೆ" ಮಂದಾರ, ಅಜ್ಜಿಯ ಕೈಗೆ ರಿಸೀವರನ್ನು ಕೊಟ್ಟು, ತಾನೂ ಹೊರಬಾಗಿಲಿಗೆ ಬಂದು ನಿಂತಳು. ಆ ನಂತರ ಗೌರಮ್ಮ ಹೆಚ್ಚು ಮಾತನಾಡಲಿಲ್ಲ. ಬೇಗ ಬೇಗ, ಬೆಳಗಿನ ಅಡಿಗೆಯನ್ನು ಬಿಸಿ ಮಾಡಿದಳು.

"ಮಂದಾರ, ತಟ್ಟೆ ಹಾಕ್ಕೊಳ್ಳಿ ಎಲ್ರಿಗೂ ಬಡಿಸ್ತೀನಿ" ಒಳಗಿನಿಂದಲೇ ಕೂಗು ಹಾಕಿದಳು. ಮಧುರ ಮಾತಿಲ್ಲದೇ ಎಲ್ಲರಿಗೂ ತಟ್ಟೆ ಬಟ್ಟಲನ್ನಿಟ್ಟಳು. ಎಲ್ಲರೂ ಬಂದು ಕುಳಿತರೂ ರಾಜ ಬಂದಿರಲಿಲ್ಲ" ಅವನನ್ನು ಕರೀರೇ. ಅವನಿಗೇನು ಪ್ರತ್ಯೇಕವಾಗಿ, ಮಂತ್ರಾಕ್ಷತೆ ಕೊಟ್ಟು ಕರೀಬೇಕಂತ ಕೇಳಿ."

"ಅಜ್ಜೀ ನೀವು ಅವನನ್ನು ಬೈತೀರಲ್ಲ. ಅದಕ್ಕೇ ಬಂದಿಲ್ಲ."

"ಓಹೋ ಅವನಿಗೆ ಕೋಪಾನಾ? ಒಂದು ರಾತ್ರಿ ಉಪವಾಸವಿದ್ರೆ ಅಹಂಕಾರ ಇಳಿಯುತ್ತೆ.... ಎನ್ನುತ್ತಾ ಎಲ್ಲಾ ತಟ್ಟೆಗಳಿಗೂ ಬಡಿಸಿದಳು. ತಾನೇ ಮುಂಬಾಗಿಲಿಗೆ ಬಂದಳು.ರಾಜ ಅಲ್ಲೇ ಬಾಗಿಲಲ್ಲಿ ನಿಂತಿದ್ದ. "ಏನೋ ನನ್ನ ಮೇಲೆ ಛೋಡೀನಾ ನಿಂಗೆ? ಸುಮ್ನೆ ಬಂದು ತಿಂದು ಹೋಗಿ ಮಲಕ್ಕೋ.... ನಾನು ನಿಮ್ಮಪ್ಪನಂಥೋರನ್ನ ಕಂಡಿದೀನಿ..." ಹೂಂ ಕರಿಸುತ್ತಾ ಮತ್ತೆ ಒಳಗೆ ಬಂದಳು. ರಾಜ ಅನುಮಾನಿಸುತ್ತಾ ಒಳಬಂದು ಊಟಕ್ಕೆ ಕುಳಿತ. ಮಾತಿಲ್ಲದೇ ಎಲ್ಲರೂ ಊಟವನ್ನು ಮುಗಿಸಿದರು. ರಾಜ ಎಂಜಲು ತಟ್ಟೆಗಳನ್ನು ತೊಳೆದು ಗೋಮೆ ಇಟ್ಟು ವರೆಸಲು ಮಧುರಳಿಗೆ ಸಹಾಯಕನಾಗಿದ್ದ.

ಗೌರಮ್ಮ ಅವನನ್ನೇ ಗಮನಿಸುತ್ತಿದ್ದಳು. ರಾಜ ಕೈ ಒರೆಸಿ ಹೊರಡುವ ಮೊದಲು "ಅಜ್ಜೀ, ನೀವು ಫಲಾಹಾರ ತಗೊಂಡಾಯ್ತಾ?" ಎಂದು ಕೇಳಿದ.

"ಇಲ್ಲ. ನಾನು ಇನ್ನೂ ಏನೂ ಮಾಡಿಕೊಂಡಿಲ್ಲ. ನನ್ನ ಚಿಂತೆ ಯಾರಿಗಿದೆ? ಯಾರಿಗೆ ಬೇಕಾಗಿದೆ? ಊಟ ಆಯ್ತಲ್ಲ. ಹೋಗಿ ಮಲಕ್ಕೊಳ್ಳಿ" ಎಂದಳು.

"ನಾನು ಇಲ್ಲೇ ಕೆಳಗೇ ಮಲಕ್ಕೊಳ್ಳಾ?..." ಅಂಜುತ್ತಾ ಕೇಳಿದ.

"ನಂಗೇನೂ ಭಯವಿಲ್ಲ. ನಿನ್ನ ತಂಗೀರನ್ನ ಕೇಳು. ಅವರಿಗೆ ಬೇಕಾದ್ರೆ ಇಲ್ಲೇ ಮಲಕ್ಕೋ... ಬೇಡವಾದ್ರೆ ಮೇಲೆ ಮಲಕ್ಕೋ..." ರಾಗವಾಗಿ ವ್ಯಂಗ್ಯವಾಗಿ ನುಡಿದಾಗ ಅವನಿಗೆ ಬೇಸರವಾಗಿತ್ತು.

"ಯಾಕಜ್ಜೀ ನನ್ಮೇಲೆ ನಿಮಗೆ ಕೋಪ? ನಾನೇನು ತಪ್ಪು ಮಾಡಿದೀನಿ..." ಗೌರಮ್ಮ ಚಕಿತಳಾಗಿ ಅವನನ್ನೇ ನೋಡಿದಳು.

"ಕೋಪವೂ ಇಲ್ಲ. ಎಂಥದೂ ಇಲ್ಲ. ಸುಮ್ನೇ ಹೋಗು." ಅವನು ಅಲ್ಲಿಂದ ಕದಲಿದ. ಅವನು ಮೇಲೆ ಹೊರಟಿದ್ದ ಮಂದಾರ ನಿಲ್ಲಿಸಿದಳು.

"ನೀವೂ ಇಲ್ಲೇ ಮಲಕ್ಕೊಳ್ಳಿ. ನಮಗೆ ಭಯ ಆಗುತ್ತೆ." ಅವನು ನಿಂತು ಹಿಂತಿರುಗಿ ನೋಡಿದ. ಮಧುರ, ಮಯೂರ ಮೌನವಾಗಿ ಅವನನ್ನೇ ನೋಡಿದರು.

"ಸರಿ ನನ್ನ ಹಾಸಿಗೆ, ದಿಂಬು, ತರ್ತೀನಿ."

"ಇಲ್ಲೇ ಬೇಕಾದಷ್ಟು ಹಾಸಿಗೆ ಹೊದ್ದಿಕೆಗಳಿವೆ." ಮಧುರ ಎಂದಳು.

"ಸರಿ ನೀವೆಲ್ಲಾ ಓದ್ಕೋತಾ ಇರಿ. ನಾನು ಸ್ವಲ್ಪ ನೋಟ್ಸ್ ಬರೆಯೋದಿದೆ. ಬರೆದು ಮುಗಿಸಿ ಬರ್ತೀನಿ" ಎನ್ನುತ್ತಾ ಮಹಡಿ ಹತ್ತಿದ. ಮಧುರ ಅವನಿಗಾಗಿ ಹಾಸಿಗೆ ಹೊದ್ದಿಕೆಗಳನ್ನು ತೆಗೆದಿಟ್ಟು ತಂಗಿಯರಿಗೆ ಹೇಳಿದಳು.

"ನಾನು ಮುಂದಿನ ರೂಂನಲ್ಲಿ ಮಲಗ್ತೀನಿ. ನೀವಿಬ್ರೂ ಒಳಗಿನ ರೂಂನಲ್ಲಿ ಮಲಕ್ಕೊಳ್ಳಿ."

"ಮಂದಾರ ವಿಪರೀತ ಹೊರಳ್ತಾಳೆ. ನಂಗೆ ಮೊದಲೇ ಕಾಲುನೋವು ನಾನು ಅವಳ ಜೊತೆಯಲ್ಲಿ ಮಲಗುಲ್ಲ."

"ಸರಿ. ನೀನೇ ಮುಂದಿನ ರೂಂನಲ್ಲಿ ಮಲಕ್ಕೋ. ನಾನು ಇವಳ ಜೊತೆ ಮಲಗ್ತೀನಿ. ಹೊರಳಾಡುಕ್ಕೆ ಆಗದಂತೆ ಕೈಕಾಲು ಕಟ್ಟಿ ಮಲಗಿಸ್ತೀನಿ" ನೋವಿನಲ್ಲೂ ಮಯೂರ ನಕ್ಕಳು."

"ಅದೇನ್ರೇ ಜಗಳ? ಸುಮ್ಮನೆ ಮಲಗ್ಬಾರ್ದಾ?" ಅಜ್ಜಿ ಅಲ್ಲಿಂದಲೇ ಕೂಗಿದಳು.

"ಅಜ್ಜಿ ಫಲಹಾರಕ್ಕೆ ಏನೋ ತಿಂಡಿ ಮಾಡ್ಕೋತಿದಾರೆ. ಘಂ ಅಂತಿದೆ. ಹೋಗೇ ನೋಡ್ಕೊಂಡು ಬಾ" ಮಯೂರ ತಂಗಿಗೆ ಹೇಳಿದಳು.

"ಅಡ್ಡಿ ಮಡಿಲಿದಾರೆ ಬೈತಾರೆ..."

"ದೂರದಿಂದ ನೋಡ್ಕೊಂಡು ಬಾ... ಕರೆದು ತಿಂಡೀನ ಕೊಟ್ರೆ ಎಲ್ರಿಗೂ ಇಸ್ಕೊಂಡು ಬಾ...."

"ಸುಮ್ನೇ ಮಲಕ್ಕೋ ಮಂದಾ.... ಅವಳ ಮಾತನ್ನ ಕೇಳ್ಬೇಡ. ಅವಳಿಗೆ ಬೇಕಾಗಿದ್ರೆ ಅವಳೇ ಹೋಗ್ಲೀ..." ಅಷ್ಟರಲ್ಲಿ ರಾಜ ಹೊರಗಿನಿಂದ ಬಂದ.

"ಏನೋ ಅಡಿಗೆ ವಾಸನೆ ಬರ್ತಿದೆ" ಮೂಗನ್ನರಳಿಸಿದ.

"ಹೂಂ. ಅಜ್ಜಿ ತಿಂಡಿ ಮಾಡ್ಕೊಳ್ತಿದಾರೆ. ಮಯೂರಂಗೆ ಬೇಕಂತೆ."

"ನಾನೆಲ್ಲೇ ಹಾಗಂದೆ?"

"ನಾನು ಹೋಗಿ ಕೇಳ್ಲಾ?"

"ಬೇಡ ಅವರು ಕೊಡುಲ್ಲ. ಸುಮ್ನೇ ಬೈತಾರೆ."

"ನಿದ್ದೆ ಬಂತೇನೇ ಪುಟ್ಟೀ..." ಒಳಗಿನಿಂದ ಅಜ್ಜಿಯ ಧ್ವನಿ ಕೇಳಿಸಿದಾಗ, ಎಲ್ಲರೂ ಸುಮ್ಮನಾದರು. ಗೌರಮ್ಮ ಮತ್ತೊಮ್ಮೆ ಮಂದಾರಳನ್ನು ಕರೆದಳು.

"ಅಜ್ಜೀ ನಿನ್ನನ್ನು ಕರೀತಿದಾರೆ ಹೋಗೇ" ಮಧುರ ಅವಳನ್ನು ತಳ್ಳಿದಳು. ಗೌರಮ್ಮ ಒಂದು ತಟ್ಟೆಯಲ್ಲಿ, ಒಂದು ಬಿಸಿ ರಾಗಿರೊಟ್ಟಿಯನ್ನು ಇಟ್ಟಿದ್ದಳು. ಮೇಲೆ ಬೆಣ್ಣೆಯನ್ನು ಹಾಕಿದ್ದಳು.

"ಯಾರಿಗೆ ರಾಗಿ ರೊಟ್ಟಿ ಸೇರುತ್ತೋ ಅವರು ತಿನ್ನಬಹುದು" ಎನ್ನುತ್ತಾ ತಟ್ಟೆಯನ್ನು ಇತ್ತ ತಳ್ಳಿದಳು.

"ಒಂದೇ ರೊಟ್ಟಿ ಇದೆಯಲ್ಲ ಅಜ್ಜೀ.... ನಾವು ನಾಲ್ಕು ಜನ ಇದೀನಿ."

"ಸರಿ ಅವನೂ ಬಂದ್ನಾ ಪಾಲಿಗೆ. ನಾಲ್ಕು ಚೂರು ಮಾಡ್ಕೊಂಡು ನಾಲ್ಕು ಜನವೂ ತಿನ್ನಿ. ರಾಗಿ ಹಿಟ್ಟು ಅರಗುಲ್ಲ. ಊಟವೂ ಆಗಿದೆಯಲ್ಲ" ಮಂದಾರ ರೊಟ್ಟಿಯ ತಟ್ಟೆಯನ್ನು ಹಿಡಿದು ಹೊರಬಂದಳು.

"ನಮಗೆಲ್ಲಾ ಬೆಳಗಿನ ಅನ್ನವನ್ನು ಹಾಕಿ, ತಾವು ಮಾತ್ರ ಬಿಸಿಬಿಸಿ ರಾಗಿ ರೊಟ್ಟಿ ತಟ್ಟಿಕೊಂಡಿದಾರೆ" ಮಯೂರಳೆಂದಳು.

"ರಾಗಿ ಅರಗುಲ್ಲವಂತೆ. ಚೂರು ಚೂರು ತಿನ್ನಿ ಸಾಕು ಎಂದರು."

"ನಿನಗೆ ಅರಗುಲ್ಲ ಅಷ್ಟೇ. ಇತ್ಲಾಗೆ ಕೊಡು ನಾನು ತಿಂತೀನಿ."

"ಯಾಕೇ ಊಟ ಸಾಕಾಗ್ಲಿಲ್ವೇನೇ ನಿಂಗೆ?"

"ಯಾಕೋ ಸೇರ್ಲಿಲ್ಲ ಕಣೇ ಮಧು. ಅಮ್ಮನ ನೆನಪು ಬರ್ತಿತ್ತು. ಅಮ್ಮನಿಂದ ಫೋನೂ ಬರ್ಲಿಲ್ಲ. ಅಜ್ಜಿ ಹೇಗಿದಾರೋ. ಅದೂ ತಿಳಿಯಲಿಲ್ಲ."

"ನಂಬರಿದ್ರೆ ನಾವೇ ಮಾಡಬಹುದು." ರಾಜನೆಂದ.

"ಎಸ್.ಟಿ.ಡಿ. ಕಾಲ್ ನಮ್ಮನೆಯಿಂದ ಆಗುಲ್ಲ."

"ಬಿಸಿಬಿಸಿ ರೊಟ್ಟಿ ಆರಿ ಹೋಗುತ್ತೆ. ಎಲ್ಲಾ ತಗೊಳ್ಳಿ." ಮಂದಾರ ರಾಜನ ಮುಂದೆ ತಟ್ಟೆಯನ್ನು ಹಿಡಿದಳು.

"ನಂಗೆ ಬೇಡ..."

"ಯಾಕ್ರೀ... ಅಜ್ಜಿ ಮೇಲೆ ಕೋಪಾನಾ? ಅಥವಾ ರಾಗಿರೊಟ್ಟಿ ಅಂತ್ಲೋ..."

"ಹಾಗೇನೂ ಇಲ್ಲ. ನನ್ನ ಭಾಗದ್ದನ್ನು ಮಯೂರಂಗೆ ಕೊಟ್ಬಿಡು"

"ನಂಗೇನೂ ಬೇಡ. ಈಗ ಯಾರು ತಿಂತಾರೆ?"

"ಹಾಗಾದ್ರೆ ಅಜ್ಜೀಗೇ ವಾಪಸ್ಸು ಕೊಟ್ಬುಬಿಡ್ಲಾ?"

"ದಡ್ಡಿ ಕಣೇ ನೀನು. ನೀನು ಮುಟ್ಟಿದ್ದನ್ನ ಅಜ್ಜಿ ತಿಂತಾರಾ?"

"ಸರಿ ಹಾಗಾದ್ರೆ... ಯಾರ್ಗೂ ಬೇಡದಿದ್ರೆ ನಾನು ಒಬ್ಬಳೇ ತಿಂತೀನಿ" ಮಧುರ ತಟ್ಟೆಯನ್ನು ಕಿತ್ತುಕೊಂಡಳು.

"ಒಬ್ಬಳೇ ತಿಂದ್ರೆ ಹೊಟ್ಟೆ ನೋವು ಬರುತ್ತೆ. ಮಯೂರೀ ನಿಂದೇನೇ ಗಲಾಟೆ...? ಎಲ್ರೂ ಹಂಚಿಕೊಂಡು ತಿನ್ನೋಣ. ಮಜವಾಗಿರುತ್ತೆ." ಪೇಪರನ್ನು ಹರಿದು. ಆದರ ಮೇಲೆ ಚೂರನ್ನಿಟ್ಟು ಎಲ್ಲರಿಗೂ ಕೊಟ್ಟಳು. ಎಲ್ಲರೂ ಅಲ್ಲಲ್ಲೇ ನಿಂತು, ಕೂತು ತಿಂದು ಮುಗಿಸಿ, ಪೇಪರ್ರಿಗೆ ಕೈ ಒರೆಸಿಕೊಂಡರು.

"ರೊಟ್ಟಿ ಚೆನ್ನಾಗಿತ್ತು. ಇನ್ನೊಂದು ಪೀಸು ಕೇಳ್ಲಾ ಅಜ್ಜೀನ?"

"ಮಗಚುವ ಕೈಯಲ್ಲಿ ಹೊಡೆಸ್ಕೊಳ್ತೀಯ ಅಷ್ಟೇ. ಅಮ್ಮ ಬಂದ್ಮೇಲೆ ಅಮ್ಮ ಕೇಳಿದ್ರೆ ಮಾಡಿಕೊಡ್ತಾಳೆ" ರಾಜ ತಟ್ಟೆಯಲ್ಲಿ ಪೇಪರ್ರಿನ ಉಂಡೆಗಳನ್ನಿಟ್ಟುಕೊಂಡು ಊಟದ ಮನೆಗೆ ಬಂದ.

"ಮುಂಬಾಗಿಲು, ಹಿಂಬಾಗಿಲು ಎಲ್ಲವನ್ನೂ ಸರಿಯಾಗಿ ಹಾಕಿ, ಬೀಗ ಹಾಕಿ ಮಲಕ್ಕೋ" ಗೌರಮ್ಮ ಅವನಿಗೆ ಆಜ್ಞೆ ಮಾಡಿದಳು.

"ಹುಂ. ಆಗ್ಲಿ ಅಜ್ಜೀ..." ರಾಜ ವಿಧೇಯತೆಯಿಂದ ನುಡಿದ.

* * * *

ಮಯೂರ, ಮಧುರ ಇಬ್ಬರೂ ರೂಮಿನ ಬಾಗಿಲನ್ನು ಹಾಕಿಕೊಂಡಿದ್ದರು. ಊಟದ ಮನೆಯಲ್ಲಿ ಗೌರಮ್ಮ ಬೆಚ್ಚಗೆ ಶಾಲನ್ನು ಹೊದ್ದು ಮಲಗಿದ್ದಳು. ರಾಜನಿಗೆ ನಿದ್ದೆ ಬಂದಿರಲಿಲ್ಲ. ಯಾವುದೋ ಪುಸ್ತಕವನ್ನು ಓದುತ್ತಿದ್ದ. ದೂರದಲ್ಲೆಲ್ಲೋ ಹನ್ನೆರಡು ಗಂಟೆಯ ಧ್ವನಿ ಕೇಳಿಸಿದಾಗ ದೀಪವನ್ನಾರಿಸಿ ಮಲಗಿದ. ಊಟದ ಮೆಯಲ್ಲಿ ಮಲಗಿದ್ದ ಗೌರಮ್ಮನ ಗೊರಕೆ ಕತ್ತಲೆಯ ನೀರವವನ್ನು ಸೀಳಿಕೊಂಡು ಕೇಳಿ ಬರುತ್ತಿತ್ತು. ಈ ಅಜ್ಜಿ ಬಲು ಜೋರು. ಮಾತಿನಲ್ಲೂ ಜೋರು. ಗೊರಕೆಯಲ್ಲೂ ಅಷ್ಟೇ ಜೋರು. ಬಂದ ನಗೆಯನ್ನು ಗಂಟಲಲ್ಲೇ ಅದುಮಿ, ಮಗ್ಗುಲು ಬದಲಾಯಿಸಿದ. ಆದರೂ ನಿದ್ದೆ ಬಲುದೂರ.

ಇದ್ದಕ್ಕಿದ್ದಂತೆ ಗೊರಕೆ ನಿಂತಂತೆನಿಸಿತು. ಆದರೆ ಕನವರಿಕೆ ಪ್ರಾರಂಭವಾಗಿತ್ತು. ಮಾತು ಅಸ್ಪಷ್ಟವಾಗಿತ್ತು. ಮೂರ್ತೀ....ಮೂರ್ತೀ ಎಂದು ಕರೆದಂತೆ ಕೇಳಿಸಿತ್ತು. ಈ ಮೂರ್ತಿಯಾರು, ಅವನನ್ಯಾಕೆ ಕರೆಯುತ್ತಿದಾರೆ ಎಂದುಕೊಂಡ. ಹೋಗು. ಹೋಗು ಎಂದು ಯಾರನ್ನೋ ಬೈದಿದ್ದು ಸಹ ಕೇಳಿಸಿತ್ತು. ಈ ಅಜ್ಜಿ ನನಗೆ ನಿದ್ದೆ ಮಾಡಲು ಬಿಡುವುದಿಲ್ಲವೇನೋ ಇವರ ಗೊರಕೆಗೆ, ಕನವರಿಕೆಗೆ ಯಾವ ಕಳ್ಳನೂ ಬರುವುದಿಲ್ಲ. ಯಾವ ಭೂತವೂ ಬರುದಿಲ್ಲ. ನಾನು ಮೇಲೆ ಮಲಗಿದ್ದರೆ ಚೆನ್ನಾಗಿತ್ತೆನಿಸಿತು. ಬೆಳಗಾದರೆ ಸಾಕೆನ್ನಿಸಿತ್ತು.

ಬೆಳಗಿನ ಝಾವ ಇನ್ನೂ ಕತ್ತಲೆ ಕತ್ತಲೆಯಾಗಿರುವಾಗಲೇ ಮುಂಬಾಗಿಲ ಕರೆಗಂಟೆ ಬಾರಿಸಿತ್ತು. ರಾಜನಿಗೆ ಎಚ್ಚರವಾಗಿತ್ತು. ಕಣ್ಣುಜ್ಜುತ್ತಾ ಮುಂಬಾಗಿಲ ಬಳಿಗೆ ಬಂದ. ಕಿಟಕಿಯಿಂದ ಇಣುಕಿ ಯಾರು ಅಂತ ಕೇಳಿದ.

"ನಾನು ಬಾಗಿಲು ತೆಗಿ" ಕೇಶವ ನುಡಿದಿದ್ದ. ರಾಜ ಬಾಗಿಲನ್ನು ತೆಗೆದು ಒಳಬಂದ ಕೇಶವ ಮನೆಯೊಳಗೆ ಕಣ್ಣಾಡಿಸುತ್ತಾ ನಡುಮನೆಗೆ ಬಂದ. ನಡುಮನೆಯಲ್ಲಿ ಹಾಸಿದ್ದ ರಾಜನ ಹಾಸಿಗೆಯನ್ನು ಕಂಡರೂ ಏನನ್ನು ಕೇಳಲಿಲ್ಲ." ಎಲ್ರೂ ಇನ್ನು ಮಲಗಿದಾರೆ" ತನ್ನಲ್ಲೇ ಹೇಳಿಕೊಂಡ.

"ಕಾಫಿ ಮಾಡಿ ಕೊಡ್ಲಾ?" ರಾಜ ಕೇಳಿದ.

"ಬೇಡ. ನಾನು ಸ್ವಲ್ಪ ಹೊತ್ತು ಮಲಗಿರ್ತೀನಿ." ಎನ್ನುತ್ತಾ ಕೈಕಾಲು ತೊಳೆದುಬಂದು ಬಟ್ಟೆ ಬದಲಾಯಿಸಿದ. ಹಾಸಿದ್ದ ಹಾಸಿಗೆಯ ಮೇಲೆ ಉರುಳಿಕೊಂಡು ಬೆಚ್ಚಗೆ ಹೊದ್ದು ಮಲಗಿದ.

"ಹಾಗಾದ್ರೆ ನಾನು ನನ್ನ ರೂಮಿಗೆ ಹೋಗ್ತೀನಿ" ಎಂದು ಹೇಳಿ ರಾಜ ಮುಂಬಾಗಿಲನ್ನು ಎಳೆದುಕೊಂಡು ಹೊರಟುಹೋದ. ಚೆನ್ನಾಗಿ ಬೆಳಕಾದ ಮೇಲೆ ಗೌರಮ್ಮ ಎದ್ದಳು.

"ಅಯ್ಯೋ ಅಯ್ಯೋ ಕಳ್ಳ. ಕಳ್ಳಾ ಮುಂಬಾಗಿಲು ತೆಗೆದಿದೆ. ಯಾವಾಗ ಬಂದ್ನೋ? ಏನೇನು ಹೊತ್ಕೊಂಡು ಹೋದ್ನೋ... ಏಳೋ ಪಾಪಿ ಮುಂಡೇದೇ ಏಳು. ರಾತ್ರಿ ಸರ್ಯಾಗಿ ಬಾಗಿಲು ಹಾಕಿ ಮಲಕ್ಕೋ ಅಂತ ಹೇಳಿದ್ದೆ. ನಿರ್ಲಕ್ಷ್ಯ ಜವಾಬ್ದಾರೀನೇ ಇಲ್ಲ. ಅಪ್ಪನಿಗೆ ತಕ್ಕ ಮಗ." ಗೌರಮ್ಮ ಆಡಲು ಪ್ರಾರಂಭಿಸಿದ್ದಳು. ಕೇಶವ ಗೊಣಗುತ್ತಾ ಎದ್ದ.

"ಏಳು.... ಏಳು ಎದ್ದು ನೋಡು. ನನ್ನ ಮಗ ಸೊಸೆ ಮನೆಗೆ ಬಂದ ಮೇಲೆ ಏನು ಹೇಳ್ಲೀ..."

"ಏನಮ್ಮ ಅದು? ಬೆಳಿಗ್ಗೆ ಬೆಳಿಗ್ಗೇನೇ ಯಾರನ್ನ ಬೈತಿದೀಯ?"

ಗೌರಮ್ಮ ಇತ್ತ ತಿರುಗಿದಳು. ಅವಾಕ್ಕಾದಳು. "ನೀನೇನೋ? ಯಾವಾಗ ಬಂದೆ? ಇಲ್ಯಾಕೆ ಮಲಗಿದೀಯ? ಅವನೆಲ್ಲಿ?"

"ಅವನು ಅವನ ರೂಮಿಗೆ ಹೋದ. ನಾನು ಬಂದು ಬೆಲ್ ಮಾಡಿದಾಗ್ಲೂ ನಿಂಗೆ ಎಚ್ಚರ ಆಗ್ಲಿಲ್ವಾ?"

"ಇಲ್ಲ ಅವನೇ ತೆಗೆದ್ನ? ಒಳ್ಳೇದಾಯ್ತು ಬಿಡು. ಬರ್ತಿದೀನಿ ಅಂತ ಅವನಿಗೆ ಹೇಳಿದ್ಯಾ! ಅವನು ಇಲ್ಲೇ ಮಲಗಿದ್ದ."

"ಇಲ್ಲ ನಾನು ಯಾರಿಗೂ ಹೇಳಲಿಲ್ಲ. ರಾಧನ ತಾಯಿಯ ಆರೋಗ್ಯ ವಿಚಾರಿಸುಕ್ಕೆ ಅಂತ ಅಲ್ಲಿಗೆ ಹೋಗಿದ್ದೆ. ಅವಳೇ ಆತಂಕದಿಂದ ಊರಿಗೆ ಹೋಗಿ ಅಂತಂದ್ಲು. ಬಂದುಬಿಟ್ಟೆ."

"ಆತುರ ಪಟ್ಕೊಂಡು ಯಾಕೆ ಬರೋಕೆ ಹೋದೆ? ನಾನಿದ್ನಲ್ಲ.... ನನ್ನ ಮೇಲೆ ನಂಬಿಕೆ ಇಲ್ವಾ ನಿನ್ನ ಹೆಂಡ್ತೀಗೆ..."

"ನಿಂಗೆ ಮಕ್ಕಳಿಗೆ ಕಷ್ಟವಾಗದಿರಲಿ ಅಂತ..."

"ರಾಜ ಇದ್ನಲ್ಲ. ಹೇಗೋ ನಡೀತಿತ್ತು. ನಿಂಗೂ ನಂಬಿಕೆ ಇರಲಿಲ್ಲ."

"ಹಾಗಲ್ಲ ರಾಜನ ಬಗ್ಗೆ ನೀನಿನ್ನು ಕಠಿಣವಾಗಿಯೇ ಇದೀಯಲ್ಲ. ನಿಂಗೂ ಕಷ್ಟ ಆಗುತ್ತೆ ಅಂತ ಅನ್ನಿಸ್ತು ಏಳ್ತೀನಿ ಕಾಫಿ ಮಾಡಿಕೊಡು. ಮಕ್ಕಳನ್ನ ಎಬ್ಬಿಸ್ತೀನಿ. ಅವರೆಲ್ಲ ಯಾಕೆ ರೂಮಿನ ಬಾಗಿಲನ್ನು ಹಾಕ್ಕೊಂಡು ಮಲಗಿದಾರೆ? ಭಯ ಅಂತಲಾ?...." ಕೇಶವ ಎದ್ದು ನಿಂತು ಮೈಮುರಿದ.

"ಯಾರೋ ಹೊಸ ಹುಡುಗ.... ನಮ್ಮವನಲ್ಲ ಬೆಳೆದ ಹುಡುಗೀರು ನಾನೇ ಹೇಳ್ದೆ. ನಿಮ್ಮ ನಿಮ್ಮ ರೂಮಿನ ಬಾಗಿಲನ್ನು ಹಾಕ್ಕೊಳ್ಳಿ ಅಂತ."

"ಅಮ್ಮಾ.... ಏನಮ್ಮ ರಾಜ ಯಾರು ಅಂತ ನಿಂಗೂ ಗೊತ್ತಲ್ಲ. ನಮ್ಮ ಮನೆಯ ಮಕ್ಕಳ ಮೇಲೆ ನಾವೇ ಅನುಮಾನ ಪಡೋದಾ? ಅಸಹ್ಯ."

"ಏನು ಅಸಹ್ಯ? ನಿನಗೆ ಅವನ ಅಪ್ಪನ ಚರಿತ್ರೆ ಗೊತ್ತಿಲ್ಲ. ಆರಕ್ತ ಇವನಲ್ಲೂ ಹರೀತಿದೆ. ರಕ್ತ ಗುಣ ಎಲ್ಲಿ ಹೋಗುತ್ತೆ?" ಕೇಶವ ಒಳಗಿನ ರೂಮಿನ ಬಾಗಿಲನ್ನು ಬಡಿದ. ಮಧುರ ಬಾಗಿಲನ್ನು ತೆಗೆದಳು.

"ಅಪ್ಪಾ.... ನೀವಾ? ಯಾವಾಗ ಬಂದ್ರಿ?"

"ಸ್ವಲ್ಪ ಹೊತ್ತಾಯ್ತು. ಮಂದಾರಎಲ್ಲಿ? ರಾತ್ರಿ ಸುಮ್ಮನೇ ಮಲಗಿದ್ಲಾ?"

"ಹೂಂ. ಮಲಗಿದ್ಲು. ಆದರೆ ವಿಪರೀತ ಹೊರಳ್ತಾಳೆ. ನಂಗೆ ಜಾಗಾನೇ ಇರಲಿಲ್ಲ. ತಳ್ಳಿ ತಳ್ಳಿ ಸಾಕಾಯ್ತು" ಕೇಶವ ನಕ್ಕ.

"ಇದನ್ನೇ ನಿಮ್ಮಮ್ಮ ಹೇಳ್ತಾಳೆ.ಮಯೂರ ಎಲ್ಲಿ ಮಲಗಿದಾಳೆ?"

"ಅವಳಿಗೆ ಕಾಲು ಪೆಟ್ಟಾಗಿದೆ. ನೋವಿಗೆ ಜ್ವರ ಬಂದಿದೆ."

"ಹೌದಾ? ಅವಳನ್ನು ಎಬ್ಬಿಸು. ಏನಾಗಿದೆ ಅಂತ ನೋಡ್ತೀನಿ" ಆಗಾಗಲೇ ಎಚ್ಚರವಾಗಿದ್ದ ಮಯೂರ ಎದ್ದು ಹೊರಬಂದಳು. ಕುಂಟುತ್ತಾ, ನೋವಿನಿಂದ ಅಸಹಾಯಕತೆಯ ಮುಖವನ್ನು ಮಾಡಿಕೊಂಡಿದ್ದ ಮಗಳನ್ನು ಕಂಡು ಕೇಶವನಿಗೆ ಮರುಕವುಂಟಾಯಿತು.

"ಏನಮ್ಮಾ, ಡಾಕ್ಟರ ಹತ್ರ ಹೋಗ್ಬಾರ್ದಾಗಿತ್ತಾ? ಅವಸರ ಪಟ್ಕೊಂಡು ಓಡಾಡೋದ್ಯಾಕೆ? ನಿಧಾನವಾಗಿ ನಡೀಬಾರ್ದಾ? ಇವತ್ತು ಸ್ಕೂಲಿಗೆ ಹೋಗ್ಬೇಡ. ಮನೇಲೇ ರೆಸ್ಟ್ ತಗೋ."

"ಟೆಸ್ಟ್ ನಡೀತಿದೆ. ನಾನು ಹೋಗ್ಲೇಬೇಕು."

"ನೋಡೋಣ. ಮೊದಲು ಡಾಕ್ಟರ್ ಶಾಪ್. ಆಮೇಲೆ ಸ್ಕೂಲ್." ಎನ್ನುತ್ತಾ ಮಯೂರಳ ತಲೆಯನ್ನು ಸವರಿದ. ಅಷ್ಟರಲ್ಲಿ ಮಂದಾರಳೂ ಎದ್ದು ಬಂದಳು. ಮೂವರು ಮಕ್ಕಳನ್ನು ಬದಿಯಲ್ಲಿ ನಿಲ್ಲಿಸಿಕೊಂಡು ಮಾತನಾಡುತ್ತಿದ್ದವನನ್ನೂ, ಆಗ ತಾನೇ ಒಳಬಂದ ರಾಜ ನೋಡಿ ನಿಂತ. ತನಗೆ ನೆನಪಿಲ್ಲದ ಅಪ್ಪನ ಮುಖವನ್ನು ನೆನೆಪಿಸಿಕೊಳ್ಳಲು ಯತ್ನಿಸಿದ. ಅಪ್ಪನ ಫೋಟೋ ಸಹ ಇರಲಿಲ್ಲವೆನ್ನುವುದು ನೆನಪಿಗೆ ಬಂತು. ಮಾವ ಒಳ್ಳೆಯವನೇ. ಆದರೆ ಅಪ್ಪನ ಬಗ್ಗೆ ಕೇಳಿದಾಗ ಸಿಡುಕುತ್ತಿದ್ದ. ಏನನ್ನು ಹೇಳುತ್ತಿರಲಿಲ್ಲ. ಅತ್ತೆಯೊಡನೆ ಹೆಚ್ಚು ಸಲುಗೆಯೇ ಇರಲಿಲ್ಲ. ಅಮ್ಮನ ಬಗ್ಗೆಯೂ ಯಾವ ಕಲ್ಪನೆ ಮೂಡುತ್ತಿರಲಿಲ್ಲ.

"ಓ... ರಾಜಾ... ಬಾರೋ ನಿದ್ದೆ ಆಯ್ತಾ?" ಆತ್ಮೀಯತೆಯಿಂದ ಕೇಳಿದಾಗ ಹಿತವೆನಿಸಿತು. ಹೂಂ ಎನ್ನುತ್ತಾ ಕೈಕಟ್ಟಿ ನಿಂತ." ಅಮ್ಮ ಒಬ್ಬಳೇ ಕೆಲಸ ಮಾಡ್ತಿದಾಳೆ. ಮಧುರ ಹೋಗಿ ಅಜ್ಜಿಗೆ ಸಹಾಯ ಮಾಡು."

"ಅಜ್ಜಿ ತುಂಬಾ ಮಡಿ ಅಪ್ಪಾ... ಏನನ್ನು ಮುಟ್ಟುಕ್ಕೆ ಬಿಡುಲ್ಲ"

"ನಾನು ಸ್ನಾನ ಮಾಡಿಕೊಂಡು ಬಂದಿದೀನಿ. ನಾನು ಸಹಾಯ ಮಾಡ್ತೀನಿ" ರಾಜ ಅಡಿಗೆ ಮನೆಯ ಕಡೆಗೆ ನಡೆದ. ಕೇಶವನೂ ಹಿಂದೆಯೇ ಬಂದ.

"ಅಮ್ಮಾ ನಿನಗೊಬ್ಬಳಿಗೇ ಕಷ್ಟವಾಗುತ್ತೆ. ರಾಜಂಗೂ ಕೆಲಸ ಹೇಳು. ಅವನಿಗೆ ಎಲ್ಲಾ ಗೊತ್ತಿದೆ."

"ಈ ಕಾಲದ ಹೆಣ್ಣು ಮಕ್ಕಳಿಗೇ ಮನೆ ಕೆಲಸ ಬರುಲ್ಲ ಇನ್ನು ಗಂಡು ಹುಡುಗ, ಇವನಿಗೇನು ಗೊತ್ತಿದೆ?"

"ಹಾಗೆನ್ನಬೇಡ. ಇವನು ಬೆಳೆದದ್ದು ಸೋದರಮಾವನ ಮನೇಲಿ.... ಸೋದರತ್ತೆ ಎಲ್ಲಾ ಕೆಲಸವನ್ನೂ ಕಲಿಸಿದಾರೆ. ರಾಜ ಎಲ್ಲರಿಗೂ ಕಾಫಿ ಮಾಡಿಕೊಡು. ಆಮೇಲೆ, ಅಜ್ಜಿಗೆ, ತಿಂಡಿ ಮಾಡೋಕೆ ಸಹಾಯ ಮಾಡು" ರಾಜ ಅನುಮಾನಿಸುತ್ತಾ ಅಡಿಗೆ ಮನೆಯೊಳಕ್ಕೆ ಕಾಲಿಟ್ಟ. ಮೊದಲಿಗೆ ಎಲ್ಲರಿಗೂ ಕಾಫಿಯನ್ನು ಬೆರೆಸಿ ತಂದುಕೊಟ್ಟ. ಮಂದಾರಳಿಗೆ ಹಾಲನ್ನು ಕುಡಿಯಲು ಕೊಟ್ಟ. ತಾನೂ ಕಾಫಿಯನ್ನು ಕುಡಿದು, ಅಜ್ಜಿಗೆ ಸಹಾಯ ಮಾಡಲು ಒಳಬಂದ. ಕೇಶವ ಅಲ್ಲೆ ಇದ್ದುದನ್ನು ಗಮನಿಸಿ, ಗೌರಮ್ಮ ಹೆಚ್ಚು ಮಾತಾಡಲಿಲ್ಲ. ರಾಜ ಕಾಯಿತುರಿಯ್ನು ತುರಿದುಕೊಟ್ಟು, ಹಸಿರು ಮೆಣಸಿನಕಾಯಿ, ಕೊತ್ತಂಬ್ರಿ ಸೊಪ್ಪನ್ನು ಹೆಚ್ಚಿಕೊಟ್ಟ. ಗೌರಮ್ಮ ರವೆಯನ್ನು ಹುರಿದು ಉಪ್ಪಿಟ್ಟನ್ನು ಕೆದಕಿಟ್ಟಳು.

"ಅಜ್ಜೀ ಜಡೆ ಹಾಕ್ತೀರಾ!" ಮಂದಾರ ಕೇಳಿದಾಗ ಗೌರಮ್ಮ ರೇಗಿದಳು.

"ಯಾಕೆ! ನಿನ್ನ ಅಕ್ಕಂದಿರಿಗೆ ಜಡೆ ಹೆಣೆಯೋಕೆ ಬರುಲ್ವಾ?"

"ನಿಮ್ಮ ಕೈಲಿ ಹಾಕಿಸ್ಕೋ ಅಂತ ಅಮ್ಮ ಹೇಳಿದಾಳೆ. ಬಿಗಿಯಾಗಿ ಜಡೆ ಹಣೆದು, ಟೇಪು ಕಟ್ಟಿ, ಮೇಲಕ್ಕೆ ಎತ್ತಿ ಕಟ್ಟಬೇಕು. ಇಲ್ಲದಿದ್ರೆ ಬಿಚ್ಚಿ ಹೋಗುತ್ತೆ. ಮಧುರ ಆಗುಲ್ಲ ಅಂತ ಅಂದುಬಿಟ್ಲು."

"ನಾನು ಹೆಣೇಲಾ?" ರಾಜ ಉತ್ಸಾಹದಿಂದ ಕೇಳಿದಾಗ ಮಂದಾರ ನಕ್ಕಳು.

"ನಿಮಗೆ ಬರುತ್ತಾ?..."

"ಹೂಂ. ಮಾವನ ಮಗಳು ಇಂದಿರಂಗೆ ಎಷ್ಟೋ ಸಾರಿ ಹಾಕಿದೀನಿ. ಅತ್ತೆ ಒಳಗೆ ಇಲ್ಲದಿದ್ದಾಗ."

"ಬಿಗಿಯಾಗಿ ಹಾಕೋಕೇ ಬರುತ್ತಾ! ತಡೀರಿ ಟೇಪು ತರ್ತೀನಿ." ಮಂದಾರ ರಿಬ್ಬನ್‌ಗಳನ್ನು ತಂದಳು.

"ಬೇಡ. ನಾನು ಹೆಣೆತೀನಿ... ಇಲ್ಲಿ ಬಾ" ಗೌರಮ್ಮ ದರ್ಪದಿಂದ ನುಡಿದಾಗ ಮಂದಾರ ಬೆಚ್ಚಿದಳು. ರಾಜ ಪೆಚ್ಚಾದ.

"ಯಾಕಜ್ಜೀ ರೇಗ್ತೀರಿ?" ಮಂದಾರ ಕೇಳಿದಳು.

"ಮತ್ತಿನ್ನೇನು? ಅದ್ಯಾವೋನೋ ನಿನ್ನ ಮಾವ?.... ಹೆಣ್ಣು ಮಕ್ಕಳ ಜಡೇನ ಹಾಕಿದ್ರೂ ನೋಡ್ಕೊಂಡು ಸುಮ್ನಿದ್ನಾ?... ನಿಮ್ಮ ಅತ್ತೇಗಾದ್ರೂ ಗೊತ್ತಾಗಬೇಡ್ವಾ! ಕಂಡೋರ ಮನೆ ಮಕ್ಕಳನ್ನು ಸಾಕುವ ನೆವದಲ್ಲಿ ಮನೆ ಚಾಕರಿ ಮಾಡಿಸಿಕೊಳ್ಳೋದು.... ಗಂಡು ಹುಡುಗ ಅನ್ನೋ ಪರಿಜ್ಞಾನಾನಾದ್ರೂ ಬೇಡ್ವಾ? ಒಂದು ತುತ್ತು ಅನ್ನ ಹಾಕ್ತೀನು ಅಂತ, ಹೆಣ್ಣು ಮಕ್ಕಳ ಕೆಲಸಾನೆಲ್ಲಾ ಮಾಡಿಸೋದೇ... ಥೂ ನಾಚಿಕೆಗೇಡು."

"ಅಜ್ಜೀ.... ನಿಧಾನಕ್ಕೆ ಬಾಚೀ ಅಜ್ಜಿ... ತಲೆ ನೋಯ್ತಿದೆ."

"ತಲೆಯೂ ನೋಯುಲ್ಲ. ಬಾಲವೂ ನೋಯುಲ್ಲ. ನಾನೂ ನಿನ್ನ ಅತ್ತೇರಿಗೆ ತಲೆ ಬಾಚಿ ಸ್ಕೂಲಿಗೆ ಕಳಿಸ್ತಿದ್ದೆ. ಸತ್ಯವತಿಗಂತೂ ಮಾರುದ್ದ ಕೂದಲು. ತಲೆಗೆ ನೀರು ಹಾಕಿಕೊಂಡ ದಿನವಂತೂ, ಒಣಗಿಸಿ, ಸಿಕ್ಕುಬಿಡಿಸಿ, ಜಡೆ ಹೆಣೆಯುವಷ್ಟರಲ್ಲಿ ಕೈ ಬಿದ್ದುಹೋಗ್ತಿತ್ತು." ಮಂದಾರ, ಅಜ್ಜೀ... ಅಜ್ಜೀ ಎಂದು ಕಿರುಚಿದರೂ, ಸಾಕು ಸುಮ್ನಿರೇ ಕಂಡಿದೀನಿ" ಎನ್ನುತ್ತಾ ಊರಿ ಊರಿ ಬಾಚಿ, ಬಿಗಿಯಾಗಿ ಕೂದಲನ್ನು ಹಿಡಿದು, ಜಡೆ ಹೆಣೆದು, ಟೇಪನ್ನು ಸೇರಿಸಿ, ಮೇಲಕ್ಕೆ ಎತ್ತಿ ಕಟ್ಟಿದಳು. ಅಜ್ಜಿಯ ಕೈ ಸಡಿಲವಾಗುತ್ತಿದ್ದಂತೇ, ಮಂದಾರ ಎದ್ದು ರೂಮಿಗೆ ಓಡಿ ಹೋಗಿ ಕನ್ನಡಿ ಮುಂದೆ ನಿಂತಳು. ಅಳು ಬಂದಿತ್ತು.

"ನಾನು ಸ್ಕೂಲಿಗೆ ಹೋಗುಲ್ಲ. ಫ್ರೆಂಡ್ಸ್ ಎಲ್ಲಾ ನಗ್ತಾರೆ" ತಂದೆಯೊಡನೆ ಅಳುತ್ತಾ ನುಡಿದಳು.

"ಯಾರೂ ನಗುಲ್ಲ. ನಗೋರ ಕೆನ್ನೆಗೆ ಎರಡು ಬಾರಿಸು ದವಡೆ ಹಲ್ಲು ಉದುರಿ ಬೀಳೋಹಾಗ" ಅಜ್ಜಿ ನುಡಿದಾಗ ಎಲ್ಲರೂ ನಕ್ಕಿದ್ದರು. ಅವಳಿಗೂ ನಗೂ ಬಂದಿತ್ತು.ಆದರೂ ತಡೆದುಕೊಂಡಳು.

* * * *

ಒಂದು ದಿನದ ಮಟ್ಟಿಗೆಂದು ತಾಯಿಯ ಮನೆಗೆ ಹೋಗಿದ್ದ ರಾಧಾ ಮತ್ತೂ ನಾಲ್ಕೈದು ದಿನಗಳು ಉಳಿದುಕೊಳ್ಳಬೇಕಾಯಿತು. ಫೋನು ಮಾಡಿದ್ದಾಗ, ಕೇಶವ ನಾಲ್ಕಾರು ದಿನಗಳು ಇದ್ದು ಬಾ ಎಂದು ಒಪ್ಪಿಗೆಯನ್ನು ನೀಡಿ, ಮನೆ ಕಡೆ ಯಾವ ಚಿಂತೆಯೂ ಬೇಡ ನಿರಾತಂಕವಾಗಿರು ಎಂದು ಧೈರ್ಯವನ್ನು ಹೇಳಿದ್ದ. ರಾಧಾಳಿಗೆ ಮಧುರಳದ್ದೇ ಚಿಂತೆ. ಮೈನೆರೆದು ಮೂರುವಾರಗಳು ಕಳೆದಿವೆ. ತಿಂಗಳಾಗುವುದರೊಳಗೆ ತಾನು ಮಗಳ

ಜೊತೆಯಲ್ಲಿರಬೇಕು. ಈ ವಿಷಯವನ್ನು ಗಂಡನಿಗೆ ಹೇಳುವುದು ಹೇಗೆ? ಅತ್ತೆಯೊಡನೆ ಮಾತನಾಡಿದರೆ ಹಗರಣವೇ ಆಗಬಹುದೇನೋ ಎಂದುಕೊಂಡು ಪಕ್ಕದ ಮನೆಯ ನಂದಿನಿಯೊಡನೆ ಮಾತನಾಡಿದಳು. ಮನಸ್ಸಿಗೆ ಸ್ವಲ್ಪ ನೆಮ್ಮದಿ ಉಂಟಾಗಿತ್ತು.

ಮಧುರ ಸ್ಕೂಲ್ನಿಂದ ಬರುವುದನ್ನೇ ಕಾದಿದ್ದ ನಂದಿನಿ, ಬಾಗಿಲಲ್ಲೇ ನಿಂತಿದ್ದು ಮಧುರಳನ್ನು ಕರೆದಳು. ಮಧುರ ಬೇಸರಿಸಿಕೊಂಡರೂ, ಏನಂಟೀ.... ಎನ್ನುತ್ತಾ ಬಂದಳು.

"ಆಂಟಿ ಮೇಲೆ ಈಗ ನೆನಪು ಬಂತಾ? ಅಮ್ಮ ಎಲ್ಲಿ ಕಾಣ್ತಿಲ್ಲವಲ್ಲ?" ಪ್ರಶ್ನಿಸಿದಳು. ಹೇಳಲೋ ಬೇಡವೋ ಎಂದು ಅನುಮಾನಿಸುತ್ತಾ, ಮಧುರ ತಾಯಿ, ಅಜ್ಜಿಯ ಮನೆಗೆ ಹೋಗಿರುವುದನ್ನ ತಿಳಿಸಿದಳು.

"ನನಗೊಂದ್ಮಾತು ಹೇಳ್ಲಿಲ್ಲ. ನಿಮ್ಮಮ್ಮ... ಹೋಗ್ಲಿಬಿಡು.... ಆ ಹುಡುಗ ಅದೇ ರಾಜ.... ಇನ್ನು ಇಲ್ಲೇ ಇದಾನಲ್ಲ. ಹಾಸ್ಟೆಲ್ಲಿಗೆ ಹೋಗಿಲ್ಲವಲ್ಲ."

"ಏನೋ ಅದೆಲ್ಲ ನಂಗೊತ್ತಿಲ್ಲ ಆಂಟಿ. ನಾನಿನ್ನು ಬರ್ತೀನಿ."

"ಒಂದ್ನಿಮಿಷ ಬಾಯಿಲ್ಲಿ. ಪಿಸುದನಿಯಲ್ಲಿ ಕರೆದು ಬಾಗಿ ನುಡಿದಳು. "ಅಮ್ಮನೂ ಮನೇಲಿಲ್ಲ. ಸ್ವಲ್ಪ ಹುಶಾರಾಗಿರು ಮಧು.... ನಿನ್ನ ರಜಾದಿನಗಳು ಕಳೆದು ತಿಂಗಳಾಗ್ತಾ ಬಂತಲ್ಲ. ಅಮ್ಮ ಇಲ್ಲ ಅಂತ ಹೆದರ್ಬೇಡ. ನನ್ನನ್ನ ಕರಿ.... ನಿಮ್ಮಜ್ಜಿ ತುಂಬಾ ಮಡಿ. ಬೇಕಾದ್ರೆ ನಮ್ಮನೇಲೇ ಬಂದು ಇದ್ಬಿಡು. ನಾನೂ ನಿನ್ನ ಚಿಕ್ಕಮ್ಮ ಇದ್ದ ಹಾಗೆ..." ಮಧುರಳ ಮುಖ ಮಂಕಾಗಿತ್ತು. ಆ ದಿನಗಳನ್ನೂ ಮರೆತೇ ಬಿಟ್ಟಿದ್ದಳು. ಒಂದು ತರಹ ಸಣ್ಣ ಭಯ ಆವರಿಸಿಕೊಂಡಿತು. ಅಮ್ಮ ಮನೆಗೆ ಬೇಗ ಬರಲಿ ಎಂದು ಮನಸ್ಸು ಬಯಸಿತು. ನಂದಿನಿಗೆ ಉತ್ತರಿಸದೇ ಸೀದಾ ಒಳಕ್ಕೆ ಬಂದುಬಿಟ್ಟಳು. ಯಾರೊಡನೆಯೂ ಈ ವಿಷಯವನ್ನು ಚರ್ಚಿಸುವಂತಿಲ್ಲ. ಅಮ್ಮ ಮನೆಯಲ್ಲಿ ಇಲ್ಲದಾಗ ತಾನು ಮುಟ್ಟಾಗಿಬಿಟ್ಟರೆ ಎಂಬ ಆತಂಕ ಕಾಡಿಸತೊಡಗಿತು. ಕಾಫಿ ತಿಂಡಿ ಮುಗಿಯುತ್ತಿದ್ದಂತೆಯೇ ಸಂಗೀತದ ಮೇಡಂ ಬಂದರು. ಇವಳಿಗೆ ಸಂಗೀತ ಪಾಠದ ಮೇಲೂ ಗಮನವಿರಲಿಲ್ಲ.

"ಯಾಕಮ್ಮ ಮಧುರಾ... ಹುಷಾರಿಲ್ವಾ? ನಿನಗೆ ಇವತ್ತು ಪಾಠದ ಮೇಲೆ ಆಸಕ್ತಿಯೇ ಇಲ್ಲ" ಮೇಡಂ ನವಿರಾಗಿ ಆಕ್ಷೇಪಿಸಿದ್ದರು.

"ಅಮ್ಮ ಊರಲ್ಲಿಲ್ಲ. ನಂಗ್ಯಾಕೋ ಆತಂಕವಾಗ್ತಿದೆ." ನಿಜವನ್ನೇ ನುಡಿದಳು ಗಂಟಲು ಕಟ್ಟಿತ್ತು.

"ಅಮ್ಮ ಇಲ್ಲದಿದ್ದರೇನಾಯ್ತು? ಮನೇಲಿ ಇನ್ನೆಲ್ರೂ ಇದಾರಲ್ಲ. ಯಾರೋ ಒಬ್ಬ ಹುಡುಗ ಬೇರೆ ಇದಾನೆ. ಅವನಿಂದ ಏನಾದ್ರೂ ತೊಂದರೇನಾ?" ಆಕೆ ಅನುಮಾನಿಸುತ್ತಾ ಕೇಳಿದರು.

"ಇಲ್ಲ. ಮೇಡಂ, ಹಾಗೇನಿಲ್ಲ. ಅವನು ತುಂಬಾ ಒಳ್ಳೆಯವನು."

"ಅವನು ಯಾರು? ನಿಮಗೇನಾಗಬೇಕು?"

"ನಮ್ಮ ತಂದೆಯ ಸ್ನೇಹಿತರ ಮಗ. ಇಲ್ಲಿಯ ಕಾಲೇಜಿಗೆ ಸೇರಿಕೊಂಡಿದಾನೆ.... ಅಜ್ಜಿಗೆ ಅವನು ಇಲ್ಲಿರೋದು ಇಷ್ಟವಿಲ್ಲ. ಸಿಡಿಸಿಡಿ ಅಂತಾರೆ."

"ಅದು ಸಹಜ. ಬೇರೆ ಯಾರೋ ಹುಡುಗನ್ನ ಮನೇಲಿಟ್ಟುಕೊಂಡ್ರೆ ಮುಜುಗರ ಆಗ್ದೇ ಇರುತ್ತಾ?" ಒಂದ್ಮಾತು ಹೇಳ್ತೀನಿ ಮಧುರ.... ನೀನು ಸ್ವಲ್ಪ ಜಾಗ್ರತೆಯಾಗಿರು... ಒಬ್ಬಳೇ ಮನೇಲಿರಬೇಡ. ತಂಗೀರ ಜೊತೇಲೇ ಇರು."

"ಯಾಕೆ? ನನಗೆ ಒಬ್ಬಳಿಗೇ ಭಯ ಏನೂ ಆಗುಲ್ಲ."

"ಭಯ ಅಂತಲ್ಲ. ಅಕ್ಕಪಕ್ಕದವರು ಗಮನಿಸ್ತಾನೇ ಇರ್ತಾರೆ. ಆ ಹುಡುಗನ ಜೊತೆ ಹೆಚ್ಚಿಗೆ ಮಾತಾಡ್ಬೇಡ. ಎಷ್ಟೋ ಅಷ್ಟರಲ್ಲಿರು."

"ಯಾಕೆ ಮೇಡಂ?"

"ನೀನಿನ್ನು ಚಿಕ್ಕವಳು. ನಿಂಗೆ ಎಷ್ಟೋ ವಿಷಯ ಗೊತ್ತಿರುಲ್ಲ. ನಾನು ಹೀಗೆ ಹೇಳ್ದೆ ಅಂತ ಯಾರಿಗೂ ಹೇಳ್ಬೇಡ. ಆದ್ರೆ ಹುಷಾರಾಗಿರು."

ಆಕೆ ಪಾಠ ಮುಗಿಸಿಹೋದ ಮೇಲೂ ಮಧುರ ಅದೇ ಚಿಂತೆಯಲ್ಲಿದ್ದಳು. ಮೇಡಂ ಯಾಕೆ ಹಾಗೇ ಹೇಳಿದಳು! ಪಕ್ಕದ್ಮನೆ ಆಂಟಿಯೂ ಅದೇ ಅರ್ಥದಲ್ಲಿ ಹೇಳಿದ್ದರು ಯಾಕೆ? ಅವನು ಹುಡುಗ! ನಾನು ಹುಡುಗಿ! ಸ್ಕೂಲಿನಲ್ಲಿ ಹುಡುಗ ಹುಡುಗೀರು ಮಾತಾಡ್ತೀವಿ. ಹಾಗೇ ಮನೇಲೂ. ಅಲ್ಲದೇ ರಾಜ ಅಪ್ಪನ ಸ್ನೇಹಿತರ ಮಗ. ಒಳ್ಳೆಯವನು. ಆದರೆ ಅಜ್ಜಿಗ್ಯಾಕೆ ಅವನನ್ನು ಕಂಡರೆ ಆಗುಲ್ಲ! ಅವರನ್ನೇ ಕೇಳಿಬಿಡಬೇಕೆಂದುಕೊಂಡಳು.

ಗೌರಮ್ಮ ದೇವಸ್ಥಾನಕ್ಕೆ ಹೋಗಿ ಬರುತ್ತೇನೆಂದು ಹೊರಟಾಗ, ಅವಳೂ ಇವರ ಹಿಂದೆ ಬಂದಳು. "ಅಜ್ಜೀ.... ನಾನೂ ನಿಮ್ಮ ಜೊತೇಲಿ ಬರ್ಲಾ?" ಕೇಳಿದಳು.

ಅಜ್ಜಿ ಬಾಯಿಬಾಯಿ ಬಿಟ್ಟಳು. "ನೀನು ನನ್ನ ಜೊತೇಲಿ ಬರ್ತೀಯಾ? ಇವತ್ತು ದೇವರಿಂದ ಏನಾಗ್ಬೇಕಾಗಿದೆ?"

"ನಾನು ನಿಮ್ಹತ್ರ ಸ್ವಲ್ಪ ಗುಟ್ಟಾಗಿ ಮಾತಾಡ್ಬೇಕಾಗಿತ್ತು." ಅಜ್ಜಿ ಸರ್ರನೆ ಹಿಂದಕ್ಕೆ ಸರಿದಳು.

"ಮುಟ್ಟಾಗಿದೀಯಘನೇ? ದೂರ ನಿಂತ್ಕೊ..." ಮಧುರಳ ಮೇಲೆ ಸಿಡುಕಿದಳು. ಅವಳ ಮುಖ ಕೆಂಪಾಯಿತು.

"ಥೂ ಹೋಗಿ ಅಜ್ಜಿ.ಅದೆಲ್ಲ ಏನಿಲ್ಲ. ನೀವು ರೇಗಿಸ್ತೀರಿ. ನಾನು ನಿಮ್ಮ ಜೊತೆ ಬರುಲ್ಲ" ಮುಖ ಊದಿಸಿದಳು.

"ಬರ್ಬೇಡ ಬಿಡು. ನನಗೇನೂ ಭಯವಿಲ್ಲ. ಅದೇನೋ ಹೇಳ್ಬೇಕು ಅಂತ ಅಂದ್ಯಲ್ಲ ಹೇಳು. ನಿಮ್ಮಮ್ಮನೂ ಇಲ್ಲ ಊರ್ನಲ್ಲಿ."

"ಅಮ್ಮನೂ ಊರಲ್ಲಿಲ್ಲ. ಅಪ್ಪನ ಹತ್ರ ಎಲ್ಲಾ ಹೇಳುಕ್ಕಾಗುಲ್ಲ. ನೀವೋ ಸದಾ ಮಡಿ. ಜೊತೆಗೆ ಸಿಡಿಸಿಡಿ. ನಿಮ್ಹತ್ರ ಮಾತಾಡ್ಬೇಕು ಅಂತಂದ್ರೇ ಭಯ ಆಗುತ್ತೆ. ನಾನು ಏನೂ ಹೇಳುಲ್ಲ ನೀವು ಹೋಗಿ. ನಾನು ನಿಮ್ಮ ಜೊತೆಯಲ್ಲೂ ಬರುಲ್ಲ" ಮಧುರ ಹಾಗೇ ಹಿಂತಿರುಗಿ ಮನೆಯೊಳಕ್ಕೆ ಬಂದುಬಿಟ್ಟಳು. ಅಲ್ಲೇ ಕೂತಿದ್ದ ಮಯೂರ ಅಕ್ಕನ ಕಡೆ ತಿರುಗಿದಳು.

"ಅಜ್ಜಿ ಜೊತೆ ಏನು ಮಾತಾಡ್ತಿದ್ದೆ! ಬೈದ್ರಾ?"

"ಅವರಿಗೆ ಇನ್ನೇನು ಕೆಲಸ? ಅಮ್ಮನೂ ಊರಲ್ಲಿಲ್ಲ ಅಂತ ಅಜ್ಜಿಗೆ ನಮ್ಮ ಮೇಲೆ ಕರುಣೇನೇ ಇಲ್ಲ. ನಿನಗೆ ಕಾಲು ನೋವಾಗಿದೆ. ಮಂದಾರ ಚಿಕ್ಕವಳು. ನಮ್ಮ ಚಿಂತೆಯೇ ಅಜ್ಜಿಗಿಲ್ಲ. ಮಡಿ, ಊಟ, ಅಡಿಗೆ ದೇವಸ್ಥಾನ ಇಷ್ಟೇ. ನಾವೂ ಅಮ್ಮನ ಜೊತೇಲಿ ಹೊರಟುಹೋಗಿದ್ದರೆ ಚೆನ್ನಾಗಿತ್ತು."

"ಅಮ್ಮಂಗೆ ಫೋನು ಮಾಡಿ, ಬಾ ಅಂತ ಹೇಳಿದ್ರಾಯ್ತು" ಅಷ್ಟರಲ್ಲಿ ರಾಜ ಬಂದುದರಿಂದ ಅಕ್ಕತಂಗಿಯರು ಮಾತನ್ನು ನಿಲ್ಲಿಸಿದರು. ಮಧುರ ಎದ್ದು ಒಳಗಿನ ರೂಮಿಗೆ ಹೊರಟುಹೋದಳು.

"ಈಗ ಕಾಲು ನೋವು ಹೇಗಿದೆ? ನಿಮ್ಮಕ್ಕ ಯಾಕೆ ಒಂಥರಾ ಇದಾರೆ?" ರಾಜ ಕೇಳಿದಾಗ ಮಯೂರ ಸಪ್ಪಗೆ ನಕ್ಕಳು.

"ಕಾಲು ನೋವೇನೋ ಸ್ವಲ್ಪ ಕಡಿಮೆ ಆಗಿದೆ.ಅಕ್ಕ, ಅಜ್ಜಿ ಹತ್ರ ಬೈಸಿಕೊಂಡಿದಾಳೆ. ಅದಕ್ಕೇ ಕೋಪ..." ಅವನೂ ನಕ್ಕ. ರೂಮಿನ ಬಾಗಿಲ ಬಳಿ ಬಂದು ನಿಂತು ಕೇಳಿದ.

"ಹೌದೇನ್ರೀ? ಅಜ್ಜಿ ಮೇಲೆ ಕೋಪಾನಾ? ಅಜ್ಜಿ ಏನಂತ ಬೈದ್ರು?" ಮಧುರ ಉತ್ತರಿಸದೇ ಅವನನ್ನೇ ನೋಡಿದಳು. ಅವನು ತನ್ನನ್ನೇ ನೋಡುತ್ತಿರುವುದನ್ನು ಗಮನಿಸಿ ಅವಳ ಮುಖ ಅರಕ್ತವಾಯಿತು. ಅವನು ರೂಮಿನ ತನಕ ಬಂದುದು ಸರಿ ಎನಿಸಲಿಲ್ಲ.

"ನೀವ್ಯಾಕೆ ಇಲ್ಲಿಗೆ ಬಂದ್ರಿ? ಸುಮ್ಮನೇ ಹೋಗಿ. ಮಾತಾಡಿಸ್ಬೇಡಿ" ಅವಳು ದಢಾರನೆ ಹಾಗೆ ನುಡಿದಾಗ ಅವನು ಪೆಚ್ಚಾದ. ಒಂದುಗಳಿಗೆ ಅವಳನ್ನೇ ನೋಡಿ, ಹೊರಕ್ಕೆ ಬಂದ. ಮಯೂರಳ ಕಡೆ ನೋಡಿ ಪೆಚ್ಚುನಗೆ ನಕ್ಕು. ಅಲ್ಲಿಂದ ಮರೆಯಾದ. ಮಂದಾರ ಕೇಶವನ ಜೊತೆ ಅಂಗಡಿಗೆ ಹೋಗಿದ್ದಳು. ಮನೆಯಲ್ಲಿ ಇವರಿಬ್ಬರೇ ಅಕ್ಕತಂಗಿಯರು.

"ಅಕ್ಕಾ ಬಾಯಿಲ್ಲೀ..." ಮಯೂರ ಎರಡು ಬಾರಿ ಕರೆದ ನಂತರ ಮಧುರ ಹೊರಕ್ಕೆ ಬಂದಳು.

"ರೂಮ್ನಲ್ಲಿ ಏನ್ಮಾಡ್ತಿದ್ದೆ! ಈ ಬಟ್ಟೇನ ಸ್ವಲ್ಪ ಬಿಗಿಯಾಗಿ ಸುತ್ತಿಕಟ್ತೀಯಾ? ನಾನು ಕಟ್ಟಿದರೆ ಬಿಗೀನೇ ಬರ್ತಿಲ್ಲ"

"ನಾನೇ ಆಗ್ಬೇಕಾ? ಮಂದಾರಳ ಕೈಯಲ್ಲಿ ಕಟ್ಟಿಸ್ಕೋ."

"ಯಾಕೆ? ಕಾಲನ್ನು ಮುಟ್ಬೋಕೆ ಅಸಹ್ಯಾನಾ? ರಾಜಾಂಗೆ ಹೇಳಿದ್ರೆ ತಕ್ಷಣವೇ ಕಟ್ಟಿರ್ತಿದ್ದ. ನಾನೇ ಬೇಡ ಅಂತಂದ್ಕೊಂಡು ಸುಮ್ಮನಾದೆ."

"ಅವನ ಜೊತೆ ಹೆಚ್ಚಿಗೆ ಮಾತಾಡ್ಬೇಡ. ಅವನು ಹೇಗೋ...?"

"ಏನು ಹೇಗೆ? ನನಗೇನೋ ಒಳ್ಳೆಯವನು ಅಂತ ಅನ್ನಿಸುತ್ತೆ. ನಿಂಗೆ ಏನು ಅನುಮಾನ?"

"ನನಗೂ ಯಾವ ಅನುಮಾನ ಇಲ್ಲ. ಆದರೂ ಅವನು ನಮ್ಮ ಮನೆಯವನು ಅಲ್ಲ ಅಲ್ವಾ? ನಮಗ್ಯಾಕೆ ಅವನ ಜೊತೆ ಸ್ನೇಹ?"

"ಮಹಾಬಿಡು. ಸ್ಕೂಲ್ನಲ್ಲಿ ಬಾಯ್ಸ್ ಜೊತೆ ಮಾತಾಡುಲ್ವಾ?"

"ಅದು ಸ್ಕೂಲು ಇದು ಮನೆ. ಅಜ್ಜಿಗೆ ಅವನನ್ನು ಕಂಡ್ರೆ ಆಗುಲ್ಲ.

"ಅಜ್ಜಿಗೆ ನಮ್ಮನ್ಯಾರನ್ನೂ ಕಂಡ್ರೆ ಆಗುಲ್ಲ. ಆದ್ರೆ ಅವನು ನಮ್ಮಥರ ಅಲ್ಲ. ಅಜ್ಜಿ ಬೈದರೂ ನಗ್ತಾ ನಗ್ತಾ ಅವರಿಗೆ ಸಹಾಯ ಮಾಡ್ತಾನೆ. ನಮ್ಮ ಹಾಗೆ ಸಿಟ್ಟೇ ಬರುಲ್ಲ ಅವನಿಗೆ."

"ಸಿಟ್ಟು ಬರದಿದ್ದೆ ಒಳ್ಳೆಯೋನಾ?"

"ಕೆಟ್ಟೋನೋ? ಒಳ್ಳೇಯೋನೋ? ನಮಗೇನಾಗ್ಬೇಕಾಗಿದೆ! ಅಮ್ಮ ಬಂದ ಮೇಲೆ, ಇವನು ಹಾಸ್ಟೆಲ್ಲಿಗೆ ಹೋಗ್ತಾನೆ. ಹಾಗಂತ ಅಪ್ಪ ಅಜ್ಜಿ ಹತ್ರ ಹೇಳ್ತಿದ್ರು."

"ಹೌದಾ? ಅದಕ್ಕೆ ಅಜ್ಜಿ ಏನಂದ್ರು?"

"ಅಜ್ಜಿ ಸುಮ್ಮನಿದ್ರು ಮಾತಾಡ್ಲಿಲ್ಲ. ಏನೂ ಬೈಯಲಿಲ್ಲ."

"ಅಡಿಗೆ ಕೆಲಸದಲ್ಲಿ ಸಹಾಯ ಮಾಡ್ತಾನಲ್ಲ ಅದಕ್ಕೇ ಎಲ್ಲಿ ಹೋದ?"

"ತನ್ನ ರೂಮಿಗೆ ಹೋಗಿರಬಹುದು. ನೀನ್ಯಾಕೆ ರೇಗಿದೆ ಅವನ್ಮೇಲೆ?"

"ಮತ್ತಿನ್ನೇನು? ನನ್ನ ಹಿಂದೆ ಹಿಂದೆ ಯಾಕೆ ರೂಮಿನ ತನಕ ಬಂದ? ಅವನೇನು ಈ ಮನೆಯೋನಲ್ಲ.ಪಾಪ ಅಂತ ಮಾತಾಡ್ಸಿದ್ದಕ್ಕೆ ಹೆಚ್ಕೊಂಡಿದಾನೆ."

"ನೀನು! ಹೀಗೆಲ್ಲಾ ಮಾತಾಡ್ತೀಯ? ಇದೆಲ್ಲಾ ನನ್ನ ಮಾತುಗಳು. ನೀನು ಸಾಧು ಪ್ರಾಣಿಯ ಥರ ತಲೆ ಅಲ್ಲಾಡಿಸ್ಕೊಂಡು ಹಾಡು ಹೇಳೋಕೆ ಸರಿ."

"ನೀನೀಗ ಮೆತ್ತಗಾಗಿದೀಯಲ್ಲ. ನಾವಿಬ್ರೂ ಮಾತಾಡದಿದ್ರೆ ಅವನಿಗೆ ವಿಪರೀತ ಧೈರ್ಯ ಬಂದುಬಿಡುತ್ತೆ" ಹೆಜ್ಜೆ ಸಪ್ಪಳ ಕೇಳಿ ಇಬ್ಬರೂ ಮಾತು ನಿಲ್ಲಿಸಿದರು. ಮಂದಾರ, ತಿಂಡಿಯ ಚೀಲವನ್ನೂ ಹಿಡಿದು ಒಳಬಂದಳು.

* * * *

"ನನ್ನ ಹಾಸ್ಟೆಲ್ ರೂಂ ವಿಷಯ ಏನಾಯ್ತು ಅಂಕಲ್. ರೆಗ್ಯುಲರ್ ಆಗಿ ಕ್ಲಾಸಸ್ ಶುರುವಾಗಿದೆ. ಮುಂದಿನ ವಾರ ಇಂಟರ್‌ನಲ್ಸ್ ಇದೆ."

"ಯಾಕಯ್ಯಾ ಮನೇಲಿ ಬೇಜಾರಾಗ್ತಿದೆಯಾ?" ಕೇಶವ ಕೇಳಿದ.

"ಹಾಗೇನಿಲ್ಲ.... ಆದ್ರೂ..."

"ಸರಿ. ಸುಮ್ಮನಿರು. ಹಾಸ್ಟೆಲ್‌ನ ಚಿಂತೆ ನಿನಗ್ಯಾಕೆ?"

"ಆಂಟಿ ಯಾವ್ಯಾಗ ಬರ್ತಾರೆ?"

"ಇನ್ನೂ ಒಂದೆರಡು ದಿನಗಳಾಗಬಹುದು. ಯಾಕೆ?"

"ಸುಮ್ನೆ ಕೇಳ್ದೆ..." ಕೈ ಕೈ ಹೊಸೆಯುತ್ತಾ ನಿಂತವನನ್ನು ಕೇಶವ ಪ್ರಶ್ನಾರ್ಥಕವಾಗಿ ನೋಡಿದ. ನಾನು ಒಂದೆರಡು ದಿನಗಳ ಮಟ್ಟಿಗೆ ಮಾವನ ಮನೆಗೆ ಹೋಗಿ ಬರಬೇಕಾಗಿತ್ತು" ಕೇಶವ ಮುಗುಳ್ನಕ್ಕ.

"ಮಾವನ್ನ ನೋಡ್ಬೇಕು ಅಂತ ಅನ್ನಿಸ್ತಿದೆಯಾ? ಬೇಕಾದ್ರೆ ಇಲ್ಲಿಗೇ ಬರೂವಂತೆ ಫೋನು ಮಾಡಿದ್ರಾಯ್ತು."

"ಬೇಡ. ಮಾವ ಇಲ್ಲಿಗೆ ಬರೋದು ಬೇಡ. ನಾನು ಕೆಲವು ಮುಖ್ಯವಾದ ವಿಷಯಗಳನ್ನು ಕೇಳಬೇಕಾಗಿತ್ತು" ಕೇಶವ ಗಂಭೀರನಾದ.

"ಯಾವ ವಿಷಯ? ಖರ್ಚಿಗೆ ಹಣ ಏನಾದ್ರೂ ಬೇಕಾಗಿತ್ತಾ?"

"ಹಣದ ವಿಷಯ ಅಲ್ಲ. ಬೇರೆ ವಿಷಯ. ನನಗೆ ಹದಿನೆಂಟು ವರ್ಷಗಳು ತುಂಬಿದ ಮೇಲೆ ತಿಳಿಸ್ತೀನಿ ಅಂತ ಹೇಳಿದ್ರು. ಇನ್ನು ಎರಡು ವಾರಕ್ಕೆ ಹದಿನೆಂಟು ವರ್ಷಗಳು ತುಂಬುತ್ತವೆ. ನಾನು ಮಾವನ ಹತ್ರ ಮಾತಾಡ್ಬೇಕು."

"ಸರಿ. ರಾಧಾ ಬರಲಿ. ನೀನು ಇರೋದ್ರಿಂದ ಅಮ್ಮಂಗೆ ಸಹಾಯ ಆಗ್ತಿದೆ. ನಮ್ಮ ಮಕ್ಕಳಿಗೆ. ನಿನ್ನ ಹಾಗೆ ಮನೆ ಕೆಲಸವೇ ಗೊತ್ತಿಲ್ಲ, ಅಮ್ಮನೂ ನಿನ್ನನ್ನು ಹೊಗಳುತ್ತಿದ್ದಳು." ಸುಳ್ಳು ಹೇಳಿ ಅವನನ್ನೇ ದೃಷ್ಟಿಸಿದ.

"ಹೌದಾ! ಅಜ್ಜಿ ಹೊಗಳಿದ್ರಾ!" ಎಂದು ಕೇಳಬೇಕೆಂದು ಕೊಂಡವನು ಹಾಗೇ ಸುಮ್ಮನಾಗಿಬಿಟ್ಟ. ಆದರೆ ಮುಖದಲ್ಲಿ ಮನದ ಗೊಂದಲ ಕಂಡಿತ್ತು.

* * * *

ರಾಧಾ ಮತ್ತೆ ವಾಪಸ್ಸು ಬರುವುದರೊಳಗೆ, ಗೌರಮ್ಮ ಸ್ವಲ್ಪ ಬದಲಾಗಿದ್ದಳು. "ಹೇಗಿದೀರಿ ಅತ್ತೆ? ನಿಮ್ಮೊಬ್ಬರಿಗೇ ಎಲ್ಲಾ ಸಂಭಾಳಿಸುವುದು ಕಷ್ಟವಾಗಿರಬಹುದು ಅಲ್ವಾ?... ಮಕ್ಕಳು ಸಾಕಷ್ಟು ಗೋಳು ಹುಯ್ದುಕೊಂಡಿರಬಹುದು ಅಲ್ವಾ?... "ಅತ್ತೆ ಕೊಟ್ಟ ಕಾಫಿಯನ್ನು ಹೀರುತ್ತಾ ಕೇಳಿದಳು.

"ಹುಂ. ಸ್ವಲ್ಪ ಕೆಲಸ ಹೆಚ್ಚಾದದ್ದೇನೋ ನಿಜ. ಆದರೆ ನಾನೇನು ಹೊರಗಿನವರಿಗೆ ಮಾಡಿದ್ನಾ? ಮನೆಯ ಮಕ್ಕಳೇ ತಾನೇ?" ಈಗ ನಿಮ್ಮ ತಾಯಿಯ ಆರೋಗ್ಯ ಹೇಗಿದೆ?"

"ಪರವಾಗಿಲ್ಲ. ಆದರೆ ಎಲ್ಲಾ ಮಲಗಿದ್ದಲ್ಲೇ ಅತ್ತಿಗೆ ಚೆನ್ನಾಗಿ ನೋಡ್ಕೊತಾರೆ. ಅಣ್ಣಂಗೇ ವಿಪರೀತ ಖರ್ಚಾಯಿತು..."

"ಇಂಥಾ ಸಮಯದಲ್ಲಿ ಖರ್ಚಾಗಿಯೇ ಆಗುತ್ತೆ. ನಿಮ್ಮಮ್ಮ ಪುಣ್ಯವಂತೆ. ಮಗ ಸೊಸೆ ಚೆನ್ನಾಗಿ ನೋಡ್ಕೊತಿದಾರಲ್ಲ. ನಿಮ್ಮಪ್ಪ? ಅವರು ಹೇಗಿದಾರೆ?"

"ಅವರೂ ಮೆತ್ತಗಾಗಿದಾರೆ... ಎಲ್ಲಾ ಮಕ್ಕಳಿಗೆ ವಹಿಸಿಕೊಟ್ಟುಬಿಟ್ಟಿದಾರೆ." ಆದರೂ ಒಂದು ಕೊರಗು. ಮಗನಿಗೆ ಮಕ್ಕಳಾಗಿಲ್ಲ. ಮನೆಯಲ್ಲಿ ಮೊಮ್ಮಕ್ಕಳಿಲ್ಲ ಅಂತ. ಅಣ್ಣ ಬಾಯಿಬಿಟ್ಟೇ ಕೇಳಿದ, ನಿನ್ನ ಚಿಕ್ಕ ಮಗಳನ್ನು ನನಗೆ ಕೊಟ್ಟುಬಿಡು. ನಾನು ಸಾಕಿಕೊಳ್ತೀನಿ ಅಂತಂದ."

"ನೀನೇನಂದೆ?.... ನೀನೇ ಏನೂ ತೀರ್ಮಾನತಗೊಳ್ಳಲಿಲ್ಲ ತಾನೇ?" ಗೌರಮ್ಮ ಗಾಬರಿಯಿಂದ ಕೇಳಿದಾಗ ರಾಧಾ ನಸುನಕ್ಕಳು.

"ಇಲ್ಲ ಅತ್ತೆ. ನಾನೊಬ್ಬಳೇ ಹೇಗೇ ನಿರ್ಧಾರ ಮಾಡಲಿ? ... ಅಲ್ಲದೇ..."

"ಸದ್ಯ. ಅಷ್ಟು ತಿಳುವಳಿಕೆ ಇದ್ದರೆ ಸಾಕು. ಅವನು ನಿಮ್ಮಣ್ಣ ಅಂತ, ನೀನು ಕರಗಲಿಲ್ಲವಲ್ಲ. ಅವನಿಗಾದ್ರೂ ತಿಳುವಳಿಕೆ ಬೇಡ್ವಾ?"

"ನೀವ್ಯಾಕೆ ಚಿಂತಿಸ್ತೀರಿ? ನಾನು ಅವನಿಗೆ ಒಂದು ಒಳ್ಳೆಯ ಸಲಹೆಯನ್ನು ಕೊಟ್ಟೆ. ಒಂದು ಮಗುವನ್ನು ದತ್ತು ತಗೊಂಡು ಸಾಕ್ಕೋ... ಸ್ವಂತದವನಾಗ್ತಾನೆ ಅಂತ ಹೇಳ್ದೆ."

"ಯಾವುದೇ ಮಗು, ಬೆಳೆದ ಮೇಲೆ ನಮ್ಮ ಸ್ವಂತದ್ದು ಆಗಲು ಸಾಧ್ಯವಿಲ್ಲ ರಾಧಾ... ಸ್ವಂತ ಮಕ್ಕಳೇ ಕೈಕೊಡ್ತಾರೆ." ನಿಟ್ಟುಸಿರುಬಿಟ್ಟಳು.

"ನನಗೆ ಒಂದು ಆಲೋಚನೆ ಹೊಳೆದಿದೆ ಅತ್ತೇ, ನೀವೇನಂತಿರೋ?"

"ಮಧುರ, ಮಯೂರ, ಮಂದಾರ ನನ್ನ ಮೊಮ್ಮಕ್ಕಳು.... ಅವರುಗಳು ನಮ್ಮ ಮನೆಯಲ್ಲೇ ಬೆಳೆಯಬೇಕು."

"ಹೌದು ಅತ್ತೆ. ಮೂವರು ಈ ಮನೆಯ ಮಕ್ಕಳು. ಇಲ್ಲೇ ಬೆಳೆಯಬೇಕು. ನಾವೇ ಬೆಳೆಸಬೇಕು. ತಂದೆತಾಯಿ ಇಲ್ಲದ ಯಾರಾದರೂ ಅನಾಥ ಮಕ್ಕಳಲ್ಲಿ ಒಬ್ಬರನ್ನು ಅಣ್ಣ ಸಾಕಿಕೊಂಡು ಬೆಳೆಸ್ತಾನೆ ಮದುವೆಯಾಗಿ ಹನ್ನೆರಡು ವರ್ಷದ ಮೇಲಾಯ್ತು. ಇನ್ನು ಮಕ್ಕಳಾಗುಲ್ಲ ಅಂತ ಖಚಿತವಾಗಿದೆ. ವ್ರತಗಳನ್ನು ಮಾಡಿದಾರೆ. ಡಾಕ್ಟರ ಬಳಿಗೆ ಹೋಗಿದಾರೆ."

"ಆದರೂ ಅವನು ಕಣ್ಣುಬಿಟ್ಟಿಲ್ಲ. ಏನು ಅವನ ಮಾಯೆಯೊ?"

"ಯಾರದ್ದು?"

"ಅದೇ ಕಣ್ಣಿಗೆ ಕಾಣದಂತೆ ಕುಳಿತು ಆಟ ಆಡಿಸುತ್ತಾನಲ್ಲ ಅವನ ಮಾಯೆ. ಇಲ್ಲದಿದ್ರೆ ಪ್ರಪಂಚ ಯಾಕೆ ಹೀಗೆ ವಿಚಿತ್ರವಾಗಿರ್ತಿತ್ತು? ಈಗ ಈ ಮುಂಡೇದನ್ನ ನೋಡು... ತಬ್ಬಲಿ. ಅಯ್ಯೋ ಪಾಪ ಅಂತ ಅನ್ನಿಸುತ್ತೆ."

"ಯಾರ ಬಗ್ಗೆ ಹೇಳ್ತಿದೀರಿ?"

"ರಾಜ ರಾಜನ ಬಗ್ಗೆ. ನನ್ನ ಮೊಮ್ಮಗ ತಬ್ಬಲಿ ಅಂತ ಯಾರ ಕೈಲೂ ಹೇಳಿಕೊಳ್ಳೋಕೆ ಆಗದ ಸ್ಥಿತಿ." ಗೌರಮ್ಮ ಲೊಚಗುಟ್ಟಿದಳು.

"ಅವನ್ಯಾಕೆ ತಬ್ಬಲಿ? ನೀವು, ಅಜ್ಜಿ ಇದೀರಿ. ನಾವೆಲ್ಲಾ ಇದೀವಿ."

"ಆದರೂ ಅಪ್ಪ ಅಮ್ಮ ಇದ್ದ ಹಾಗೆ ಆಗುತ್ಯೆ? ಅಪ್ಪ ಬದುಕಿದ್ದೂ ಮಗನಿಗೆ ತಿಳಿಯದಂತೆ ಇದಾನೆ. ನನಗೂ ದ್ರೋಹ ಮಾಡಿದ. ಈಗ ಮಗನಿಗೂ ಅನ್ಯಾಯ ಮಾಡ್ತಿದಾನೆ. ಪಾಪಿ."

"ಅತ್ತೇ.... ನಂಗೆ ಒಂದು ಆಸೆ. ರಾಜನ್ನ ನಮ್ಮಣ್ಣ ದತ್ತು ತಗೊಂಡ್ರೇ....
"ರಾಧಾ... ನಂಗೊತ್ತಿತ್ತು ನಿಂಗೆ ಇಂಥದ್ದು ಒಂದು ಕೆಟ್ಟ ಆಸೆ ಇರಬಹುದು ಅಂತ... ಅವನ ತಂದೆ ಇನ್ನೂ ಬದುಕಿದಾನೆ..."

"ಹಾಗಲ್ಲ ಅತ್ತೇ.... ಭಾವನವರು ಒಪ್ಪಿದರೇ... ಅಣ್ಣ ಚೆನ್ನಾಗಿ ನೋಡ್ಕೋತಾನೆ ಓದಿಸ್ತಾನೆ. ಅವನ ಆಸ್ತಿಪಾಸ್ತಿಗೆಲ್ಲಾ ಇವನೇ ವಾರಸುದಾರನಾಗ್ತಾನೆ."

"ಬೇಡ. ರಾಜ ಮೂರ್ತಿಯ ಮಗ ಅಂತ ಯಾರಿಗೂ ಗೊತ್ತಾಗುವುದು ಬೇಡ. ಆಸ್ತಿಪಾಸ್ತಿಯ ಆಸೆಗೆ ಮಗನನ್ನು ಅವನು ಮಾರುವುದೂ ಬೇಡ"

"ಹಾಗಾದರೆ ರಾಜ.... ಒಂದು ನೆಲೆ ಇಲ್ಲಬೇ ಅಲ್ಲಿ ಇಲ್ಲಿ ಎಲ್ಲೋ ಹೇಗೋ ಇದ್ದರೆ ಏನು ಚೆನ್ನ ನೀವೇ ಹೇಳಿ ಅತ್ತೇ."

"ಸದ್ಯಕ್ಕೆ ಇಲ್ಲಿ ಇದಾನಲ್ಲ. ಹೀಗೇ ಇರಲಿಬಿಡು..." ಎತ್ತಲೋ ನೋಡುತ್ತಾ ಹೇಳಿದಳು ರಾಧಂಗೆ ಅಚ್ಚರಿಯಾಗಿತ್ತು.

"ಹೀಗೇ ಅಂದ್ರೇ... ವಾರದಾನ್ನದ ಹುಡುಗನ ಥರ ಒಂದು ತುತ್ತು ಊಟಕ್ಕಾಗಿ, ನಮ್ಮ ಮನೇಲಿದ್ದುಕೊಂಡು ಓದ್ತಾನೆ. ಓದು ಮುಗಿದ ಮೇಲೆ ಕೆಲಸ ಸಿಕ್ಕಿ ಬೇರೆ ಊರಿಗೆ ಹೋಗಬಹುದು. ಆಗ ನಮ್ಮನ್ನೆಲ್ಲ ಮರೆತುಬಿಡಬಹುದು. ಆಗ ಬೇಸರವಾಗುವುದು ನಮಗೇ..."

"ರಾಜ ಅಂಥೋನಲ್ಲ..... ನಮ್ಮನ್ನೆಲ್ಲ ಅಷ್ಟು ಸುಲಭವಾಗಿ ಮರೆತುಬಿಡುವವನಲ್ಲ."

"ರಾಜ ಏನೋ ಒಳ್ಳೆಯವನೇ. ಆದರೆ ಕಾಲ ಎಲ್ಲವನ್ನು ಮರೆಸಬಹುದು. ಇಲ್ಲಿಯ ನಾಲ್ಕೈದು ವರ್ಷಗಳ ಜೀವನವನ್ನು ಅವನು ನೆನಪಿನಲ್ಲಿಟ್ಟುಕೊಂಡರೂ, ಅವನು ನಮ್ಮ ಸ್ವಂತದವನಾಗುವುದಿಲ್ಲ. ಅವನ

ಕೆಲಸ... ಅವನ ಸಂಸಾರಗಳಲ್ಲಿ ಅವನು ನಮ್ಮಗಳನ್ನು ನೆನಪಿಸಿಕೊಂಡರೂ ಅದು ನಮಗೆ ತಿಳಿಯುವುದು ಹೇಗೆ?....

"ಇಲ್ಲೇ ಯಾವುದಾದರೂ ಕೆಲಸಕ್ಕೆ ಸೇರಿಕೊಳ್ಳಲಿ.... ನಮ್ಮ ಜೊತೆಯಲ್ಲೇ ಇರಬಹುದಲ್ಲ."

"ಮದುವೆಯಾಗಿ ಬಂದವಳಿಗೆ ಅದು ಸರಿ ಹೋಗದಿದ್ದರೇ..."

"ಸರಿ ಹೋಗುವಂಥ ಹುಡುಗಿಯನ್ನೇ ಹುಡುಕೋಣ."

"ಆ ಅಧಿಕಾರ ನಮಗೆಲ್ಲಿದೆ? ಅವನ ಮೇಲೆ ನಮಗೆ ಯಾವ ಹಕ್ಕು ಇಲ್ಲವಲ್ಲ."

"ಯಾಕಿಲ್ಲ? ನಾನು ಅವನ ಅಜ್ಜಿ" ರಾಧಾ ಮುಸಿಮುಸಿ ನಕ್ಕಳು. ಗೌರಮ್ಮ ತಪ್ಪು ಮಾಡಿದವಳಂತೆ ಪೆಚ್ಚಾದಳು.

"ಅಂತೂ, ನೀವು ಅವನ ಅಜ್ಜಿ ಅಂತ ನೀವೇ ಒಪ್ಪಿಕೊಂಡಿರಿ. ನನಗೀಗ ಒಂಥರಾ ಸಮಾಧಾನವಾಗಿದೆ. ಅಂತೂ ನೀವು ಅವನನ್ನು ಮೆಚ್ಚಿದಿರಿ." ಗೆದ್ದವಳಂತೆ ಮುಖ ಮಾಡಿದಳು.

"ಗುಣಕ್ಕೆ ಮತ್ಸರವೇ ಅಂತ... ಅಹಂಕಾರ, ಮದ, ಮತ್ಸರ ಯಾವುದೂ ಇಲ್ಲ ಅದಕ್ಕೆ. ಒಳ್ಳೆಯ ನಡತೆ. ಅಯ್ಯೋ ಅಂತ ಅನ್ನಿಸುತ್ತೆ. ನಿನ್ನ ಮಕ್ಕಳು, ಹೆಣ್ಣು ಅನ್ನೋದನ್ನು ಮರೆತು ಕಿತ್ತಾಡುತ್ವೆ.... ಅವನಿಗೆ ಯಾರಿದಾರೆ ಹೇಳು? ಸ್ವಂತ ಅನ್ನೋರು ಯಾರಿಲ್ಲ. ನಾನು ನಿಜವಾದ ಅಜ್ಜಿ ಅಂತ ಗೊತ್ತಿಲ್ಲ. ಆದರೂ ನನ್ನ ಮೇಲೆ ಗೌರವ. ಸ್ವಂತ ತಂಗೀರನ್ನೂ ಯಾರೂ ನೋಡ್ಕೋತಾರೊ ಇಲ್ವೋ... ಮಂದಾರನ್ನ ಕಂಡರಂತೂ ಅತೀ ಅಕ್ಕರೆ. ಎಲ್ಲಾ ಕೆಲಸವೂ ಗೊತ್ತು. ಮನೆ ಕೆಲಸ ಕಾರ್ಯಗಳ ನಡುವೆಯೂ ಓದಿ ಬುದ್ಧಿವಂತನಾಗಿದಾನೆ. ಅಂಥಾದ್ದರಲ್ಲಿ ವಿದ್ಯೆಯ ಕಡೆಯೇ ಗಮನ ಹರಿದರೆ ವಿದ್ಯಾವಂತನಾಗುತ್ತಾನೆ. ಮುಂದು ಬರುತ್ತಾನೆ. ನನ್ನ ಮೊಮ್ಮಗನಾಗಿ ಹುಟ್ಟಿದ್ದಕ್ಕೆ ಅವನ ಭವಿಷ್ಯ ಚೆನ್ನಾಗಿರಲಿ ಅನ್ನೋ ಆಸೆ ನನಗೂ ಇದೆ ರಾಧಾ.... ನೀವು ಅವನ ಕೈ ಬಿಡಬೇಡಿ" ಗೌರಮ್ಮ ಸೆರಗಿನ ತುದಿಯಿಂದ ಕಣ್ಣೀರನ್ನು ಒರೆಸಿಕೊಂಡಾಗ ರಾಧಾಳಿಗೂ ಕಣ್ಣುಗಳು ತೇವಗೊಂಡವು.

"ನಮಗೂ ಅದೇ ಆಸೆ ಅತ್ತೇ.... ಆದರೆ ನಿಮ್ಮ ಸಮ್ಮತವಿರಲಿಲ್ಲ. ಈಗ ಯಾವ ಚಿಂತೆಯೂ ಇಲ್ಲ" ನಾನು ಈಗಲೇ ಈ ವಿಷಯವನ್ನು ನಿಮ್ಮ ಮಗನಿಗೆ ಹೇಳ್ತೀನಿ."

"ಆದರೆ ಒಂದು ವಿಷಯ..... ರಾಜ ನಿಮ್ಮಿಬ್ಬರ ಮಗನಾಗಿರಬೇಕು.... ಇದಕ್ಕೆ ನಿನ್ನ ಹೆಣ್ಣು ಮಕ್ಕಳು ಏನಂತಾರೋ?"

"ಅವಕ್ಕೆ ಏನು ಗೊತ್ತಾಗುತ್ತೆ? ಎಲ್ಲಾ ಚಿಕ್ಕೋವು."

"ಹಾಗೆನ್ನಬೇಡ. ಮಧುರಮಯೂರ ಚಿಕ್ಕವರಲ್ಲ. ಅವನನ್ನು ಅಣ್ಣ ಅಂತ ಒಪ್ಪಿಕೊಳ್ಳುವುದು ಇಷ್ಟವಾಗದಿರಬಹುದು."

"ನಾನು ಮಾತನಾಡಿ ಒಪ್ಪಿಸ್ತೀನಿ..... ನೀವಾಗಿಯೇ ನೀವು ಆಡಿದ್ದು ನನಗೆ ಸುಲಭವಾಯಿತು ಅತ್ತೇ.... ಇಲ್ದಿದ್ರೆ ನಾನೂ ನಿಮ್ಮನ್ನು ಒಪ್ಪಿಸ್ತಿದ್ದೆ...." ರಾಧಾ ನುಡಿದಾಗ ಗೌರಮ್ಮ ಮುಗುಳ್ನಕ್ಕಳು. "ಆದರೆ, ಒಂದ್ಮಾತು ನನಗೆ ಅರ್ಥವಾಗ್ತಿಲ್ಲ ಅತ್ತೆ. ಕೇವಲ ಮೂರ್ನಾಲ್ಕು ದಿನಗಳಲ್ಲಿ ನೀವು ಅವನ ಸ್ವಂತ ಅಜ್ಜಿ ಆದದ್ದು ಹೇಗೆ?"

"ಏನೋ ನಂಗೊತ್ತಿಲ್ಲ. ನಿನ್ನ ಗಂಡ ಹೇಳ್ದ ಅಂತ, ಸದಾ ನನ್ನ ಜೊತೆ ಜೊತೇಲೇ ಇದ್ದು, ನನಗೆ ಸಹಾಯ ಮಾಡ್ತಿದ್ದ. ಹತ್ತಿರದಲ್ಲೇ ಸುತ್ತಾಡುತ್ತಿದ್ದವನು ನನಗೆ ಹತ್ತಿರವಾದ. ಮಗ ಮಾಡಿದ ತಪ್ಪಿಗೆ ಮೊಮ್ಮಗ ಶಿಕ್ಷೆ ಅನುಭವಿಸುವುದು ಯಾಕೆ ಅಂತ ಅನ್ನಿಸತೊಡಗಿತು.... ನನ್ನ ಮನಸ್ಸು ಕರಗಿತು. ನನಗೂ ಹೃದಯ ಅನ್ನೋದು ಇದೆ ಕಣಮ್ಮಾ....

ರಾಧಾ ಅತ್ತೆಯನ್ನೇ ದಿಟ್ಟಿಸಿ ನೋಡಿದಳು. ಅಲ್ಲಿ, ಆಕೆಯ ಮುಖದಲ್ಲಿ ಹತ್ತಾರು ಭಾವನೆಗಳನ್ನೂ ಗುರುತಿಸಿದಳು. ಸಮಾಧಾನ, ತೃಪ್ತಿ, ಸಂತೋಷ, ಒಲವು ಪ್ರೀತಿ, ಗೆಲವು ಎಲ್ಲವೂ ಅಡಗಿತ್ತು. ಒಂದು ಗಳಿಗೆ ಹಿತವೆನಿಸಿದರೂ, ಏನೋ ಕೊರತೆಯನ್ನು ತುಂಬುವ ಆತುರವಿರಬಹುದೇ ಅಂತೆನ್ನಿಸಿತು. ತಾನೂ ರಾಜನನ್ನು ಮೆಚ್ಚಿದ್ದೆ. ಅದ್ಯಾಕೆ ಅಂತ ತಿಳಿಯದು, ಅಂಥ ಮಗನೊಬ್ಬ ತಮಗೂ ಇದ್ದರೆ ಚೆನ್ನಾ ಅಂತೆನ್ನಿಸಿತ್ತು. ಆ ಆಸೆಯನ್ನು ಗಂಡನೊಡನೆ ವ್ಯಕ್ತಪಡಿಸಿದ್ದಳು. ಆದರೆ ಪತಿರಾಯ ತಾಯಿ ಏನನ್ನುವಳೋ ಎನ್ನುವ ಆತಂಕವನ್ನು ವ್ಯಕ್ತಪಡಿಸಿದ್ದ. ಈಗ ಅದೂ ಇಲ್ಲವಾಗಿದೆ. ಆದಷ್ಟು ಬೇಗ ಗಂಡನೊಡನೆ ಮಾತನಾಡಬೇಕೆಂದುಕೊಂಡಳು. ಆದರೆ ಸಣ್ಣಗೆ ಒಂದು ಆತಂಕದ ಎಳೆಯನ್ನು ಅತ್ತೆ ಎಳೆದಿದ್ದಳು. ಹೌದು. ಮಧುರ ಮಯೂರ ಚಿಕ್ಕವರಲ್ಲ. ಬೆಳೆದು ನಿಂತಿದ್ದಾರೆ. ತಿಳುವಳಿಕೆಯುಳ್ಳವರಾಗುತ್ತಿದ್ದಾರೆ. ಮನದಲ್ಲಿ ಏನು ಭಾವನೆಗಳಿವೆಯೊ? ಮಕ್ಕಳೊಡನೆ ಮಾತನಾಡಲೇಬೇಕು. ಮಕ್ಕಳಿಗೆ ಸರಿ ಎನಿಸದಿದ್ದರೆ ತಾನು ವಿರುದ್ಧವಾಗಿ ಈ ನಿರ್ಣಯವನ್ನು

ತೆಗೆದುಕೊಳ್ಳಲಾಗುವುದಿಲ್ಲ. ಮೊದಲು ಗಂಡನೊಡನೆ ಮಾತನಾಡಿ ಒಂದು ತೀರ್ಮಾನಕ್ಕೆ ಬರಬೇಕೆಂದುಕೊಂಡು ಗಂಡನಿಗಾಗಿ ಕಾದಳು.

* * * *

"ಏನ್ರೀ.... ಒಂದ್ನಿಮಿಷ ಬರ್ತೀರಾ?" ರಾಧಾ, ರೂಮಿನ ಬಾಗಿಲ ಬಳಿ ನಿಂತು ಪಿಸುದನಿಯಲ್ಲಿ ಕರೆದಾಗ, ಕೇಶವ ಟಿ.ವಿ.ಯನ್ನು ಆರಿಸಿ, ಹೆಂಡತಿಯ ಬಳಿಗೆ ಬಂದು ತುಂಟತನದಿಂದ ಪ್ರಶ್ನಿಸಿದ.

"ಏನು ವಿಷಯ? ಬಹಳ ಖುಷಿಯಾಗಿರುವ ಹಾಗಿದೆ" ಮೆಲ್ಲಗೆ ನುಡಿದು ಅತ್ತಿದ್ದ ನೋಡಿ ಅವಳ ಹೊಟ್ಟೆಯ ಮೇಲೆ ಕೈಯಾಡಿಸಿದ.

"ಥೂ, ಕೈ ತೆಗೀರಿ... ನಿಮಗೆ ಸದಾ ಇದೇ ಧ್ಯಾಸ...."

"ಏನು ಮಾಡ್ತೋದು... ಮಕ್ಕಳು ದೊಡ್ಡವರಾದ್ರು.... ನೀನು ನನ್ನ ಕೈಗೆ ಮುಂಚಿನಂತೆ ಸಿಗುವುದೇ ಇಲ್ಲ" ಎನ್ನುತ್ತಾ ಅವಳನ್ನು ರೂಮಿನೊಳಕ್ಕೆ ತಳ್ಳಿಕೊಂಡು ನಡೆದ.

"ಮಂದಾರ ಮಲಗಿದಾಳೆ. ಬಿಡಿ ನನ್ನನ್ನ" ರಾಧಾ ಕೊಸರಿಕೊಂಡಳು. ಕೇಶವ ಹಿಡಿತವನ್ನು ಸಡಿಲಗೊಳಿಸಿದ.

"ರಾಧೀ ನೀನು ಕೆಟ್ಟವಳು ಕಣೇ. ನನ್ನ ಮೇಲೆ ನಿನಗೆ ಪ್ರೀತಿಯೇ ಇಲ್ಲ" ಅವಳನ್ನು ದೂಷಿಸಿದ.

"ಹಾಗೇ ಅಂದ್ಕೊಳ್ಳಿ... ಮಗಳು ಮದುವೆಗೆ ಬರುವ ವಯಸ್ಸಾಗ್ತಿದೆ... ಮಕ್ಕಳ ಭವಿಷ್ಯದ ಬಗ್ಗೆ ಯೋಚಿಸ್ಬೇಕು. ನಮ್ಮ ಕಾಲ ಎಲ್ಲ...." ಕೇಶವ ಅವಳ ಬಾಯ ಮೇಲೆ ಕೈಯನ್ನಿಟ್ಟ.

"ಹಾಗೆಲ್ಲಾ ಮಾತಾಡ್ಬೇಡ ರಾಧಾ.... ನಾವೂ ನಮ್ಮತನವನ್ನು ಉಳಿಸಿಕೊಳ್ಳಬೇಕು. ದಿನದಿನವೂ ಹೊಸದಾಗಿರಬೇಕು. ನಾವುಗಳು ಯುವಕಯುವತಿಯರು ಅಲ್ಲ ನಿಜ. ಆದರೆ ಮುದುಕ ಮುದುಕಿಯರಾಗಿಲ್ಲ ಅದೂ ನಿಜ ತಾನೇ. ಆಗ ಈಗ ನನಗೂ ಸ್ವಲ್ಪ ಸಮಯಕೊಡು. ಆಯಾಸಗೊಂಡ ಮನಸ್ಸಿಗೆ ಹಿತವಾಗಿರುತ್ತೆ."

"ಬರ್ತಾ ಬರ್ತಾ ನೀವು ಹೊಸ ಮದುಮಗನ ಥರ ಆಡ್ತೀರಪ್ಪಾ..."

"ಯಾಕೆ ಆಡ್ಬಾರ್ದು.... ನನ್ನ ಹೆಂಡತಿಯ ಹತ್ತಿರಾನೇ ತಾನೇ ನಾನು ಸರಸವಾಡುತ್ತಿರುವುದು. ಯಾರು ಏನಾದ್ರೂ ಅಂದ್ಕೊಳ್ಳಲಿ. ಮಂದಾರನ್ನ ಹೊರಕ್ಕೆ ಮಲಗಿಸಿ ಬರ್ತೀನಿ" ನಿದ್ರಿಸುತ್ತಿದ್ದ ಮಗಳನ್ನು ಎಬ್ಬಿಸಲು ನೋಡಿದ.

ಅವಳ ಕೊಸರಾಡಿ ಮಗ್ಗಲು ಬದಲಾಯಿಸುತ್ತಾ "ಅಮ್ಮಾ.... ನೋಡಮ್ಮ ಅಪ್ಪನ್ನ" ಎಂದು ಗೊಣಗಿದಾಗ ರಾಧಾ ನಕ್ಕು ಅವನನ್ನು ಇತ್ತ ಎಳೆದಳು.

"ನೋಡಿದ್ಯಾ..... ನೀನು ನಿನ್ನ ಮಕ್ಕಳೆಲ್ಲ ಒಂದು ಇವಳಿಗೆ ಮುದ್ದು ಹೆಚ್ಚಾಯಿತು."

"ಕೋಪಿಸ್ಕೋಬೇಡಿ.... ಈ ಮಕ್ಕಳೂ ನಿಮ್ಮವೇ. ನಿಮ್ಮ ಪ್ರೀತಿಗೆ ಹುಟ್ಟಿದವರೇ. ಈಗ ನನ್ನನ್ನು ದೂಷಿಸಬೇಡಿ" ಕೋಪಿಸಿಕೊಂಡು ಹೊರಹೊರಟವನನ್ನು ತಡೆದಳು. "ನಾನು ನಿಮ್ಮನ್ನು ಕರೆದದ್ದು ಬೇರೆ ಮಾತನ್ನಾಡೋಕೆ. ಈ ನಡುವೆ ನಮ್ಮಿಬ್ಬರಿಗೂ ಮಾತನಾಡುಕ್ಕೆ ಸಹ ಸಮಯ ಸಿಗುಲ್ಲ ನಾನೇನ್ಮಾಡ್ಲೀ?

"ಹುಂ. ಹೇಳು ಏನು ಕರೆದ್ದು?" ಬಿಗುಮಾನದಿಂದ ಕೇಳಿದ.

"ನಿಮ್ಮಮ್ಮ ಕೂಡಾ ರಾಜನ್ನ ತುಂಬಾ ಮೆಚ್ಚಿಕೊಂಡಿದಾರೆ. ಅವನ ಕೈ ಬಿಡಬೇಡಿ. ಅವನ ಜವಾಬ್ದಾರಿ ವಹಿಸಿಕೊಳ್ಳಿ ಅಂತಂದರು."

"ನೀನೇನಂದೆ?" ಸುಮ್ಮನೇ ಎಂಬಂತೆ ಕೇಳಿದ.

"ಅದಕ್ಕೇ ನಿಮ್ಮನ್ನು ಕರೆದದ್ದು.... ಈಗ ಖಚಿತವಾದ ನಿರ್ಧಾರವನ್ನು ತಗೋಬೇಕಾಗಿದೆ.... ನಿಮ್ಮ ಹತ್ರ ಮಾತಾಡ್ತೀನಿ ಅಂತಂದೆ."

"ನೀನೇ ಮೊದಲಿಗೆ ಈ ಪ್ರಸ್ತಾಪವನ್ನು ಎತ್ತಿದವಳು. ಈಗ ಮತ್ತೆ ಯಾಕೆ ಅನುಮಾನ?"

"ಅತ್ತೆ ಒಂದ್ಮಾತು ಹೇಳಿದರು. ಅವರು ಹೇಳೋದೂ ಸರಿ. ಮಧುರ, ಮಯೂರನ್ನು ಒಂದ್ಮಾತು ಕೇಳ್ಬೇಕು."

"ಅವರನ್ನೇನು ಕೇಳೋದು..? ಅದೇನೂ ಬೇಡ."

"ಹಾಗೆನ್ಬೇಡಿ.... ಹೆಣ್ಣು ಮಕ್ಕಳ ಮನಸ್ಸು ಬಹಳ ಸೂಕ್ಷ್ಮ. ಈಗ ಮಧು ಬಹಳ ನಾಜೂಕಾಗಿದಾಳೆ. ಇದ್ದಕ್ಕಿದ್ದಂತೆ, ಒಬ್ಬ ಹುಡುಗನ್ನ ಸೋದರ ಅಂತ ಒಪ್ಪಿಕೊಳ್ತಾಳಾ?"

"ಒಪ್ಪಿಕೊಳ್ಳುವ ಹಾಗೆ ಮಾತಾಡು. ನೀನು ತಾಯಿ. ನಿನಗೇ ಗೊತ್ತು ಹೇಗೆ ಮಾತಾಡ್ಬೇಕು ಅಂತ."

"ಮಧುರಂಗಿಂತ ಮಯೂರ ಜೋರು... ಏನು ಗಲಾಟೆ ಮಾಡ್ತಾಳೋ ಅಂತ ದಿಗಿಲಾಗುತ್ತೆ."

"ಅದನ್ನೆಲ್ಲ ನೀನೇ ಸರಿ ಮಾಡ್ಬೇಕು ರಾಧಾ.... ಈಗ ಹಿಂಜರಿಯುವುದು ಸರಿ ಅಂತ ಅನ್ನಿಸುತ್ತಾ?"

"ಇಲ್ಲ. ಅದಕ್ಕೇ ನಿಮ್ಮನ್ನು ಕೇಳಿದ್ದು. ಸದ್ಯಕ್ಕೆ ಅವನನ್ನು ಹಾಸ್ಟೆಲ್ಲಿಗೆ ಸೇರಿಸಿಬಿಡಿ. ನಿಧಾನವಾಗಿ ನಾನು ಮಧುರ, ಮಯೂರಂಗೆ ಅವನ ಬಗ್ಗೆ ತಿಳಿಸಿ ಒಪ್ಪಿಸ್ತೀನಿ."

"ನಿಜ ಹೇಳಿಬಿಡ್ತೀಯಾ?"

"ಹೇಳಬೇಕಾದರೆ ಹೇಳಿಬಿಡೋದು ವಾಸಿ."

"ಬೇಡ ರಾಧಾ... ಹೇಳೋದು ಬೇಡ.... ಅವನ ಬಗ್ಗೆ ತಿರಸ್ಕಾರ ಹುಟ್ಟಬಹುದು. ಮುಂದೆ ಏನೂ ಸರಿ ಹೋಗದಿರಬಹುದು."

"ಹಾಗಾದರೆ ಈಗ ಏನು ಮಾಡೋಣ?"

"ಏನು ಮಾಡೋದು ಅಂತ ಯೋಚಿಸೋಣ. ಅಂದ್ಹಾಗೆ, ರಾಜ ನಾಲ್ಕು ದಿನಗಳ ಮಟ್ಟಿಗೆ ಊರಿಗೆ ಹೋಗಿಬರ್ತೀನಿ ಅಂತಂದ ಅಷ್ಟರೊಳಗೆ ಎಲ್ಲಾ ಸರಿಹೋಗಬಹುದು."

"ಊರಿಗೆ ಹೋಗ್ತಾನಂತಾ? ಯಾಕೆ? ಆ ಸೋದರಮಾವನಿಗೆ ಇವನ ಮೇಲೆ ಇರೋ ಪ್ರೀತಿ ಅಷ್ಟರಲ್ಲೇ ಇದೆ."

"ಹಾಗೆನ್ಬೇಡ.... ಅವನನ್ನು ಇಷ್ಟು ವರ್ಷಗಳು ಬೆಳೆಸಿರೋರು ಅವರೇ. ಆ ಅಧಿಕಾರ ಅವರಿಗಿದೆ. ಆ ಕೃತಜ್ಞತೆ ಇವನಿಗಿದೆ. ಅದೇನೋ ಮುಖ್ಯವಾದ ವಿಚಾರವನ್ನು ಅವರ ಹತ್ರ ಮಾತಾಡ್ತಾನಂತೆ... ಅದೂ ಅವನ ಹದಿನೆಂಟನೇ ವರ್ಷದ ಹುಟ್ಟುಹಬ್ಬದ ಸಮಯದಲ್ಲಿ..."

"ಏನು? ರಾಜಂಗೆ ಹದಿನೆಂಟು ವರ್ಷಗಳು ತುಂಬುತ್ತಾ? ಯಾವಾಗ?"

"ಈಗಲೇ ಯಾವಾಗಲೋ.... ಎಂಟು ಹತ್ತು ದಿನಗಳಲ್ಲಿ."

"ಹಾಗಾದರೆ ನಾವು ನಿಧಾನ ಮಾಡುವ ಹಾಗಿಲ್ಲ. ಹದಿನೆಂಟು ವರ್ಷಗಳಾಗಿಬಿಟ್ರೆ ಮೆಜಾರಿಟಿಗೆ ಬಂದುಬಿಡ್ತಾನೆ ಆಮೇಲೆ ಮುಂದೆ?

"ಮೆಜಾರಿಟಿಗೆ ಬಂದ್ಮೇಲೆ ಸಮಸ್ಯೆಯಾಗಬಹುದು... ಆದಷ್ಟು ಬೇಗ ಲಾಯರ್ರನ್ನ ಕೇಳಿ ಮುಂದುವರೀತೀನಿ. ನಾಳೇನೇ ಲಾಯರ್ರ ಹತ್ರ ಹೋಗ್ತೀನಿ"

"ಹೌದು. ಹಾಗೆ ಮಾಡಿ.... ನಿಧಾನಿಸಿದರೆ ಏನೂ ಮಾಡುಕ್ಕೆ ಆಗದೇ ಹೋಗಬಹುದು."

"ಸರಿ ಅಲ್ಲೀವರೆಗೂ ನೀನು ಮಕ್ಕಳಿಗೆ ಏನೂ ಹೇಳಬೇಡ.... ಸುಮ್ನೆ ಯಾಕೆ ಅಂತ..."

"ಅಮ್ಮ ಕೇಳಿದ್ರೆ ಏನು ಹೇಳ್ತೀರಿ?"

"ನಾನು ಅವಳ ಹತ್ರ ಮಾತಾಡ್ತೀನಿ..." ಅಲ್ಲಿಗೆ ಅವರಿಬ್ಬರ ಮಾತು ಮುಗಿದಿತ್ತು. ಕೇಶವ ಹೊರಬಂದ. ರಾಧಾ, ಮಂದಾರಳ ಹೊದಿಕೆಯನ್ನು ಸರಿಪಡಿಸಿ, ಅವಳ ಪಕ್ಕ ಮಲಗಿಕೊಂಡಳು. ಮನಸ್ಸು ಯೋಚನೆಯಲ್ಲಿ ಕಾರ್ಯನಿರತವಾಗಿತ್ತು. ಈಗಾಗಲೇ ತನಗೆ ಈ ಮೂರು ಜವಾಬ್ದಾರಿಗಳಿವೆ. ರಾಜನ ಜವಾಬ್ದಾರಿಯನ್ನು ನಾವಾಗಿಯೇ ಸೇರಿಸಿಕೊಳ್ಳುತ್ತಿದ್ದೇವೆ. ಮುಂದೆ ಏನೇನು ಪರಿಣಾಮಗಳಾಗಲಿವೆಯೋ?" ನಿದ್ದೆ, ಕಣ್ಣುಗಳನ್ನು ಅಪ್ಪಿಕೊಳ್ಳಲು ಸಾಕಷ್ಟು ಸಮಯ ಹಿಡಿಯಿತು.

* * * *

ಇದ್ದಕ್ಕಿದ್ದಂತೆ, ಮಗ ಸೊಸೆ ಬೆಂಗಳೂರಿಗೆ ಹೊರಟಿದ್ದನ್ನು ಕಂಡು ಗೌರಮ್ಮ ಕಣ್ಣರಳಿಸಿದಳು. ಮಕ್ಕಳು ಚಕಿತರಾದರು.

"ಇದೇನೋ ಕೇಶವ.... ಈ ಸಾರಿ ಇವಳನ್ನು ಟೂರ್‌ಗೆ ಕರ್ಕೊಂಡು ಹೋಗ್ತಾ ಇದೀಯಲ್ಲ."

"ಹೂಂ. ನಮ್ಮ ನನ್ನ ಸ್ನೇಹಿತರೊಬ್ಬರ ಮಗಳ ಮದುವೆ. ಹೆಂಡತಿಯನ್ನು ಖಂಡಿತಾ ಕರ್ಕೊಂಡು ಬರ್ಬೇಕು ಅಂತ ಬಲವಂತ ಮಾಡಿದಾರೆ."

"ಅಮ್ಮಾ ನಾನೂ ಬೆಂಗಳೂರಿಗೆ ಬರ್ತೀನಮ್ಮ ನಂಗೂ ಆಸೆ..." ಮಂದಾರ ಅಂಗಲಾಚಿದಳು. ಮಧುರ, ಮಯೂರ ಸುಮ್ನೆ ಮೌನವಾಗಿ ನಿಂತಿದ್ದರು."

"ರಾಜನೂ ಮನೇಲಿಲ್ಲ. ನಾವು ನಾವೇ ಆಗ್ತೀವಲ್ಲೋ"

"ಯಾಕೆ ಭಯಾನೇನಮ್ಮ? ಪಕ್ಕದ ಮನೆಯೋರಿಗೆ ಒಂದ್ಮಾತು ಹೇಳಿ ಬರ್ತೀನಿ."

"ಏನೂ ಬೇಡ ಮನೇಲಿ ಗಂಡು ದಿಕ್ಕಿಲ್ಲ. ಬೆಳೆದ ಹೆಣ್ಣು ಮಕ್ಕಳು. ನಾನು ಒಬ್ಬಳೇ ಆಗಿದ್ದಿದ್ದರೆ ನನಗೆ ಚಿಂತೆ ಇರಲಿಲ್ಲ."

"ಒಂದೇ ರಾತ್ರಿ.... ನಾಳೆ ರಾತ್ರಿಯ ಹೊತ್ತಿಗೆ ವಾಪಸ್ಸು ಬಂದುಬಿಡ್ತೀವಿ."

"ಏನೋಪ್ಪ. ನಿನ್ನ ಧೈರ್ಯ. ನಿನ್ನ ಹೆಣ್ಣು ಮಕ್ಕಳಿಗೆ ಸರಿಯಾಗಿ ಹೇಳ್ಬಿಟ್ಟು ಹೋಗಿ."

"ನನ್ನ ಮಕ್ಕಳು ತಿಳುವಳಿಕಸ್ಥರು. ಅವರಿಗೆ ಏನನ್ನು ಹೇಳಬೇಕಾಗಿಲ್ಲ..." ಕೇಶವ ಮೆಚ್ಚುಗೆಯಿಂದ ಮಕ್ಕಳ ಕಡೆ ನೋಡಿದ. ಮಂದಾರ ಓಡಿ ಬಂದು ಅಪ್ಪನನ್ನು ತಬ್ಬಿಕೊಂಡಳು.... ರಾಧಾ ಮಗಳನ್ನು ತನ್ನೆಡೆಗೆ ಎಳೆದುಕೊಂಡು ಮುದ್ದಿಸಿದಳು.

"ನಿಮಗೆಲ್ಲಾ ಬೆಂಗಳೂರಿನಿಂದ ಏನಾದ್ರೂ ತಂದುಕೊಡ್ತೀನಿ. ಜಾಣರಂತೆ ಇರಬೇಕು. ಅಜ್ಜೀನ ಸತಾಯಿಸಬಾರದು." ಯಾರೂ ಮಾತಾಡಲಿಲ್ಲ. ರಾಧಾಳಿಗೆ ಪಿಚ್ಚೆನ್ನಿಸಿತು. ತನ್ನಿಂದ ಏನಾದರೂ ಅಪಚಾರವಾಗುತ್ತಿದೆಯೆ? ಎಂದು ಚಿಂತಿಸಿ ಗಂಡನ ಕಡೆ ನೋಡಿದಳು. ಅವನೂ ಆಲೋಚನೆಯಲ್ಲಿರುವಂತೆ ಅನ್ನಿಸಿತ್ತು.

ಕೇಶವ ಒಬ್ಬ ಲಾಯರನ್ನು ಕಂಡು ದತ್ತು ಸ್ವೀಕಾರದ ಬಗ್ಗೆ ಮಾಹಿತಿಗಳನ್ನು ಸಂಗ್ರಹಿಸಿದ್ದ. ಹದಿನೆಂಟು ವರ್ಷ ತುಂಬಿದ ಮೇಲೆ ಕಾನೂನಿನಲ್ಲಿ ಅವಕಾಶವಿಲ್ಲ ಅಂತ ತಿಳಿದುದನ್ನು ಅವಳಿಗೆ ಹೇಳಿದ್ದ. ಸೋದರಮಾವನನ್ನು ನೋಡಿಬರಲೆಂದು ರಾಜ ಹೋಗಿಬರುವ ಮೊದಲೇ, ತಾನೇ ನಂಜುಂಡಸ್ವಾಮಿಯೊಡನೆ ಮಾತನಾಡಿ ತನ್ನ ಇಚ್ಛೆಯನ್ನು ತಿಳಿಸಿ, ಅದಕ್ಕೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ಸಿದ್ಧವಾಗಿಡಬೇಕೆಂದು ತಿಳಿಸಿದ್ದ. ಹಾಗೇ ರಾಜನಿಗೆ ಯಾವ ವಿಷಯವನ್ನು ತಿಳಿಸಬಾರದೆಂದು ಹೇಳಿದ್ದ.

ರಾಜ ಊರಿಗೆ ಹೋಗಿ ಎರಡು ದಿನಗಳು ಕಳೆದಿದ್ದವು. ನಂಜುಂಡಸ್ವಾಮಿ ಹೆಂಡತಿಯೊಡನೆ ಬರಬೇಕೆಂದು ಫೋನಿನಲ್ಲಿ ತಿಳಿಸಿದ್ದ. ಇದ್ದಕ್ಕಿದ್ದಂತೆ ಆತುರಾತುರವಾಗಿ ತಾನೂ ಅವನೊಡನೆ ಹೊರಡಬೇಕೆಂದಾಗ, ಅವಳಿಗೆ ಆತಂಕವೇ ಆಗಿತ್ತು. ಆದರೆ ಯಾವುದಕ್ಕೂ ಸಮಯವಿರಲಿಲ್ಲ.

"ಈಗ ಹೋಗಿ, ಕಾನೂನಿನ ಪ್ರಕಾರ ದತ್ತು ಸ್ವೀಕಾರ ಮಾಡಿಬಿಡೋಣ. ನಿಧಾನವಾಗಿ ಮಕ್ಕಳಿಗೆ ತಿಳಿಸಿದರಾಯ್ತು. ಈಗ ಯೋಚಿಸಲು ಬಾಕಿ ಏನೂ ಉಳಿದಿಲ್ಲ ಎಂದು ಲವಳಿಗೆ ಸಮಾದಾನ ಹೇಳಿದ್ದ.

"ನಿಮ್ಮ ಅಣ್ಣನಿಗೆ ಈ ಬಗ್ಗೆ ತಿಳಿಸಲ್ವಾ?" ರಾಧಾ ಕೇಳಿದ್ದಳು.

"ನಂಜುಂಡಸ್ವಾಮಿ ಮಾತ್ನಾಡಿದಾರಂತೆ. ಅಣ್ಣ ಸಂತೋಷದಿಂದ ಒಪ್ಪಿಕೊಂಡಿದ್ದಾನಂತೆ. ಅವನಿಗೆ ಬೇಕಾಗಿದ್ದುದು ಅದೇ."

"ಅತ್ತೆಗೆ ತಿಳಿಸಬೇಡವೇ.?"

"ತಿಳಿಸಿದರಾಯ್ತು... ಈಗ್ಲೇ ತಿಳಿಸಿದ್ರೆ ಎಲ್ರಿಗೂ ಹೇಳ್ಕೊಂಡು ಬರ್ತಾಳೆ." ಕಿರುನಗೆ ನಗುತ್ತಾ ನುಡಿದಿದ್ದ.

ರೈಲ್ವೇ ಸ್ಟೇಷನ್‌ನಿಂದ ಸೀದಾ ನಂಜುಂಡಸ್ವಾಮಿಯ ಮನೆಗೆ ಬಂದರು. ರಾಜನಿಗೆ ಅವರಿಬ್ಬರನ್ನು ಕಂಡು ಕಸಿವಿಸಿ ಯಾಕೆ ಬಂದಿರಬಹುದು? ತನ್ನ ಮೇಲೆ ಏನಾದರೂ ಆಕ್ಷೇಪಣೆ ಇರಬಹುದೆ? ಅದನ್ನು ಮಾವನಿಗೆ ಹೇಳಲು ಬಂದಿರಬಹುದೆ? ಹಾಗೇನಾದ್ರೂ ಇದ್ದು, ತನಗೆ ಅವರ ಮನೆಯಲ್ಲಿರಲು ಅವಕಾಶ ಸಿಗದೇ ಹೋದರೇ... ತನ್ನ ವಿದ್ಯಾಭ್ಯಾಸಕ್ಕೆ ಅಡಚಣೆ ಬಂದರೆ?.... ಈ ಮಾವ ಬೇರೆ ಆತಂಕದ ಮುಳ್ಳಿನ ಮೇಲೆ ನಿಲ್ಲಿಸಿದ್ದಾನೆ... ತನಗೆ ಏನೋ ರಹಸ್ಯ ಹೇಳುವುದಿದೆ ಅಂತ ಹೇಳಿ, ತನ್ನ ತಲೆಯನ್ನು ಕೆಡೆಸಿದ್ದಾನೆ. ಈಗ ನೋಡಿದರೆ ಇದ್ದಕ್ಕಿದ್ದಂತೆ ಇವರಿಬ್ಬರೂ ಯಾಕೆ ಬಂದಿದ್ದಾರೆ?... ರಾಧಾ ಅವನ ಆತಂಕವನ್ನು ಗಮನಿಸಿದಳು. ಮುಗುಳ್ನಕ್ಕು ಕೇಳಿದಳು.

"ಏನೋ ರಾಜಾ.... ಯಾಕೆ ಹಾಗೆ ಬೆರಗಾಗಿ ನೋಡ್ತಿದೀಯಾ?"

"ಏನಿಲ್ಲ... ಅಜ್ಜಿ ಬಗ್ಗೆ ಯೋಚಿಸ್ತಿದ್ದೆ."

"ಅಜ್ಜೀನೂ ನಿನ್ನ ಬಗ್ಗೇನೇ ಯೋಚಿಸ್ತಾರೆ. ಜತೇಲಿ ಕರ್ಕೊಂಡು ಬಾ ಅಂತ ಹೇಳಿದಾರೆ."

"ಹೌದಾ?.... ನಿಜವಾಗಿಯೂ?"

"ಹುಂ. ಈಗ ನಿನ್ನ ಅಭ್ಯಾಸ ಅವರಿಗೆ ಅತಿಯಾಗಿದೆ..." ಯಾವಾಗ ಬರ್ತಿದೀಯಾ?" ರಾಜ ಸಮಾಧಾನದ ಉಸಿರನ್ನು ಬಿಟ್ಟ. ಅವನ ಮನಸ್ಸು ನಿರಾಳವಾಗಿತ್ತು.

ಎಲ್ಲರ ಸ್ನಾನ ಮುಗಿದಿತ್ತು, ತಿಂಡಿ ಕಾಫಿಯ ನಂತರ, ನಂಜುಂಡಸ್ವಾಮಿ ರಾಜನನ್ನು ಹೊರಡಿಸಿದ.

"ಸ್ವಾಮಿಗಳೇ ರಾಜಂಗೆ ವಿಷಯ ತಿಳಿಸಿದೀರಾ?" ಕೇಶವ ಕೇಳಿದ.

"ಇನ್ನೂ ಇಲ್ಲ. ನೀವು ಬರಲಿ ಅಂತ ಕಾಯ್ತಿದ್ದೆ. ಸಬ್ ರಿಜಿಸ್ಟ್ರಾರರ ಎದುರಿನಲ್ಲೇ ಕೇಳಿದರಾಯ್ತು."

"ಮುಂಚಿತವಾಗಿ ನೀವು ತಿಳಿಸಬೇಕಾಗಿತ್ತು."

"ಏನಂದುಬಿಡ್ತಾನೋ ಅಂತ ನಂಗೂ ಗಾಬರಿಯೇ. ಅಲ್ಲಿ ಆಫೀಸಿನಲ್ಲಿ ಎಲ್ಲರ ಎದುರಿಗೆ ಹೂಂ ಅನ್ನಿಸಿಬಿಡೋದು ಅಷ್ಟೆ."

"ಅದು ನ್ಯಾಯ ಅಲ್ಲ. ಪೇಚಿಗೆ ಸಿಕ್ಕಿ ಹಾಕಿಸಿದಂತಾಗುತ್ತೆ."

"ಏನೂ ಆಗುಲ್ಲ ಕೇಶವಾ.... ರಾಜನ ವಿಷಯ ಎಲ್ಲರಿಗಿಂತ ಚೆನ್ನಾಗಿ ನಂಗೆ ಗೊತ್ತು."

"ಇಲ್ಲ ಸ್ವಾಮಿ... ಅಲ್ಲಿ ಮುಜುಗರವಾಗೋದು ಬೇಡ. ನಾನು ಈಗಲೇ ಮಾತನಾಡಿ ಅವನ ನಿರ್ಧಾರವನ್ನೂ ತಿಳಿದುಕೊಂಡೇ ಮುಂದುವರೀತೀನಿ."

ಕೇಶವ, ರಾಜನನ್ನು ಮುಂದಿನ ರೂಮಿಗೆ ಕರೆದುಕೊಂಡು ಹೋಗಿ ರೂಮಿನ ಬಾಗಿಲನ್ನು ಹಾಕಿಕೊಂಡ.

"ರಾಜಾ. ನಾನು ಇದ್ದಕ್ಕಿದ್ದ ಹಾಗೆ ಇಲ್ಯಾಕೆ ಬಂದಿದೀನಿ ಅಂತ ನಿಂಗೆ ಆಶ್ಚರ್ಯವಾಗಿರಬಹುದು ಅಲ್ವಾ?"

"ಹೌದು ಅಂಕಲ್.... ನನ್ನಿಂದ ಏನಾದ್ರೂ ತಪ್ಪಾಗಿದೆಯಾ? ಹಾಗೇನಾದ್ರೂ ಇದ್ದರೆ ದಯವಿಟ್ಟು ಮಾವಂಗೆ ಮಾತ್ರ ಹೇಳ್ಬೇಡಿ ರಾಜ ಕೈಮುಗಿದ.

"ಛೆ.... ನಿನ್ನಿಂದ ಯಾವ ತಪ್ಪೂ ಆಗಿಲ್ಲ... ಮತ್ತೇ.... ನಿನ್ನಿಂದ ನಮಗೆ ಒಂದು ಉಪಕಾರವಾಗಬೇಕಾಗಿತ್ತು."

"ಏನು ಹೇಳಿ... ನಾನು ಶಿರಸಾವಹಿಸಿ ನಡೆಸಿಕೊಡ್ತೀನಿ."

"ನಾನು ಏನು ಕೇಳ್ತೀನಿ ಅಂತ ನಿಂಗೆ ಗೊತ್ತಿಲ್ಲ ರಾಜ. ನಿನಗೆ ಕಸಿವಿಸಿ ಆಗಬಹುದು. ಆದರೆ ನಿನಗೆ ಒಪ್ಪಿಗೆ ಇದ್ದರೆ ಮಾತ್ರ. ಇಲ್ಲದಿದ್ದರೆ ಬಲವಂತ ಮಾಡುವುದಿಲ್ಲ."

"ಛೆ... ಹಾಗೆಲ್ಲಾ ಏನಿಲ್ಲ ಅಂಕಲ್. ನೀವು ಹೇಳಿದ್ದನ್ನು ಖಂಡಿತಾ ನಡೆಸಿಕೊಡ್ತೀನಿ.... ನೀವು ನನಗೆ ತಂದೆ ಇದ್ದ ಹಾಗೆ ನಿಮ್ಮ ಮಾತನ್ನು ತೆಗೆದುಹಾಕುವ ಮಾತೇ ಇಲ್ಲ."

"ನನಗೆ ತುಂಬಾ ಗೌರವವನ್ನು ಕೊಡ್ತಿದೀಯ ರಾಜ. ನಾನು ನಿನಗೆ ತಂದೆಯ ಸಮಾನ. ಸ್ವಂತ ತಂದೆ ಅಲ್ಲವಲ್ಲ."

"ಸ್ವಂತ ತಂದೆ ನನಗೆ ಏನನ್ನೂ ಮಾಡಿಲ್ಲ. ಅವರನ್ನು ನೋಡಿದ ನೆನಪು ಇಲ್ಲ. ಮಾವ ನನ್ನನ್ನೂ ಸಾಕಿ ಬೆಳೆಸಿದರೂ, ತಂದೆಯ ಪ್ರೀತಿಯನ್ನೂ ತೋರಿಸಲಿಲ್ಲ. ಹಾಗಂತ ನನಗೆ ಅವರ ಮೇಲೆ ಬೇಸರವಿಲ್ಲ. ಅವರನ್ನೂ ಯಾವಾಗಲೂ ಗೌರವಿಸ್ತೀನಿ. ಆದರೆ ನಿಮ್ಮ ಬಗ್ಗೆ ನನಗೆ ವಿಶೇಷ ಗೌರವ..."

ನೀನೇನು ವಿಶೇಷವಾಗಿ ಗೌರವಿಸುವುದು ಬೇಡ. ತಂದೆಯಂತೆ ಎಂಬ ಅಭಿಮಾನ ಇಟ್ಕೊಂಡ್ರೆ ಸಾಕು."

"ಅದೂ ಸದಾ ಕಾಲಕ್ಕೂ ಇರುತ್ತೆ ಅಂಕಲ್. ನಾನು ನನ್ನ ಕೋರ್ಸ್‌ನ್ನು ಮುಗಿಸಿ, ಎಲ್ಲೇ ಕೆಲಸಕ್ಕೆ ಸೇರಿಕೊಂಡರೂ, ನಿಮ್ಮಗಳನ್ನು ಮರೆಯುವುದಿಲ್ಲ. ನೀವು ಆಂಟಿ, ಅಜ್ಜಿ... ಎಲ್ಲರೂ ನನಗೆ ಆಪ್ತರೇ."

"ಹೌದು, ನಾವು ಪರಸ್ಪರ ಆಪ್ತರಾಗಿರಬೇಕು. ಅದೇ ನಮ್ಮೆಲ್ಲರ ಆಸೆ. ಇದು ನಿರಂತರವಾಗಿರಬೇಕು.ಅದಕ್ಕೆ" ಕೇಶವ ಮಾತನ್ನು ನಿಲ್ಲಿಸಿದ.

ರಾಜ ಆತಂಕದಿಂದ ಕೇಶವನ ಕಡೆ ನೋಡಿದ. ಮನಸ್ಸು ತಳಮಳಗೊಂಡಿತು. ಕೇಶವನ ಕಾಲಿಗೆ ಬಿದ್ದ. "ನನಗೆ ಕೆಲಸ ಸಿಕ್ಕಕೂಡಲೇ, ನೀವು ನನಗಾಗಿ ಖರ್ಚು ಮಾಡಿರುವ ಹಣವನ್ನು ಬಡ್ಡಿಯ ಸಮೇತ ತೀರಿಸ್ತೀನಿ... ನನ್ನ ವಿದ್ಯಾಭ್ಯಾಸ ಮಾತ್ರ ನಿಲ್ಲಿಸಬೇಡಿ..."

"ಕೆನ್ನೆಗೆ ಹಾಕ್ತೀನಿ ನೋಡು. ಏನೇನೋ ಮಾತಾಡ್ಬೇಡ. ಏಳು... ನನಗೆ ಒಬ್ಬ ಸ್ವಂತ ಮಗ ಇದ್ದಿದ್ರೆ ನಾನು ಓದಿಸುತ್ತಿರಲಿಲ್ವಾ? ಹಾಗೆ, ನೀನು ನನಗೆ ಮಗನಾಗಿರಬೇಕು. ನಮ್ಮ ಅಮ್ಮನಿಗೆ ಮೊಮ್ಮಗನಾಗಿರಬೇಕು. ಹಣದ ಮಾತುಕತೆಗಳು ಸುಳಿಯಬಾರದು."

"ಆದರೆ.... ನನಗೋಸ್ಕರ..."

"ಹೌದು. ನಿನಗೋಸ್ಕರವೇ.... ನೀನು ನಮ್ಮ ಸ್ವಂತ ಮಗನಾಗಬೇಕು. ನಾನು ನಿನ್ನನ್ನು ದತ್ತುಪುತ್ರನನ್ನಾಗಿ ಸ್ವೀಕರಿಸುತ್ತೇನೆ. ನಿನಗೆ ಒಪ್ಪಿಗೆ ಇದ್ದರೆ ಮಾತ್ರ..."

"ಏನು ಹೇಳ್ತಿದೀರಿ ಅಂಕಲ್.... ನಿಮಗೆ ನಾನು ಮಗ? ನಿಮಗೆ ಈಗಾಗ್ಲೇ ಮೂರು ಜನ ಮಕ್ಕಳಿದಾರಲ್ಲ."

"ಅವರೆಲ್ಲಾ ನಿನ್ನ ತಂಗಿಯರು. ಮುಂದೆ ಮದುವೆಯಾಗಿ ಅವರವರ ಮನೆಗೆ ಹೋಗುವವರು. ನಮಗಾಗಿ ನಮ್ಮ ಮನೆಯಲ್ಲಿ ಇರಲು ಒಬ್ಬ ಮಗ ಬೇಕು. ನೀನು ನಮ್ಮೊಂದಿಗೆ ಇರಬೇಕು. ಅದು ನಮ್ಮೆಲ್ಲರ ಆಸೆ..."

"ಇದೇನು ಅಂಕಲ್.... ಏನೇನೋ ಹೇಳ್ತಿದೀರಿ. ನಂಗೆ ಗೊಂದಲವಾಗ್ತಿದೆ. ನಾನು, ನಿಮ್ಮ ಮಗ...! ಅಷ್ಟು ಅರ್ಹತೆ ನನಗಿದೆಯಾ?"

"ಅರ್ಹತೆ, ಯೋಗ್ಯತೆ ಎಲ್ಲಾ ನಿನಗಿದೆ. ನಿನ್ನ ಮಾವ ನಿನಗೆ ಈ ಮೊದಲೇ ಹೇಳಿರಬೇಕಾಗಿತ್ತು. ಯಾಕೋ ಸುಮ್ಮನಾಗಿದಾರೆ. ಈಗ ನಿರ್ಧಾರ ನಿನ್ನ ಕೈಲಿದೆ..."

"ಈಗ ನಾನಿನ್ನು ಮೈನರ್. ಸ್ವಂತವಾಗಿ ನಿರ್ಧರಿಸುವ ಹಕ್ಕು ನನಗಿದೆಯೋ ಇಲ್ಲವೋ ತಿಳಿಯದು. ಮಾವ ಏನಂತಾರೋ... ಅವರ್ಯಾಕೆ ನನಗೆ ಈ ವಿಷಯವನ್ನು ತಿಳಿಸಲಿಲ್ಲವೋ?" ರಾಜ ಪೇಚಾಡಿದ.

"ನಿನ್ನ ಬಗ್ಗೆ ನಿರ್ಧರಿಸುವ ಹಕ್ಕು ನಿನ್ನ ಮಾವನಿಗಿಲ್ಲದಿರಬಹುದು. ಅಥವಾ ಅಳುಕು ಇರಬಹುದು. ಇನ್ನು ಕೆಲವೇ ದಿನಗಳಲ್ಲಿ ನಿನಗೆ ಹದಿನೆಂಟು ವರ್ಷಗಳು ತುಂಬಿ, ನೀನು ಮೆಜಾರಿಟಿಗೆ ಬರ್ತೀಯ. ಆಗ ಕಾನೂನಿನ ರೀತ್ಯಾ, ನಾನು ದತ್ತು ತೆಗೆದುಕೊಳ್ಳುವುದು ಸಾಧ್ಯವಾಗುವುದಿಲ್ಲ. ಆದರೆ ಹೀಗೇ ಮುಂದುವರೆಯಲು ಸಾಧ್ಯವಾಗದೇ ಹೋಗಬಹುದು. ಈಗ ನಮಗೆ, ನಿನಗೆ ಒಂದು ಅವಕಾಶ. ನಮ್ಮಿಬ್ಬರಿಗೆ ಮಗನಾಗಿ, ನನ್ನ ಹೆಣ್ಣು ಮಕ್ಕಳಿಗೆ ಹಿರಿಯ ಅಣ್ಣನಾಗಿ, ನನ್ನ ತಾಯಿಗೆ ಪ್ರೀತಿಯ ಮೊಮ್ಮಗನಾಗಿ ನೀನು ಸದಾಕಾಲ ನಮ್ಮ ಮನೆಯಲ್ಲಿರಬೇಕು. ಇದು ನಿನಗೆ ಒಪ್ಪಿಗೆಯಾದರೆ ಈಗ ಮಾತ್ರ ಅವಕಾಶ... ಯೋಚಿಸಲು ನಿನಗೆ ಹೆಚ್ಚು ಸಮಯವಿಲ್ಲ. ಆದರೂ ನಿನಗೆ ಸಮಯವನ್ನೂ ಕೊಡುತ್ತೇನೆ. ನಿನಗೆ ಒಪ್ಪಿಗೆ ಇದ್ದರೆ, ಇಂದೇ ಸಬ್ ರಿಜಿಸ್ಟ್ರಾರರ ಆಫೀಸಿಗೆ ಹೋಗಿ ಮಾತನಾಡೋಣ. ಅಲ್ಲಿ ನಮ್ಮ ಲಾಯರ್ರೂ ಇರ್ತಾರೆ." ರಾಜ ಬೆಪ್ಪನಂತೆ ನಿಂತೇ ಇದ್ದ. ಕೇಶವ ರೂಮಿನಿಂದ ಹೊರಬಂದು, ಬಾಗಿಲನ್ನು ಎಳೆದುಕೊಂಡ. ರಾಧಾ ಅವನನ್ನೇ ಪ್ರಶ್ನಾರ್ಥಕವಾಗಿ ನೋಡಿದಳು. ಅಡಿಗೆ ಮನೆಯಿಂದ ಹೊರಬಂದ ನಂಜುಂಡಸ್ವಾಮಿ, ಕೇಶವನನ್ನೇ ಅನುಮಾನವಾಗಿ ನೋಡಿ, ರೂಮಿನ ಬಾಗಿಲ ಬಳಿ ಬಂದು ನಿಂತ. ಆತಂಕದಿಂದ ಅವನ ಎದೆ ಹೊಡೆದುಕೊಳ್ಳುತ್ತಿತ್ತು. ರಾಜ ಹತ್ತು ಹದಿನೈದು ನಿಮಿಷಗಳಾದರೂ ಹೊರಬರದಿದ್ದಾಗ ಬಾಗಿಲನ್ನು ತಳ್ಳಿದ. ಕೇಶವನೂ ಗಾಬರಿಯಿಂದ ಅಲ್ಲಿ ಬಂದ. ಇಬ್ಬರೂ ರೂಮಿನೊಳಕ್ಕೆ ಬಂದರು. ರಾಜ ಕಿಟಕಿಯಿಂದಾಚೆ ಹೊರನೋಡುತ್ತಿದ್ದ. "ರಾಜಾ".... ನಂಜುಂಡಸ್ವಾಮಿ ಕರೆದ. ಹಿಂತಿರುಗಿ ನೋಡಿ ರಾಜ ತಲೆತಗ್ಗಿಸಿ ನೋಡಿದ.

"ಆಯ್ತು ಅಂಕಲ್.... ನಿಮ್ಮನ್ನು ಸ್ವಂತ ತಂದೆಯನ್ನಾಗಿ ಒಪ್ಪಿಕೊಂಡಿದೇನೆ. ಆದರೆ ಒಂದ್ಮಾತು ಮಾವ.... ನನ್ನದೊಂದು ಕೋರಿಕೆ.... ನೀವುಗಳು ನನ್ನಿಂದ ಏನನ್ನೋ ಮುಚ್ಚಿಡ್ತಾ ಇದೀರಿ ಅನ್ನೋ ಅನುಮಾನ ನನಗೆ ಬಂದಿದೆ. ಅದೇನು ಅಂತ ನನಗೆ ಈಗಲೇ ತಿಳಿಯಬೇಕು. ಮನದ ಸಂದೇಹಗಳು ದೂರವಾಗಬೇಕು."

"ನಿನ್ನಿಂದ ಏನನ್ನೂ ಮುಚ್ಚಿಟ್ಟಿಲ್ಲ ರಾಜ. ನನ್ನ ಮಾತನ್ನು ನಂಬು."

"ಇಲ್ಲ ಮಾವ ನನಗೆ ನಿಮ್ಮ ಮೇಲೆ ನಂಬಿಕೆ ಕಡಿಮೆ ಆಗ್ತಿದೆ. ನನ್ನನ್ನು ಸಾಕಿ ಬೆಳೆಸಿ ದೊಡ್ಡವನನ್ನಾಗಿ ಮಾಡಿದೀರಿ... ಆದರೆ ಈಗ ಇವರಿಗೆ ನನ್ನನ್ನು ಸುಲಭವಾಗಿ ವಹಿಸಿಕೊಡ್ತಿದೀರಿ. ಯಾಕೆ ಅಂತ? ಇಷ್ಟೇನಾ ನಿಮ್ಮ ವ್ಯಾಮೋಹ?"

"ಹಾಗೆಲ್ಲಾ ಮಾತಾಡಬಾರ್ದು ರಾಜ. ನಿಮ್ಮ ಮಾವನಿಗೆ ಯಾವ ಸ್ವಾರ್ಥವಿಲ್ಲ. ಈ ಸ್ವಾರ್ಥ ನನ್ನದು. ಆದರೆ ಬಲವಂತ ಏನಿಲ್ಲ ಅಂತ ಆಗಲೇ ಹೇಳಿದ್ನಲ್ಲ..."

"ಇದರಲ್ಲಿ ಯಾರ ಸ್ವಾರ್ಥ ಹೆಚ್ಚು ಅಂತ ನನಗೆ ಗೊತ್ತಾಗಲಿಲ್ಲ. ಆದರೆ ನಾನೊಬ್ಬ ಅನಾಥ.... ನನಗೆ ಇಲ್ಲಿ ಸ್ವಂತದವರು ಅನ್ನೋರು ಯಾರೂ ಇಲ್ಲ ಅಂತ ಮಾತ್ರ ಅರ್ಥವಾಯಿತು. ತಂದೆತಾಯಿಗಳು ತಬ್ಬಲಿಯನ್ನಾಗಿ ಮಾಡಿ ಈ ಪ್ರಪಂಚಕ್ಕೆ ಬಿಟ್ಟುಹೋದರು. ಮಾವನೂ ನನ್ನ ಕೈಬಿಟ್ಟರು. ನೀವು ಮಾತ್ರ ನನ್ನ ಕೈ ಬಿಡಬೇಡಿ ಅಂಕಲ್.... ನೀವು ಪ್ರಾಮಾಣಿಕವಾಗಿರ್ತೀರಿ ಅಂತ ನಂಬಿದೀನಿ."

"ಛೆ. ಹೀಗೆಲ್ಲಾ ಮಾತಾಡ್ಬಾರ್ದು ರಾಜ.... ನಿಮ್ಮ ಮಾವ ಅವರ ಕರ್ತವ್ಯವನ್ನು ಪಾಲಿಸಿದ್ದಾರೆ. ಈಗ ನನ್ನ ಸರದಿ."

"ಅಂದರೇ..."

"ನಾನು ನಿನ್ನ ಚಿಕ್ಕಪ್ಪ ಕಣೋ.... ನಿನ್ನ ಸ್ವಂತ ಚಿಕ್ಕಪ್ಪ" ರಾಜನ ಕೈಗಳನ್ನು ಹಿಡಿದ. ರಾಜ ನಂಬದವನಂತೆ ಮಾವನ ಕಡೆ ನೋಡಿದ. ಅವನು ಹೌದು ಎಂಬಂತೆ ತಲೆಯಾಡಿಸಿದ. ರಾಜ ಗೋಡೆಗೆ ಬೆನ್ನು ತಗುಲಿಸಿ ನಿಂತ.

"ಮಾವ ಇನ್ನೂ ಏನೇನು ವಿಷಯಗಳಿವೆ. ಎಲ್ಲಾ ಹೇಳಿಬಿಡಿ. ಈ ವಿಷಯಗಳನ್ನೆಲ್ಲ ನನ್ನಿಂದ ಯಾಕೆ ಮರೆ ಮಾಡಿದಿರಿ?"

"ಕಾಲ ಬಂದಾಗ ಎಲ್ಲವನ್ನೂ ತಿಳಿಸುವುದು ಅಂತ ಅಂದ್ಕೊಂಡಿದ್ದೆ. ಇನ್ನು ಎಂಟು ದಿನಗಳಿಗೆ ನಿನಗೆ ಹದಿನೆಂಟು ವರ್ಷಗಳು ತುಂಬುತ್ತೆ. ನೀನು ಮೆಜಾರಿಟಿಗೆ ಬರ್ತೀಯ. ಆಗ ಎಲ್ಲವನ್ನೂ ತಿಳಿಸೋಣ ಅಂತಂದುಕೊಂಡಿದ್ದೆ.

"ಆಯ್ತು ರಾಜ. ನಿನ್ನ ಚಿಕ್ಕಪ್ಪ ಸ್ವಾರ್ಥಿಯಾಗಿಬಿಟ್ಟ.... ನೀನು ನನ್ನ ಅಣ್ಣನ ಮಗನೆಂದು ನನಗೆ ತಿಳಿದದ್ದೇ ಇತ್ತೀಚೆಗೆ..... ನಾನು ನಿನ್ನನ್ನು ದತ್ತು ತೆಗೆದುಕೊಂಡರೂ ತೆಗೆದುಕೊಳ್ಳದಿದ್ದರೂ ನೀನು ನಮ್ಮ ಮನೆಯವನು. ನಿನಗೆ ಹಕ್ಕು, ಅಧಿಕಾರ, ಪಾಲು ಎಲ್ಲವೂ ಇದೆ. ಆದರೆ ನಿನ್ನನ್ನು ಅಣ್ಣನ ಮಗನೆಂದು

ಗುರುತಿಸುವುದಕ್ಕಿಂತ, ನನ್ನ ಮಗನೆಂದು ಗುರುತಿಸಿಕೊಳ್ಳಬೇಕೆಂದು ಮನಸ್ಸಾಯಿತು. ಅದಕ್ಕೋಸ್ಕರ ದತ್ತು ಸ್ವೀಕಾರದ ಪ್ರಸ್ತಾಪ ಮಾಡಿದೆ. ಇಲ್ಲದಿದ್ದರೂ ನೀನು ಮೆಜಾರಿಟಿಗೆ ಬಂದಮೇಲೆ, ನೀನು ನಮ್ಮ ಮನೆಗೆ ಬರಲೇಬೇಕಾಗಿತ್ತು. ಇದು ನಿನ್ನ ತಂದೆಯ ಕೊನೆಯ ಆಸೆ ಆಗಿತ್ತು. ಆ ವಿಷಯವನ್ನೇ ನಿನ್ನ ಮಾವ ನಿನಗೆ ಹೇಳುವವರಿದ್ದರು.

"ಅಜ್ಜಿಗೆ ನಾನ್ಯಾರು ಅಂತ ಗೊತ್ತಾ?"

"ಹುಂ. ಗೊತ್ತಿದೆ."

"ಹಾಗಾದ್ರೆ ಅವರೇಕೆ ನನಗೆ ನಿಜ ಹೇಳಲಿಲ್ಲ?"

"ಅದನ್ನೆಲ್ಲಾ ಇನ್ನೆಂದಾದ್ರೂ ಮಾತ್ನಾಡೋಣ. ಈಗ ಆಫೀಸಿಗೆ ಹೊತ್ತಾಗುತ್ತೆ.... ಏನು ನಿಶ್ಚಯ ಮಾಡಿದೆ?" ನಂಜುಂಡಸ್ವಾಮಿ ಕೇಳಿದ.

"ಅಪ್ಪ ಆ ಮನೆಯಲ್ಲಿರಲಿಲ್ಲ. ನಾನೂ ಆ ಮನೆಯಲ್ಲಿರಲಿಲ್ಲ. ನನಗೆ ಯಾವ ಪಾಲೂ ಬೇಕಾಗಿಲ್ಲ."

"ಹಾಗೆ ಹೇಳಿದ್ರೆ ಹೇಗೋ? ಹಾಗಾದ್ರೆ ನಿಮ್ಮ ಅಪ್ಪನ ಕೊನೆಯ ಆಸೆಗೆ ಬೆಲೆ ಇಲ್ವಾ?"

"ನಿಮ್ಮ ಮಾತನ್ನೂ ನಾನು ಹೇಗೆ ನಂಬಲಿ? ಅಪ್ಪ ಅಮ್ಮನ ಬಗ್ಗೆ ನೀವೆಂದೂ ನನಗೆ ಹೇಳಿಲ್ಲ. ಅವರ ಆಸೆ ಏನು? ಕೊನೆಯ ಆಸೆ ಯಾವುದು ಅಂತ ನನಗೆ ಹೇಗೆ ಗೊತ್ತಾಗ್ಬೇಕು?"

"ನಿಮ್ಮಪ್ಪ ವಿಲ್ ಬರೆಸಿದಾರೆ. ಅದು ಲಾಯರ್ರ ಬಳಿ ಇದೆ. ನಿನ್ನ ಹುಟ್ಟುಹಬ್ಬದ ದಿನ ನಿನಗೆ ಓದಿ ಹೇಳ್ತಾರೆ."

"ನನಗೆ ಏನೂ ಗೊತ್ತಿಲ್ಲ. ನನಗೆ ಯಾವ ವಿಷಯವೂ ಬೇಡ" ರಾಜ ಕೈಗಳನ್ನು ತಲೆಗೆ ಒತ್ತಿಕೊಂಡ. ಹೊರಗೆ ನಿಂತಿದ್ದ ರಾಧಾ, ಈ ಸಂಭಾಷಣೆಗಳನ್ನು ಕೇಳಿಸಿಕೊಂಡಿದ್ದಳು. ಒಳಬಂದು ರಾಜನ ಬಳಿಗೆ ಬಂದಳು.

"ಸರಿ ರಾಜ ನಿನ್ನಿಷ್ಟ ನಿನಗೆ ಹೇಗೆ ಇಷ್ಟವೋ ಹಾಗೇ ಮಾಡು. ನೀನ್ಯಾರೂ ಎಂದು ತಿಳಿಯುವ ಮೊದಲೇ, ನಾನು ನಿನ್ನನ್ನು ನನ್ನ ಮಗನಾಗಿ ಬಂದಿದೀಯ ಅಂತ ಭಾವಿಸಿದೆ. ನಿನ್ನ ತಾಯಿಯಾಗುವ ಇಚ್ಛೆಯನ್ನು ನಾನೇ ತೋರಿದವಳು. ನನಗೆ ಗಂಡು ಮಕ್ಕಳಾಗಿಲ್ಲ ಅನ್ನೋ ಕೊರಗು ನಿನ್ನ ಅಜ್ಜಿಗೆ

ಇತ್ತು. ನಿನ್ನನ್ನು ಮಗನನ್ನಾಗಿ ಸ್ವೀಕರಿಸಿ ಅಜ್ಜಿಗೆ ಒಬ್ಬ ಮೊಮ್ಮಗನ್ನ ಕೊಡಬೇಕು ಅಂತ ಬಯಸಿದವಳು ನಾನು. ಇದು ತಪ್ಪಲ್ಲ ಅಲ್ವಾ?"

"ಅಮ್ಮಾ ನೀವಾದ್ರೂ ನಿಜ ಏನು ಅಂತ ಹೇಳಬಹುದಾಗಿತ್ತು ಅಲ್ವಾ?"

"ನೀನು ಇನ್ನೂ ಚಿಕ್ಕವನು. ನಿನ್ನ ಮನಸ್ಸು ಕೆಟ್ಟುಹೋಗುತ್ತೆ ಅಂತ ಹೇಳಲಿಲ್ಲ ರಾಜಾ.... ಯಾವ ತಾಯಿಗೂ ಇದು ಸಲ್ಲದ ಮಾತು.." ರಾಧಾ ರಾಜನ ತಲೆಯನ್ನು ಸವರಿದಳು.

"ಅಮ್ಮಾ ನಿಮ್ಮ ಬಗ್ಗೆ ನನಗೆ ತುಂಬಾ ಗೌರವವಿದೆ. ನನಗೆ ನಿಮ್ಮ ಮಾತನ್ನು ತೆಗೆದುಹಾಕುವ ಮನಸ್ಸಿಲ್ಲ. ನಾನು ನಿಮ್ಮ ಸ್ವಂತ ಮಗನಂತೆಯೇ ಇರಲು ಪ್ರಯತ್ನಿಸುತ್ತೇನೆ. ಆದರೆ.... ನಾನು ನನ್ನ ತಂಗಿಯರಿಗೆ ಹಿತವಾಗ್ತೀನಾ ನನ್ನನ್ನ ಅಣ್ಣ ಅಂತ ಒಪ್ಕೋತಾರಾ?" ರಾಧಾ ಗಂಡನ ಕಡೆ ನೋಡಿದಳು.

"ನಿಂಗ್ಯಾಕೆ ಅನುಮಾನ ರಾಜ? ನೀನು ನಮಗೆ ಮಗನು. ಮೇಲೆ ಅವರುಗಳಿಗೆ ಅಣ್ಣನೇ. ಒಪ್ಕೋತಾರೆ. ನೀನು ಚಿಂತಿಸಬೇಡ."

"ಇಲ್ಲ ಅಂಕಲ್.... ಮೊದಲೇ ನಾನೊಬ್ಬ ಅನಾಥ. ಬಲವಂತದಿಂದ ಬೇರೊಬ್ಬರ ಪ್ರೀತಿಯನ್ನು ವಾತ್ಸಲ್ಯವನ್ನು ಹೇಗೆ ಪಡೆಯೋಕೆ ಆಗುತ್ತೆ?"

"ನಿನ್ನ ಅನುಮಾನ ಸಹಜ ರಾಜ.... ಆದರೆ ನೀನು ಪ್ರೀತಿಯಿಂದ ಎಲ್ಲರ ಮನಸ್ಸನ್ನು ಗೆಲ್ತೀಯ ಅನ್ನೋ ನಂಬಿಕೆ ನನಗಿದೆ.... ನಿನ್ನ ತಾಳ್ಮೆ ಸಹನೆ ನಿನ್ನ ಅಜ್ಜೀನ ಮೆಚ್ಚಿಸಿಲ್ವೇ... ಹಾಗೇ..."

"ಅಜ್ಜಿಗೆ ನಾನು ಸ್ವಂತ ಮೊಮ್ಮಗ. ಅವರ ರಕ್ತ ನನ್ನ ನರದೊಳಗೆ ಹರಿಯುತ್ತಿದೆ."

"ನಿನ್ನ ದೇಹದಲ್ಲಿ ಹರಿಯುತ್ತಿರುವ ರಕ್ತ ನನ್ನ ಮಕ್ಕಳ ದೇಹದಲ್ಲಿಯೂ ಹರಿಯುತ್ತಿದೆ. ಎಷ್ಟಾಗಲೀ ಅವರುಗಳು ಹೆಣ್ಣುಮಕ್ಕಳು. ಮದುವೆಯಾಗಿ ಅವರವರ ಗಂಡಂದಿರ ಮನೆಗೆ ಹೊರಟುಹೋಗ್ತಾರೆ. ನಮ್ಮೊಂದಿಗೆ ಇರುವವನು ನೀನೇ. ಆ ವಿಷಯ ಅವರಿಗೂ ಇವತ್ತಲ್ಲ ನಾಳೆ ಅರ್ಥವಾಗಿಯೇ ಆಗುತ್ತೆ" ರಾಜ ಮಾತನಾಡದೇ ಸುಮ್ಮನೆ ನಿಂತ.

"ಸರಿ ನಿನಗೆ ನಮ್ಮಗಳ ಮೇಲೆ ನಂಬಿಕೆ ಇಲ್ಲ ಅಂತ ಕಾಣಿಸುತ್ತೆ. ಇನ್ನು ನಿನ್ನಿಷ್ಟ. ನಾವು ಯಾವುದೋ ಆಸೆಯನ್ನು ಅತಿಯಾಗಿ ಇಟ್ಟುಕೊಂಡೆವು ಅಂತ ಕಾಣಿಸುತ್ತೆ. ನಿನ್ನ ಅಜ್ಜಿಗೂ ನಿರಾಸೆಯಾಗುತ್ತೆ. ಮಗನಂತೂ ಅವಳಿಂದ ದೂರವೇ ಇದ್ದ. ಮೊಮ್ಮಗನಾದರೂ ಜೊತೆಯಲ್ಲಿರಲಿ ಎನ್ನುವ ಅವಳ

ಹಂಬಲ, ಹಂಬಲವಾಗಿಯೇ ಉಳಿದುಬಿಡುತ್ತೆ ಅಷ್ಟೆ.” ಕೇಶವ ನಿಟ್ಟುಸಿರುಬಿಟ್ಟ.

“ಯಾಕೋ ರಾಜಾ... ಹೀಗೆ ಬೇಜಾರು ಮಾಡ್ತೀಯಾ? ನಿನಗೆ ನಿನ್ನ ಅಪ್ಪನ ಆಸೆಯನ್ನು ತೀರಿಸ್ಬೇಕು ಅಂತ ಅನ್ನಿಸುಲ್ವಾ?”

“ಮಾವಾ... ಅಪ್ಪನ ನೆನಪಿಲ್ಲ. ಅಪ್ಪನ ಬಗ್ಗೆ ತಿಳಿದಿಲ್ಲ. ಅವರ ಆಸೇನ ನೆರವೇರಿಸಬೇಕು ಅನ್ನೋದು ಯಾವ ನ್ಯಾಯ?...”

“ಹೌದು. ಅವರ ಆಸೆಯನ್ನು ಪೂರೈಸಬೇಕಾದದ್ದು ನಿನ್ನ ಕರ್ತವ್ಯ.”

“ಇರಲಿ ಬಿಡಿ ನಂಜುಂಡಸ್ವಾಮಿ. ಅವನೂ ಒಂಥರ ಗೊಂದಲದಲ್ಲಿದಾನೆ. ಕೆಲವು ತಿಂಗಳುಗಳ ಹಿಂದೆ, ನಮ್ಮ ಅಣ್ಣನಿಗೆ ಒಬ್ಬ ಮಗನಿದಾನೆ ಅನ್ನೋ ವಿಷಯ ಸಹ ನನಗೆ ತಿಳಿದಿರಲಿಲ್ಲ. ಸಂಬಂಧಗಳು ಅಷ್ಟು ಸುಲಭವಾಗಿ ಹೆಣೆದುಕೊಂಡುಬಿಡುವುದಿಲ್ಲ. ಹಾಗೇ ಅಷ್ಟು ಸುಲಭವಾಗಿ ಬಿಡಲೂ ಆಗುವುದಿಲ್ಲ. ಹೊತ್ತು ಹೆತ್ತು ಸಾಕಿ ಸಲಹಿದ ಮಗ, ಕೈಗೆ ಬರುವ ವೇಳೆಗೆ ತಾಯಿಯಿಂದ ದೂರ ಹೋದ ಮಗ. ಅವನನ್ನು ನೆನೆಸಿಕೊಂಡು ಅಮ್ಮ ದಿನಾ ಅತ್ತಿರಬಹುದು. ಆ ನಿರಾಸೆಗಿಂತ ಈ ನಿರಾಸೆ ದೊಡ್ಡದಲ್ಲ. ಅಮ್ಮನಿಗೆ ನಾವು ಸಮಾಧಾನ ಹೇಳ್ತೀನಿ. ಅವಳ ಹಣೆಯಲ್ಲಿ ಮಗನಿಂದ, ಮೊಮ್ಮಗನಿಂದ ವೇದನೆ ಅನುಭವಿಸಬೇಕೆಂದು ಬರೆದಿದ್ದರೆ, ಅದನ್ನು ತಪ್ಪಿಸಲು ನಾವ್ಯಾರು?” ಕೇಶವ ತೀಕ್ಷ್ಣವಾಗಿ ಹೇಳಿದಾಗ ರಾಜ ಪೆಚ್ಚಾದ.

“ಹಾಗಾದರೆ, ಅಪ್ಪ ಮಾಡಿದ ಅಪರಾಧ, ನನ್ನಿಂದ ಕಡಿಮೆ ಆಗುತ್ತಾ?”

“ನಿಮ್ಮಜ್ಜಿ, ನಿಮ್ಮಪ್ಪನನ್ನು ಎಂದೋ ಕ್ಷಮಿಸಿದ್ದಳು. ಆದರೆ ಅದು ನಿಮ್ಮಪ್ಪನಿಗೆ ತಲುಪಲಿಲ್ಲ ಅಷ್ಟೇ. ಹೋಗಲಿಬಿಡು. ನೀನಿನ್ನೂ ಚಿಕ್ಕವನು. ಸಾಕಷ್ಟು ಗೊಂದಲಗಳಿಂದ ನಿನ್ನ ತಲೆ ತುಂಬಿದೆ. ಸದ್ಯಕ್ಕೆ ಈ ವಿಷಯ ಸಾಕು. ಏನೇ ಆದರೂ, ಹೇಗೆ ಇದ್ದರೂ, ನೀನು ನಮ್ಮ ಮನೆಯ ಮಗ.... ನಿನಗೆ ಅಲ್ಲಿರಲು ಸರ್ವದಾ ಹಕ್ಕಿದೆ. ನಿನ್ನ ಕೋರ್ಸ್ ಮುಗಿಯುವರೆಗಾದರೂ ನೀನು ನಮ್ಮ ಮನೆಯಲ್ಲಿರುತ್ತೀಯಲ್ಲ. ನಮಗೆ ಅದೇ ಸಮಾಧಾನ. ಮುಂದೆ ದೇವರಿಚ್ಛೆ ಇದ್ದಂತಾಗಲಿ. ದೇವರು ನಿನ್ನನ್ನು ಚೆನ್ನಾಗಿಟ್ಟಿರಲಿ” ಕೇಶವ ಬಾಗಿಲ ಬಳಿಗೆ ನಡೆದ. ಹಿಂದಿನಿಂದ ರಾಜ ‘ಅಂಕಲ್’ ಎಂದ ಕೇಶವ ನಿಂತು ಹಿಂತಿರುಗಿ ನೋಡಿದ.

"ನಾನು ಇಷ್ಟೆಲ್ಲಾ ಮಾತನಾಡಬಾರದಾಗಿತ್ತು ಅಂಕಲ್. ನನ್ನನ್ನು ಕ್ಷಮಿಸಿ."

"ಕ್ಷಮಿಸುವಂಥ ಮಾತುಗಳನ್ನೇನೂ ನೀನು ಆಡಿಲ್ಲ. ನೀನು ತಿಳುವಳಿಕಸ್ಥ ನಿನ್ನಲ್ಲೂ ವಿವೇಚನಾ ಶಕ್ತಿ ಇದೆ ಅಂತ ತಿಳಿದು ನಿನ್ನ ಬಗ್ಗೆ ಹೆಮ್ಮೆ ಅನ್ನಿಸ್ತಿದೆ. ನಿನ್ನಂಥ ಮಗನನ್ನು ಹೆತ್ತ ನನ್ನ ಅಣ್ಣ ಅತ್ತಿಗೆ ನಿಜಕ್ಕೂ ಧನ್ಯರು. "ಕೇಶವ ರಾಜನ ತಲೆಯ ಮೇಲೆ ಕೈಯಿಸಿರಿದ. ರಾಜ ಆ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಕಣ್ಣಿಗೊತ್ತಿಕೊಂಡ.

"ನಾನು ಮೂರ್ಖನಂತೆ ಏನೇನೋ ಆಡಿ ಬಿಟ್ಟೆ. ಇನ್ನು ಮುಂದೆ ನೀವುಗಳೇ ನನ್ನ ತಂದೆ ತಾಯಿ.... ನಿಮ್ಮ ಮಗನಾಗಿ ನನ್ನ ಕರ್ತವ್ಯವನ್ನು ನಿಭಾಯಿಸುತ್ತೇನೆ. ಇಂದಿನಿಂದ ನಾನು ನಿಮ್ಮ ಮಗ. ನಾನು ನಿಮ್ಮನ್ನು ಅಪ್ಪಾ ಎಂದು ಕರೀಲಾ?" ಮುಗ್ಧನಂತೆ ಕೇಳಿದ. ಕೇಶವನ ಕಣ್ಣುಗಳು ಮಂಜಾದವು. ರಾಧಾಳ ಕಡೆ ತಿರುಗಿ ನೋಡಿದ. ರಾಜ, ಅಮ್ಮಾ ಎಂದು ಕರೆದು ರಾಧಾಳ ಕಾಲುಗಳನ್ನು ಮುಟ್ಟಿ ಕಣ್ಣಿಗೊತ್ತಿಕೊಂಡ. ರಾಧಾ ಅವನ ಬೆನ್ನ ಮೇಲೆ ಕೈಯಾಡಿಸಿ, ಆಶೀರ್ವದಿಸಿದಳು.

ಅಪ್ಪ ಅಮ್ಮ ಬರುವುದನ್ನೇ ಕಾಯುತ್ತಿದ್ದ ಮಕ್ಕಳಿಗೆ ಗೌರಮ್ಮ ಸಮಾಧಾನ ಹೇಳುತ್ತಿದ್ದಳು. "ಬಸ್ಸು ಬರುವುದು ತಡವಾಗಿರಬಹುದು. ಗಾಬರಿ ಮಾಡ್ಕೋಬೇಡಿ ನಾನಿಲ್ವಾ ಜೊತೆಗೆ."

ಕಾರು ನಿಂತ ಸದ್ದು ಕೇಳಿದಾಕ್ಷಣ ಮಯೂರ ಮುಂಬಾಗಿಲಿಗೆ ಓಡಿಬಂದಳು. ಅಪ್ಪ ಅಮ್ಮನೊಂದಿಗೆ ರಾಜ, ಹಾಗೂ ಅವನ ಮಾವ, ಅವರ ಹೆಂಡತಿ ಎಲ್ಲರೂ ಇಳಿದಾಗ ಮಯೂರ ಮಧುರಳನ್ನು ಕರೆದಳು.

"ಓ... ರಾಜ, ಅವನ ಪರಿವಾರ ಎಲ್ಲಾ ಬಂದ ಹಾಗಿದೆ." ಪಿಸುದನಿಯಲ್ಲಿ ನುಡಿದಳು. ಕೇಶವ ಮುಂದಾಗಿ ಒಳಬಂದು ತಾಯಿಯೊಡನೆ ಏನನ್ನೋ ನುಡಿದ. ಗೌರಮ್ಮ ಸರಸರನೆ ಅರಿಶಿನದ ನೀರಿಗೆ ಸುಣ್ಣ ಬೆರೆಸಿ ಕೆನ್ನೀರನ್ನು ಮಾಡಿ ತಟ್ಟೆಗೆ ಹಾಕಿದಳು.

"ಎಲ್ಲಾ ಇತ್ಲಾಗೆ ಬನ್ನಿ. ಮುಂಬಾಗಿಲಿನಲ್ಲಿ ಏನು ಕೆಲಸ. ಒಳಗೆ ಹೋಗಿ" ಅಜ್ಜಿ ಗದರುವ ಧ್ವನಿಯಲ್ಲಿ ಹೇಳಿದಾಗ, ಮಯೂರ, ಮಧುರ, ಹಿಂದೆ ಸರಿದು ಊಟದ ಮನೆಯ ಬಾಗಿಲ ಬಳಿ ನಿಂತರು. ಕೇಶವನ ಮಗ್ಗುಲಲ್ಲಿ ರಾಜನನ್ನು ನಿಲ್ಲಿಸಿ, ಇಬ್ಬರಿಗೂ ಆರತಿ ಎತ್ತಿದರು. ಬಲಗಾಲನ್ನು ಒಳಗಿಟ್ಟು ಬಂದ ರಾಜ, ಮೊದಲಿಗೆ ಅಜ್ಜಿಗೆ ನಮಸ್ಕರಿಸಿದ. ಅಜ್ಜಿ ತುಂಬು

ಹೃದಯದಿಂದ "ದೀರ್ಘಾಯುಷ್ಮಾನ್ ಭವ" ಎಂದು ಆಶೀರ್ವಾದ ಮಾಡಿದಳು. ಮಯೂರ, ಮಧುರ ಮುಖ ಮುಖ ನೋಡಿಕೊಂಡರು. ಮಧುರ ಅಮ್ಮನ ಬಳಿಗೆ ಬಂದು ನಿಂತಳು.

"ಅಮ್ಮ ಇದೆಲ್ಲಾ ಏನಮ್ಮ... ಅಪ್ಪಂಗೆ ಯಾಕೆ ಆರತಿ ಎತ್ತಿದಿರಿ?.... ಅದೂ ರಾಜನನ್ನೂ ಜೊತೆಗೆ ನಿಲ್ಲಿಸಿ?"

"ಅದನ್ನೆಲ್ಲಾ ನಿಧಾನವಾಗಿ ಹೇಳ್ತೀನಿ. ಪ್ರಯಾಣದಿಂದ ಆಯಾಸವಾಗಿದೆ. ಮೊದಲು ಮುಖ ತೊಳೆದು ಬರ್ತೀನಿ. ಅತ್ತೆ ಕಾಫಿ ಬೆರೆಸ್ತೀರಾ?" ರಾಧ ಬಚ್ಚಲು ಮನೆಯ ಕಡೆಗೆ ನಡೆದಳು. ಮಯೂರ ಅಪ್ಪನ ಬಳಿಗೆ ಬಂದಳು.

"ಇದೇನಪ್ಪಾ... ಆರತಿ ಎತ್ತಿಸ್ಕೊಂಡು ಒಳಗೆ ಬಂದ್ರಲ್ಲ.... ಏನು ವಿಷಯ?"

"ಏನಿಲ್ಲ ಇವತ್ತು ನನ್ನ ಹುಟ್ಟುಹಬ್ಬ ಅಂತೆ. ರಾಧಾ ಜ್ಞಾಪಿಸಿದಳು. ನಿಮ್ಮಜ್ಜಿಗೆ ಸಡಗರ ಅಷ್ಟೇ."

"ನಿಮ್ಮ ಬರ್ತ್‌ಡೇ ಯಾವತ್ತು ಅಂತ ನಂಗೆ ಗೊತ್ತಿಲ್ವಾ... ಬೇರೆ ಏನೋ ಕಾರಣ ಇದೆ. ಹೇಳಿ ಅಪ್ಪಾ" ಕೇಶವ ನಸುನಕ್ಕ.

ನಿಮಗೆಲ್ಲಾ ತಿಳಿಸದೇ ನನ್ನ ಹುಟ್ಟುಹಬ್ಬಾನ ಆಚರಿಸಿಕೊಳ್ತೀನಾ? ಅಜ್ಜಿ ಹಬ್ಬದ ಅಡಿಗೆ ಮಾಡ್ತಾಳೆ. ನಿನಗೇನು ಇಷ್ಟ ಹೇಳು ಅದನ್ನೇ ಮಾಡ್ತಾಳೆ. ಅಂದ್ಹಾಗೇ ರಾಜ ನಿಂಗೇನು ಇಷ್ಟು ಹೇಳು." ಮಯೂರ ಅಪ್ಪನಿಂದ ದೂರ ಸರಿದು ನಿಂತಳು. ಇದೇನು ಈ ಹೊಸ ರೀತಿ. ರಾಜನ ಇಷ್ಟವನ್ನು ಯಾಕೆ ಕೇಳಬೇಕು? ರಾಜ ಮಯೂರಳನ್ನು ಗಮನಿಸಿದ್ದ. ಅವನ ಮುಖದ ಬಣ್ಣ ಕಂದಿತು. ಆದರೂ ನಗುಮುಖ ಮಾಡಿಕೊಂಡು ಕೇಳಿದ.

"ಮಂದಾರ ಎದ್ದಿಲ್ವಾ? ನಾನು ಎಬ್ಬಿಸ್ಲಾ? ಎನ್ನುತ್ತ ಒಳಗಿನ ರೂಮಿಗೆ ಬಂದ. ಅಲ್ಲಿ ಕನ್ನಡಿಯ ಮುಂದೆ ನಿಂತು ಮುಂಗುರಳನ್ನು ಸವರಿಕೊಳ್ಳುತ್ತಿದ್ದ ಮಧುರ ಅವನನ್ನು ಕಂಡು ಗಲಿಬಿಲಿಗೊಂಡಳು. ಅವಳ ಕದಪುಗಳು ಕೆಂಪಾದವು.

"ಏನು ಬೇಕಾಗಿತ್ತು?" ಮಧುರವಾಗಿ ಕೇಳಿದಳು.

"ಏನೂ ಬೇಡ, ಮಂದಾರನ್ನ ಎಬ್ಬಿಸೋಣ ಅಂತ ಬಂದೆ." ಎನ್ನುತ್ತಾ ಹಿಂದಕ್ಕೆ ಬಂದ. ನೈಟಿಯನ್ನು ಸರಿ ಮಾಡಿಕೊಳ್ಳುತ್ತಾ, ಮಧುರ ಅವನನ್ನೇ ನೋಡಿದಳು. ಎರಡು ಮೂರು ದಿನಗಳಲ್ಲಿ ಅವನು ಬದಲಾಗಿರುವಂತೆ

ಅನ್ನಿಸಿತ್ತು. ಮುಖಕ್ಕೆ ಏನೋ ವಿಶೇಷ ಕಳೆ ಬಂದಿದೆ ಎಂದುಕೊಂಡಳು. ಆದರೆ ಅದೇನೆಂದು ಅರ್ಥವಾಗಲಿಲ್ಲ. ಅವನನ್ನೇ ಅನೇಕ ಬಾರಿ ನೋಡಿದಳು. ರಾಜನಿಗೆ ಅದು ಗಮನಕ್ಕೆ ಬಂತು. ಇವಳ್ಯಾಕೆ ನನ್ನನ್ನು ಹೀಗೆ ನೋಡ್ತಿದಾಳೆ? ಅಲ್ಲಿ ತಿರಸ್ಕಾರದ ಛಾಯೆ ಇರಬಹುದೆ? ಅವನಿಗೆ ಅವಳನ್ನು ನೋಡುವ ಧೈರ್ಯಬರಲಿಲ್ಲ. ಅಷ್ಟರಲ್ಲಿ ರಾಧಾ ಎಲ್ಲರಿಗೂ ಕಾಫಿಯನ್ನು ಕೊಟ್ಟು ತಾನೂ ಕುಡಿದಳು.

ಸ್ವಲ್ಪ ಹೊತ್ತಿನ ನಂತರ ನಂಜುಂಡಸ್ವಾಮಿ ಹಾಗೂ ಅವನ ಪತ್ನಿ ಇಬ್ಬರೂ ಹೊರಟರು. ಮತ್ತೆ ಬರ್ತೀನಿ.... ಇಲ್ಲೇ ನಮ್ಮ ಸಂಬಂಧದವರು ಇದಾರೆ ಅಂತ ಹೇಳಿದರು. ರಾಧಾ ಆಕೆಗೆ ಅರಿಶಿನ ಕುಂಕುಮವನ್ನು ಕೊಟ್ಟಳು.

"ನಾನು ಬೇಗ ಸ್ನಾನ ಮಾಡ್ಕೊಂಡು ಬಂದುಬಿಡ್ತೀನಿ" ಅಜ್ಜಿ ಸಂಭ್ರಮದಿಂದ ಬಚ್ಚಲು ಮನೆಯ ಕಡೆಗೆ ನಡೆದಾಗ, ಅಕ್ಕತಂಗಿಯರು ಮುಖಮುಖ ನೋಡಿಕೊಂಡು ನಕ್ಕರು. ರಾಜ ಮೇಲಿನ ತನ್ನ ರೂಮಿಗೆ ಹೋಗದೇ ಅಲ್ಲೇ ಸುಳಿದಾಡುತ್ತಿರುವುದನ್ನು ಅಕ್ಕತಂಗಿಯರು ಗಮನಿಸಿದರು. ಅಷ್ಟರಲ್ಲಿ ಮಂದಾರ ಎದ್ದು ಬಂದಳು. ತಾಯಿಯನ್ನು ಕಂಡೊಡನೆ ಅಮ್ಮಾ ಎನ್ನುತ್ತ ಹೋಗಿ ಅವಳನ್ನು ತಬ್ಬಿಕೊಂಡಳು.

"ಶ್.... ಬಿಡು.... ಹಾಗ್ಯಾಕೆ ಮೈಮೇಲೆ ಬೀಳ್ತಿಯಾ" ರಾಧಾ ಮಗಳನ್ನು ನವಿರಾಗಿ ತಳ್ಳಿದಳು. ಆದರೆ ಮಂದಾರ ಹಿಡಿತವನ್ನು ಬಿಡಲಿಲ್ಲ.

"ಮಂದಾರ ಬಾಯಿಲ್ಲಿ" ಕೇಶವ ಕುಳಿತಲ್ಲಿಂದಲೇ ಕರೆದ.

"ನಾನು ಆಮೇಲೆ ಬರ್ತೀನಿ..."

"ಹೇಳಿದಷ್ಟು ಕೇಳು... ಯಾಕೆ ಲೇಟು ಎದ್ದದ್ದು!"

"ಅಮ್ಮ ಇರಲಿಲ್ಲವಲ್ಲ. ಅಜ್ಜಿ ಎಬ್ಬಿಸಲಿಲ್ಲ..." ರಾಜ ಕಿಸಿಕಿಸಿ ನಕ್ಕ. "ಯಾಕ್ರೀ ನಗೋದು. ನಾನು ನಿಜಾನೇ ಹೇಳಿದ್ದು."

"ಸಾರಿ ಪುಟ್ಟೀ.... ಏನೋ ನಗುಬಂತು ನಕ್ಕುಬಿಟ್ಟೆ ಸಾರೀ..."

"ಹೋಗೇ ಮುಖ ತೊಳ್ಕೊಂಡು ಬಾರೇ.... ಮಾತಾಡ್ತಾ ನಿಂತುಬಿಟ್ಲು. ದೊಡ್ಡ ಅಜ್ಜಿ ಥರಾ" ಮಧುರ ಕಾರಣವಿಲ್ಲದೇ ರೇಗಿದಾಗ ರಾಜ ತನ್ನಲ್ಲೇ ಏನನ್ನೋ ಯೋಚಿಸುತ್ತಿದ್ದ. ಓರೆಗಣ್ಣಿನಿಂದ ನೋಡಿದ ಮಧುರ ಅಲ್ಲಿಂದ ಸರಿದಳು.

"ಒಂದೆರಡು ದಿನಗಳ ಮಟ್ಟಿಗೆ ಬಂದು ಹೋಗಿ ಅಂತ, ನಿನ್ನ ಅಕ್ಕಂದಿರಿಗೆ ಫೋನು ಮಾಡೋ ಕೇಶವಾ."

"ಈಗ್ಯಾಕಮ್ಮಾ? ಸುಮ್‌ಸುಮ್ನೆ ಬನ್ನಿ ಅಂತ ಕರೆದ್ರೆ ಬಂದು ಬಿಡ್ತಾರಾ?"

"ರಾಜನ ವಿಷಯಾನ ಹೇಳು... ಅವರಿಗೂ ಗೊತ್ತಾಗ್ಲೀ."

"ಬೇಡಮ್ಮ, ಸುಮ್ನೆ ಈಗ್ಲೇ ಎಲ್ರಿಗೂ ತಿಳಿಸುವುದು ಬೇಡ. ಕ್ರಮೇಣ ತಾನಾಗಿಯೇ ತಿಳಿಯಲಿ."

"ಆಗ, ಆಕ್ಷೇಪಣೆ ಮಾಡ್ದೇ ಇರ್ತಾರಾ?"

"ಆಕ್ಷೇಪಣೆ ಮಾಡಿದರೆ ಮಾಡಲಿ. ಎಲ್ಲಾ ಅವರಿಗೆ ತಿಳಿದದ್ದೇ.... ನೀನೂ ಅಷ್ಟೇ. ಈಗ್ಲೇ ಯಾರ್ಗೂ ಹೇಳ್ಬೇಡ. ಮೊದಲು ಅವನು ಹೊಂದಿಕೊಳ್ಳಲಿ ಇಲ್ದಿದ್ರೆ ಅವನೂ ಮನೆಬಿಟ್ಟು ಹೊರಟುಹೋಗ್ತಾನೆ ಅಷ್ಟೆ."

"ಗೌರಮ್ಮ ಬೆಚ್ಚಿದಳು. "ಅಪಶಕುನದ ಮಾತನ್ನಾಡಬೇಡ. ಎಲ್ರೂ ಅವನ ಹಾಗೇ ಇರ್ಬೇಕು ಅಂತೇನಿಲ್ಲ" ಗೌರಮ್ಮ ಸಿಡಾರನೆ ನುಡಿದು ಒಳಸರಿದಾಗ ಕೇಶವ ಪೆಚ್ಚಾದ. ಅಮ್ಮನ ಹಿಂದೆಯೇ ಹೋಗಿ, ಕೆಳದನಿಯಲ್ಲಿ ಬೆಂಗಳೂರಿನಲ್ಲಿ ನಡೆದ ಮಾತುಕತೆಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದ.

"ನಿನ್ನ ಮೊಮ್ಮಗ ದಡ್ಡನಲ್ಲ. ವಿವೇಚನಾಶಕ್ತಿ ಇದೆ. ನಿನಗೆ ಬೇಸರವಾಗದಿರಲಿ ಅಂತ ಒಪ್ಪಿಕೊಂಡಿದಾನೆ. ಅವನಿಗೆ ಬೇಸರವಾಗುವ ಮಾತುಗಳನ್ನಾಡಬೇಡ."

"ನಂಗೇನು ಅಷ್ಟು ಗೊತ್ತಾಗುಲ್ವೆ? ಮಗನ್ನ ದೂರ ಮಾಡ್ಕೊಂಡೆ. ಮೊಮ್ಮಗನ್ನ ಸದಾಕಾಲ ನನ್ನ ಬಳಿಯೇ ಇಟ್ಟುಕೊಳ್ಳುವ ಆಸೆ." ಸ್ನಾನದ ಮನೆಯಲ್ಲಿದ್ದ ಮಯೂರಳ ಕಿವಿಗೆ ಅಲ್ಪಸ್ವಲ್ಪ ಮಾತುಗಳು ಕೇಳಿಸಿದವು. ಬೇಗ ಬೇಗ ಬಟ್ಟೆ ಧರಿಸಿ ಹೊರಬಂದಳು. ಹೊರಗೆ ಯಾರೂ ಇರಲಿಲ್ಲ.

"ಮಧೂ, ಅಪ್ಪ ಅಜ್ಜಿ ಏನೋ ಗುಸುಗುಸು ಪಿಸುಪಿಸು ಅಂತ ಮಾತಾಡಿ ಕೊಳ್ತಿದ್ರು. ಬಂದಾಗ್ನಿಂದ ಎಲ್ಲರೂ ಸಂದೇಹ ಬರುವಂತೆ ವರ್ತಿಸುತ್ತಿದಾರೆ. ನಾವು ಕೇಳಿದ್ರೆ ಮಾತ್ರ ಸರಿಯಾಗಿ ಹೇಳುಲ್ಲ. ನೀವಿನ್ನೂ ಚಿಕ್ಕವರು ಅಂತ ಬಾಯಿ ಮುಚ್ಚಿಸಿಬಿಡ್ತಾರೆ. ನೀನೀಗ ದೊಡ್ಡೋಳಾಗೀದಿಯಲ್ಲ. ದಬಾಯಿಸಿ ಕೇಳು. ಸುಮ್ಮನಿರಬೇಡ. ಮಧುರ ಅದಕ್ಕೆ ಉತ್ತರಿಸದೇ ನುಡಿದಳು.

"ನಂಗ್ಯಾಕೋ ಭಯ ಆಗ್ತಿದೆ ಕಣೇ ಮಯೂರ. ನಾನು ಡಾಕ್ಟರ ಹತ್ರ ಹೋಗಿ ಬರ್ಬೇಕು."

"ಯಾಕೇ ಹುಷಾರಿಲ್ವಾ? ಜ್ವರ ಇದ್ದ ಹಾಗೆ ಅನ್ನಿಸುಲ್ಲ" ಮಯೂರ ಹಣೆಯ ಮೇಲೆ ಕೈಯುನ್ನಿಟ್ಟಳು. ಮಧುರ ಕೈಯನ್ನು ಕಿತ್ತೊಗೆದಳು.

"ಜ್ವರ ಅಲ್ಲ. ಬೇರೆ ವಿಷಯ. ನಿಂಗೆ ಗೊತ್ತಾಗುಲ್ಲ ಬಿಡು. ನೀನು ಚಿಕ್ಕವಳು."

"ಅಮ್ಮಂಗೆ ಹೇಳು. ಅಜ್ಜಿಗೆ ಹೇಳು. ನನ್ಮೇಲೆ ಯಾಕೆ ರೇಗ್ತೀಯ?"

"ನೀನು ತುಂಬಾ ರೇಗಿಸ್ತೀಯ ಕಣೇ. ಅಮ್ಮಂಗೆ ನನಗಿಂತ ಹೆಚ್ಚಾಗಿ ರಾಜನದ್ದೇ ಚಿಂತೆ. ಮಡೀ ಅಜ್ಜಿ ಹತ್ರ ಇದನ್ನೆಲ್ಲಾ ಮಾತನ್ನಾಡೋದೇ ಮೈಲಿಗೆ. ನನ್ನ ಜೊತೆ ಡಾಕ್ಟರ್ ಕ್ಲಿನಿಕ್‌ಗೆ ಬರ್ತೀಯಾ?"

"ಹುಂ. ಬರ್ತೀನಿ. ಸಾಯಂಕಾಲ ಸ್ಕೂಲ್ನಿಂದ ಬಂದಮೇಲೆ ಹೋಗೋಣ."

"ಅಮ್ಮಂಗೆ ಹೇಳ್ಬೇಡ..."

"ಅಮ್ಮಂಗೂ ಹೇಳುಲ್ಲ. ಅಜ್ಜಿಗೂ ಹೇಳುಲ್ಲ. ಈಗ ಅವರೆಲ್ಲರಿಗೂ ನಾವಿಬ್ರು ಇರೋದೇ ಮರೆತುಹೋಗಿದೆ. ರಾಜಾ.... ರಾಜ... ರಾಜನ್ನ ಉದ್ಧಾರ ಮಾಡೋಕೆ ಹೊರಟಿದಾರೆ.."

"ಹೌದು... ಆದರೆ ಈ ರಾಜನಿಂದ ಅವರಿಗೇನಾಗಬೇಕಾಗಿದೆ? ಅವನ್ಯಾರು? ಎಲ್ಲಿಯವನು? ಇದನ್ನೆಲ್ಲ ನಾವು ತಿಳಿದುಕೊಳ್ಳಬೇಕಲ್ಲ."

"ರಾಜನ್ನೇ ಕೇಳಿದ್ರೆ. ಅವನು ಹೇಳಲೇಬೇಕು. ಅದೇನು ಸಂಬಂಧ ಅಂತ."

"ಹೌದು. ಹಾಗೇ ಮಾಡೋಣ. ಈಗ್ಲೇ ಹೋಗಿ ಕೇಳೋಣ..."

"ಸ್ಕೂಲಿಗೆ ಹೋಗೋಕೆ ರೆಡಿಯಾಗಬೇಕಲ್ಲೇ ಅಲ್ಲದೇ.... ಅವನ ಹತ್ರ ನಿಮಗೇನು ಮಾತು ಅಂತ ಅಮ್ಮ ಬೈದರೆ?..."

"ಅಮ್ಮಂಗೆ ತಿಳಿಯದಂತೆ ನಾನು ಹೋಗಿ ಕೇಳ್ಕೊಂಡು ಬರ್ತೀನಿ. ನಾವಿಬ್ರೂ ಒಟ್ಟಿಗೇ ಹೋದ್ರೆ ಅಮ್ಮಂಗೆ ಅನುಮಾನ ಬರಬಹುದು" ಮಧುರ ಹೂಂ ಎನ್ನುವ ಮೊದಲೇ ಮಯೂರ ಮಹಡಿಯ ಕೆಳ ಮೆಟ್ಟಿಲಿನ ಒಳಗೆ ಓಡಿದ್ದಳು.

ತನ್ನಲ್ಲೇ ಯಾವುದೋ ಹಾಡನ್ನು ಗುನುಗುನಿಸುತ್ತಿದ್ದ ರಾಜ, ಮಯೂರಳ ಕಾಲ್ಗೆಜ್ಜೆಯ ಸದ್ದು ಕೇಳಿ ಹಾಡುವುದನ್ನು ನಿಲ್ಲಿಸಿದ. "ಓ.... ಮಯೂರ ಏನು ವಿಷಯ..? ಬೆಲ್ ಮಾಡಿದ್ದಿದ್ರೆ ನಾನೇ ಬರ್ತಿದ್ದೆ."

"ಅದಿರಲಿ. ಏನು ವಿಷಯ? ಬಹಳ ಖುಷಿಯಾಗಿರುವಂತಿದೆ. ಹೇಳಿ."

"ಹೇಳ್ತೀನಿ. ಆದರೆ ಈಗಲ್ಲ ಆದರೆ ಒಂದು ವಿಷಯ. ನನ್ನನ್ನು ಬಹುವಚನದಲ್ಲಿ ಕರೀಬೇಡಿ. ನನಗೆ ಮುಜುಗರವಾಗುತ್ತೆ."

"ಹೊರಗಿನವರನ್ನ ಹೇಗ್ರೀ ಏಕವಚನದಲ್ಲಿ ಮಾತನಾಡಿಸುಕ್ಕೆ ಆಗುತ್ತೆ?"

"ನಾನೂ ಈ ಮನೆಯವನೇ ಹೊರಗಿನವನಲ್ಲ ಅಂತ ತಿಳ್ಕೊಳ್ಳಿ."

"ಅದ್ಹೇಗ್ರೀ ತಿಳಕೊಳ್ಳಕಾಗುತ್ತೆ. ಅಲ್ಲದೇ ನೀವೇ ಬಹುವಚನದಲ್ಲಿ ಮಾತಾಡಿಸ್ತಿದೀರಿ..."

"ನಾನು, ನೀವು ಮೂವರಿಗೂ ಸೇರಿಸಿ ಹೇಳ್ತಿದೀನಿ. ನಾನೂ ಚಿಕ್ಕವನು....

"ಆಗ್ಲೀ. ಪ್ರಯತ್ನ ಮಾಡ್ತೀವಿ... ಅದ್ಸರಿ ಸಂತೋಷಕ್ಕೆ ಕಾರಣ ಏನು ಅಂತ ಹೇಳಲೇ ಇಲ್ಲ."

"ಹೇಳ್ತೀನಿ... ಭಾನುವಾರ ನನ್ನ ಹುಟ್ಟಿದ ಹಬ್ಬ. ನನಗೆ ಹದಿನೆಂಟು ವರ್ಷಗಳು ತುಂಬುತ್ತವೆ. ನಾನು ಮೆಜಾರಿಟಿಗೆ ಬರ್ತೀನಿ... ಆಗ ಹೀಗೆ ಖುಷಿಯಾಗಿರೋಕೆ ಆಗುತ್ತೋ ಇಲ್ವೋ ಅಂತ..." ಅವನ ತಮಾಷೆಯ ಮಾತಿಗೆ ಅವನೇ ನಕ್ಕ. ಮಯೂರ ಮೂತಿ ಚೊಟ್ಟ ಮಾಡಿದಳು.

"ನಿಜ ಹೇಳಿದ್ರೆ ಒಳ್ಳೇದು. ಈ ಜೋಕೆಲ್ಲಾ ಬೇಡ."

"ನಾನು ನಿಜಾನೇ ಹೇಳ್ತಿದೀನಿ. ಮದರ್ ಪ್ರಾಮಿಸ್" ಕೊರಳಿಗೆ ಬೆರಳನ್ನು ತಾಗಿಸಿಕೊಂಡು ಹೇಳಿದ. ತಕ್ಷಣವೇ ತುಟಿ ಕಡಿದು ಸುಮ್ಮನಾದ.

"ತಾಯಿ ಇಲ್ದೋರು ಮದರ್ ಪ್ರಾಮಿಸ್ ಮಾಡ್ಬಾರ್ದು" ರಾಜ ಅವಳಿಗೆ ಬೆನ್ನು ಮಾಡಿ ನಿಂತ. ಕಣ್ಣುಗಳು ತುಂಬಿದ್ದವು. ಮಯೂರ ಅವನ ಎದುರಿಗೆ ಬಂದು ನಿಂತಳು. ಅವನು ಕಣ್ಣೀರನ್ನು ಒರೆಸಿಕೊಂಡ. ಅವಳು ಉಗುಳು ನುಂಗಿದಳು.

"ಸಾರಿ ನಾನು ಹೀಗೆ ಮಾತನ್ನಾಡಬಾರದಾಗಿತ್ತು."

"ಪರವಾಗಿಲ್ಲ. ನಿಮ್ಮ ಅಮ್ಮನ್ನ ನೋಡಿದಾಗಿನಿಂದ, ನನಗೆ ತಾಯಿ ಇಲ್ಲ ಅನ್ನೋದೇ ಮರೆತುಹೋಗಿತ್ತು."

"ಅಂದ್ರೇ...?"

"ನಾನು ನಿಮ್ಮ ಅಮ್ಮನ್ನೇ ತಾಯಿ ಅಂತ ತಿಳಿದುಕೊಂಡಿದೀನಿ. ಅದು ತಪ್ಪಾಗುಲ್ಲ ಅಲ್ವಾ?" ನಾನು ಅವರನ್ನು ಅಮ್ಮ ಅಂತ ಕರೆದ್ರೆ ನಿಮಗೆಲ್ಲ ಬೇಸರ ಆಗುತ್ತಾ?"

"ಬೇಸರ ಏನಿಲ್ಲ... ಆದರೆ ಆ ಆಸೆ ಯಾಕೆ ಅಂತ?

"ಆಸೆ ಅಂತಲ್ಲ. ಹಾಗೆ ಭಾವನೆ ಮೂಡುತ್ತೆ. ನಿಮ್ಮಮ್ಮ ತುಂಬಾ ಒಳ್ಳೆಯವರು. ಅದಕ್ಕೇ ಅವರು ನನಗೂ ಅಮ್ಮನಾಗಲಿ ಅಂತ ಮನಸ್ಸು ಹಂಬಲಿಸ್ತಾ ಇದೆ. ಆದರೆ ನೀವುಗಳು ಏನಂತೀರೋ ಅಂತ ಅಳುಕು."

"ಸರಿ. ನಾವುಗಳು ಯೋಚಿಸ್ಬಿಟ್ಟು ಸಾಯಂಕಾಲ ಹೇಳ್ತೀವಿ ಆಯ್ತಾ"
"ಮಧುರನ್ನೂ ಒಂದ್ಮಾತು ಕೇಳ್ಬೇಕಲ್ವಾ?"

"ಹುಂ. ಅವಳು ದೊಡ್ಡೋಳು. ಇಲ್ದಿದ್ರೆ ಬೈತಾಳೆ."

"ಮಧುರ ಅಂಥ ಹುಡುಗಿಯಲ್ಲ. ಬಹಳ ಮೃದು ಸ್ವಭಾವದವಳು."

"ಹಾಗೆಲ್ಲ ಹುಡುಗೀರನ್ನ ಹೊಗಳಬಾರದು..."

"ಯಾಕೆ ಹೊಗಳಬಾರದು? ಇರೋ ವಿಷಯ ಹೇಳಿದೆ ಅಷ್ಟೆ..."

"ನಿಮ್ಮಮ್ಮಂಗೆ ಹೇಳಿದ್ರೆ ಅಷ್ಟೇ" ಎನ್ನುತ್ತ ಅವಳು ಕೆಳಗಿಳಿದು ಹೊರಟುಹೋದಳು. ರಾಜ ಮತ್ತೆ ಹಾಡುತ್ತಿದ್ದ ಹಾಡಿನ ಸಾಲುಗಳನ್ನು ನೆನೆಪಿಸಿಕೊಂಡ.

* * * *

"ಏ ಮಧೂ, ರಾಜನ ಬಗ್ಗೆ ನಿನಗೇನ್ನಿಸುತ್ತೇ" ರಸ್ತೆಯಲ್ಲಿ ನಡೆಯುತ್ತಿದ್ದಾಗ ಮಯೂರ ಕೇಳಿದಳು.

"ಯಾವ ಥರಾ? ಒಳ್ಳೆಯವನೋ ಕೆಟ್ಟವನೋ ಅಂತ್ಲಾ? ಅಪ್ಪ ಅವನನ್ನು ಮನೇಲಿಟ್ಟುಕೊಂಡಿದಾರೆ ಅಂತ ಅಂದ್ಮೇಲೆ ಒಳ್ಳೆಯವನೇ ಇರಬಹುದು."

"ಒಳ್ಳೆಯವನೇ ಅಂತ ಕಾಣಿಸುತ್ತೆ. ಆದರೆ ನಮ್ಮ ಮನೇಲೇ ಉಳಿದುಕೊಂಡುಬಿಟ್ಟರೆ..."

"ಯಾಕೆ ಉಳೀತಾನೆ? ಓದು ಮುಗಿದಮೇಲೆ ಕೆಲಸ ಸಿಕ್ಕಿದ ಕಡೆಗೆ ಹೋಗ್ತಾನೆ. ಆಗ ಅಪ್ಪಂಗೆ ಅಮ್ಮಂಗೆ ಬೇಸರವಾಗಬಹುದು. ನಮಗೆ ಅವನು ಎಲ್ಲಿದ್ದರೇನು? ನಿನ್ನ ಹತ್ರ ಹಾಗೇನಾದ್ರೂ ಹೇಳಿದ್ನಾ?"

"ನಮ್ಮಮ್ಮನ್ನ ಅವನೂ ಅಮ್ಮಾ ಅಂತ ಕರೀತಾನಂತೆ.... ನಮ್ಮಗಳ ಅಭ್ಯಂತರ ಇಲ್ಲದಿದ್ರೆ...."

"ಕರೀಲಿಬಿಡು. ನಮಗೇನು ತೊಂದ್ರೆ."

"ಅಷ್ಟು ಸುಲಭವಾಗಿ ಹೇಳ್ತಿದೀಯಲ್ಲ. ಅವಳು ನಮ್ಮಮ್ಮ. ಅವನಿಗೆ ಹೇಗೆ ಅಮ್ಮ ಆಗ್ತಾಳೆ?"

"ಕರೆದ ಮಾತ್ರಕ್ಕೆ, ಅಮ್ಮ ಅವನ ಸ್ವಂತ ಅಮ್ಮನಾಗುವುದಿಲ್ಲ. ಅಮ್ಮ ಬೇಕಾದ್ರೆ ಒಪ್ಪಿಕೊಳ್ಳಲಿ; ಬೇಡವಾದರೆ ಬಿಡಲಿ.... ನಂಗೇನು?"

"ಯಾಕೇ ಮಧು, ಹೀಗೆ ಮಾತನಾಡ್ತಿದೀಯ. ನಿಂಗೆ ಏನೂ ಅನ್ನಿಸುಲ್ವಾ?"

"ಇಲ್ಲ. ನನ್ನ ಚಿಂತೇನೇ ನನಗೆ ಬೇಕಾದಷ್ಟಿದೆ. ನಂಗೆ ಒಮ್ಮೊಮ್ಮೆ ತುಂಬಾ ಭಯ ಆಗುತ್ತೆ. ನಾನು ಬೇಗ ಸತ್ತು ಹೋಗ್ತೀನಿ ಅಂತ ಅನ್ನಿಸುತ್ತೆ."

"ಥೂ ಹೋಗೇ ಅಂಥಾದ್ದೇನಾಗಿದೆ? ಅಮ್ಮಂಗೆ ಹೇಳ್ತೀನಿ ಅಷ್ಟೇ."

"ಅಮ್ಮ ಏನು ಮಾಡೋಕೆ ಸಾಧ್ಯ? ಈ ನಡುವೆ ಅವಳಿಗೆ ನಮ್ಮ ಕಡೆ ಗಮನವೇ ಇಲ್ಲ. ಶಾಸ್ತ್ರಿಗಳ ಹೆಂಡ್ತಿ ಎಷ್ಟು ಹೇಳಿದ್ರು, ಆರೈಕೆ ಮಾಡಿ... ಲೇಹ್ಯ ಕೊಡಿ. ಹಾಲು ಹಣ್ಣು ಕೊಡಿ.... ಅಂತ. ಏನನ್ನೂ ಸರಿಯಾಗಿ ಕೊಡೋದೇ ಇಲ್ಲ. ನಾನು ಯಾರಿಗೂ ಬೇಕಾಗಿಲ್ಲ. ನಾನು ಬೇಗ ಸತ್ತು ಹೋದ್ರೆ ಅಮ್ಮಂಗೆ ಬುದ್ಧಿಬರುತ್ತೆ ಅಷ್ಟೇ" ಗಂಟಲುಬ್ಬಿ ಬಂದಿತ್ತು.

"ನೀನು ಹೀಗೆಲ್ಲಾ ಮಾತಾಡಿದ್ರೆ ನಾನು ಅಮ್ಮಂಗೆ ಖಂಡಿತಾ ಹೇಳ್ತೀನಿ."

"ಹೇಳ್ಕೋ ನಂಗೇನೂ ಭಯವಿಲ್ಲ...." ಮಧುರ ಅವಳಿಗಿಂತ ಮುಂದೆ ಮುಂದೆ ನಡೆದು ಸ್ಕೂಲನ್ನು ಸೇರಿಕೊಂಡಳು.

* * * *

"ಅಮ್ಮಾ... ಮಧುರಂಗೆ ನಿನ್ನ ಮೇಲೆ ಕೋಪ..." ತಿಂಡಿ ತಿನ್ನುತ್ತಾ ಮಯೂರ ನುಡಿದಳು. ಮಧುರ ಸುಮ್ಮನಿರು ಎನ್ನುವಂತೆ ಸಂಜ್ಞೆ ಮಾಡಿದಳು.

"ಕೋಪ ಬರದೇ ಏನು? ಅದು ಮೂಗಿನ ತುದೀಲೇ ಕೂತಿರುತ್ತೆ" ರಾಧಾ ಕಾಫಿ ಬೆರೆಸುತ್ತಾ ನುಡಿದಳು.

"ಅಮ್ಮಾ ಮಧುರಂಗೆ ಹಾಲನ್ನು ಕೊಡಮ್ಮ. ಕಾಫಿ ಬೇಡ. ಜಾಸ್ತಿ ಕಾಫಿ ಕುಡಿದರೆ ಕಪ್ಪಗಾಗ್ತಾರೆ. ಒಣಗಿ ಹೋಗ್ತಾರೆ ಅಂತ ಅವಳ ಟೀಚರ್ ಹೇಳಿದ್ರಂತೆ."

"ಹೌದೇನೇ ಮಧು? ಯಾವ ಟೀಚರ್ರೇ..."

"ಯಾರೂ ಇಲ್ಲ. ನೀನು ಸುಮ್ನಿರೇ ಮಯೂರ. ನಂಗೆ ಹಾಲೂ ಬೇಡ. ಕಾಫಿಯೂ ಬೇಡ" ಮಧುರ ಮೂತಿ ಉದ್ದ ಮಾಡಿದಳು.

"ಅದಕ್ಯಾಕೇ ಕೋಪ. ಈಗ ಕಾಫಿ ಕುಡಿ. ರಾತ್ರಿ ಮಲಗುವಾಗ ಹಾಲನ್ನು ಕೊಡ್ತೀನಿ." ಮಧುರ ತಾಯಿಯ ಮಾತನ್ನು ಕೇಳಿಸಿಕೊಳ್ಳದವಳಂತೆ ಎದ್ದುಹೋದಳು.

"ಅಮ್ಮಾ... ಅವಳಿಗೆ ನಿನ್ನ ಮೇಲೆ ಕೋಪ. ನೀನು ಸರಿಯಾಗಿ ಆರೈಕೆ ಮಾಡ್ತಿಲ್ಲ ನೀನು ಅಂತ. ಬೇಗ ಸತ್ತು ಹೋಗ್ತಾಳಂತೆ."

"ಥೂ ಏನು ಮಾತು! ಹಾಲು ಹಣ್ಣು ಜಾಸ್ತಿ ಆದರೆ ಮೈ ಬರುತ್ತೆ. ಬರೀ ಲೇಹ ದೇಹಕ್ಕೆ ಯಾಕೆ ಬೇಕು? ಈಗ ಅವಳಿಗೇನಾಗಿದೆ? ಸರಿಯಾಗಿಯೇ ಇದಾಳಲ್ಲ."

"ನೀನೇ ಕೇಳು. ಡಾಕ್ಟರ ಹತ್ರ ಹೋಗ್ಬೇಕು ಅಂತಿದ್ಲು."

"ಇದನ್ನೆಲ್ಲ ನಿನ್ನತ್ರ ಹೇಳ್ತಾಳಾ! ನಿಂಗೇನು ತಿಳುವಳಿಕೆ ಇದೆ? ನನಗೋ, ಅಜ್ಜಿಗೋ ಹೇಳ್ಬಾರ್ದಾ ಅವಳು. ಎಲ್ಲಿ ಕರಿ ಅವಳನ್ನು ನಾನು ಮಾತಾಡ್ತೀನಿ."

"ನೀನೇ ಹೋಗಿ ಕೇಳಮ್ಮ.... ಅವಳಿಗೋಸ್ಕರ ನೀನು ಅಷ್ಟನ್ನು ಮಾಡುಕ್ಕೆ ಆಗುಲ್ವಾ?" ರಾಧಾ ಅವಳನ್ನೇ ದಿಟ್ಟಿಸಿದಳು. ಇವಳ್ಯಾಕೆ ಹೀಗೆ ಮಾತಾಡ್ತಿದಾಳೆ?.... ನಾನೇನು ಕಡಿಮೆ ಮಾಡಿದೀನಿ ಇವರುಗಳಿಗೆ? ಮಧುರಂಗೆ ತನ್ನ ಮೇಲೆ ಅಸಮಾದಾನ ಎನ್ನುವುದು ಖಚಿತವಾಗಿತ್ತು. ಅದಕ್ಕೆ ಕಾರಣ ರಾಜ ಇರಬಹುದೇ ಅಂತ ಅನ್ನಿಸಿದಾಗ ಮನಸ್ಸಿಗೆ ಕಸಿವಿಸಿ ಆಗಿತ್ತು. ಕಾಫಿಯ ಲೋಟವನ್ನು ಹಿಡಿದು ಮಧುರ ಇದ್ದಲ್ಲಿಗೆ ಬಂದಳು.

"ಏನೇ ಮಧು... ದೊಡ್ಡೋಳಾಗಿದೀಯ... ತಿಳುವಳಿಕೆ ಬಂದಿದೆ ಅಂತಂದುಕೊಂಡ್ರೆ ಮಯೂರನ ಹತ್ರ ನನ್ನ ಮೇಲೆ ಚಾಡಿ ಹೇಳಿದೀಯಲ್ಲ. ನಿನಗೇನಾಗಿದೆ? ನನಗೆ ಹೇಳ್ಬಾರ್ದಾ? ಕಾಫಿ ಕುಡಿ...."

"ನಂಗೆ ಬೇಡ..."

"ನೀನೇ ಹೀಗಾಡಿದ್ರೆ, ಮಯೂರ, ಮಂದಾರ ತಾವೇನೂ ಕಮ್ಮಿ ಅಂತ ಅವರೂ ಆಡ್ತಾರೆ... ಆಗ ನನ್ನ ಗತಿ ಏನಾಗ್ಬೇಕು ನೀನೇ ಹೇಳು..... ನನ್ನನ್ನ ವಿಚಾರಿಸೋರು ಯಾರು?"

"ರಾಜ ಇದಾನಲ್ಲ. ಅವನು ವಿಚಾರಿಸ್ಕೋತಾನೆ" ಎದೆಯ ಮಾತು ನಾಲಿಗೆಯಲ್ಲಿ ಹೊರಳಿತ್ತು. ರಾಧಾ ಚಕಿತಳಾದಳು. ಮಧುರಳ ಗಲ್ಲವನ್ನೆತ್ತಿದಳು. ಕಪಾಲಕ್ಕೆ ಹೊಡೆಯಬೇಕೆನ್ನಿಸಿತ್ತು. ಆದರೆ ತಡೆದುಕೊಂಡಳು.

"ಅವನು ವಿಚಾರಿಸಿದರೆ ನಿಂಗೇನು ಕಷ್ಟ? ನಿಂಗ್ಯಾಕೆ ಅಸೂಯೆ?"

"ಅವನೇನು ನಮ್ಮ ಮನೆಯವನಾ?..."

"ಅವನಿಂದ ನಿಂಗೇನು ತೊಂದರೆ?..."

"ಅವನು ಒಬ್ಬ ಹುಡುಗ. ಮನೆಯವರಂತೆ ಅವನು ಸ್ವತಂತ್ರವಾಗಿ ಓಡಾಡಿಕೊಂಡಿದಾನೆ. ನಾವೂ ಬೆಳೆದ ಹೆಣ್ಣು ಮಕ್ಕಳು. ನಮಗೆ ಮುಜುಗರವಾಗುಲ್ಲವೇನಮ್ಮ. ಅಪ್ಪಂಗೆ ಅಷ್ಟು ಗೊತ್ತಾಗಬೇಡ್ವಾ?" ಆ ಮಾತಿಗೆ ಏನು ಉತ್ತರ ಕೊಡಬೇಕೆಂದು ಗೊತ್ತಾಗದೇ ಪಿಳಿಪಿಳಿ ಮಗಳನ್ನೇ ನೋಡಿದಳು.

ಬೆಳೆದು ದೊಡ್ಡವಳಾಗಿರುವ ಮಗಳು. ಅವಳ ಮನಸ್ನಲ್ಲಿ ಏನೇನು ಆಲೋಚನೆಗಳು ಬರುತ್ತವೋ? ಈ ಬಗ್ಗೆ ತಾವುಗಳು ಯೋಚಿಸಲಿಲ್ಲ. ಅವನ ಸಂಬಂಧ ಏನೂಂತ ಈಗಲೇ ತಟಕ್ಕನೆ ಹೇಗೆ ಹೇಳುವುದು.... ರಾಜನ ಬಗ್ಗೆ ಇವಳ ಅಭಿಪ್ರಾಯ ಏನೂಂತ ತಿಳಿದುಕೊಳ್ಳುವುದು ಮುಖ್ಯ. ಆದರೆ ಈಗ ಬೇಡ. ಒಬ್ಬಳನ್ನೇ ಪ್ರತ್ಯೇಕವಾಗಿ ಕೂರಿಸಿಕೊಂಡು ಮಾತನಾಡಬೇಕು ಎಂದುಕೊಂಡಳು.

"ನಿಮ್ಮ ಅಪ್ಪ ಯಾವುದನ್ನು ಸರಿಯಾಗಿ ಆಲೋಚಿಸದೇ ಮುಂದುವರೆಯುವವರಲ್ಲ. ನಿಮಗೂ ಅದು ತಿಳಿದಿರಬೇಕು. ನಾನು ಆಮೇಲೆ ನಿನ್ನ ಹತ್ರ ಮಾತಾಡ್ತೀನಿ. ಈಗ ಬೇಡ... ಬಿಡು. ನಿನ್ನ ಸಂಗೀತದ ಟೀಚರ್ ಬಂದೇ ಇಲ್ವಲ್ಲಾ... ಯಾಕೆ? ಯಾವಾಗ ಬರ್ತಾರಂತೆ.?...

"ಏನೋ ನಂಗೊತ್ತಿಲ್ಲ."

"ಗೊತ್ತಿಲ್ಲ ಅಂತಂದ್ರೆ... ಕೇಳ್ಬೇಡ್ವಾ! ಪಾಠ ಮುಂದುವರೆಯುವುದು ಹೇಗೆ? ಫೋನ್ ಮಾಡ್ಲಿಲ್ವಾ?" "ಇದ್ದಕ್ಕಿದ್ದಂತೆ ಮಧುರ ಮುಖ ಮುಚ್ಚಿಕೊಂಡು ಅಳತೊಡಗಿದಳು. ರಾಧಾ ನಿಜಕ್ಕೂ ಗಾಬರಿಗೊಂಡಳು.

"ಅಳು ಅಂಥಾದ್ದು ಏನಾಯ್ತು? ಅವರು ಬೈದರೇನೇ?" ಮಗಳನ್ನು ತಬ್ಬಿಕೊಂಡು ಸಮಾಧಾನದಿಂದ ಕೇಳಿದಳು.

"ಅಮ್ಮಾ... ನಂಗೆ ಭಯ ಆಗುತ್ತಮ್ಮ.."

"ಭಯಾನಾ? ಭಯಾ ಯಾಕೆ? ಅಂಥಾದ್ದೇನಂದ್ರು ಅವರು?

"ಎರಡು ತಿಂಗಳಿಂದ ನನ್ನ ಹೊಟ್ಟೆ ಬೇರೆ ಸ್ವಲ್ಪ ದಪ್ಪಗಾಗಿದೆ. ನಾನು ಮುಟ್ಟಾಗಿಲ್ಲವಲ್ಲಮ್ಮ ಭಯ ಆಗುಲ್ವೇನಮ್ಮಾ?

"ಅದಕ್ಕೆ ಭಯ ಯಾಕೆ? ಡಾಕ್ಟರ ಹತ್ರ ಹೋಗಿ, ತೋರಿಸಿ ಕೇಳಿದರೆ ಆಯಿತು. ಮೊದಲಿಗೆ ಇದೆಲ್ಲಾ ಮಾಮೂಲು.... ಎಷ್ಟೋ ಜನ ಹುಡುಗಿಯರಿಗೆ ಹೀಗಾಗುತ್ತೆ. ಎರಡು, ಮೂರು ತಿಂಗಳಿಗೊಮ್ಮೆ ಹೊರಗಾಗ್ತಾರೆ. ಅದಕ್ಕೆಲ್ಲ ಅಳ್ತಾರಾ?"

"ಡಾಕ್ಟರು ಏನಾದ್ರೂ ಹೇಳಿಬಿಟ್ರೆ? ಆಪರೇಷನ್ ಮಾಡ್ಬೇಕು ಅಂತ ಹೇಳಿಬಿಟ್ರೆ?" ರಾಧಾ ನಕ್ಕಳು.

"ಸುಮ್‌ಸುಮ್ನೆ ಯಾವ ಡಾಕ್ಟರ್ರೂ ಆಪರೇಷನ್ನು ಮಾಡ್ಬೇಕು ಅಂತ ಹೇಳುಲ್ಲ. ಅಂಥಾದ್ದೇನಾಗಿಲ್ಲ ನಿಂಗೆ. ಚಿಗಳಿ ಮಾಡಿಕೊಡ್ತೀನಿ ತಿನ್ನು ಸರಿ ಹೋಗುತ್ತೆ. ಅಜ್ಜಿನ ಕೇಳಿದ್ರೆ ಯಾವ್ದಾದ್ರೂ ಮನೆ ಔಷಧೀನ ಹೇಳ್ತಾರೆ."

"ಬೇಡಮ್ಮ ಅಜ್ಜಿಗೆ ಮಾತ್ರ ತಿಳಿಸ್ಬೇಡ. ನನ್ನ ಡಾಕ್ಟರ ಹತ್ರ ಕರ್ಕೊಂಡು ಹೋಗು. ನಾನು ಅವರ ಹತ್ರ ಗುಟ್ಟಾಗಿ ಮಾತಾಡ್ಬೇಕು."

"ಸರಿ. ಅದಕ್ಕೇನು ಕರ್ಕೊಂಡು ಹೋಗ್ತೀನಿ. ಏಳು ಗಂಟೆಯ ಹೊತ್ತಿಗೆ ಹೋಗೋಣ."

"ಯಾರಿಗೂ ಹೇಳಬೇಡ... ಯಾಕೆ ಏನು ಅಂತ ಕೇಳಿದ್ರೆ ನನಗೆ ಇಷ್ಟವಾಗುಲ್ಲ."

"ಸರಿ ಹೇಳುಲ್ಲ...." ಮಧುರ ತಣ್ಣಗಾಗಿದ್ದ ಕಾಫಿಯನ್ನು ಕುಡಿದಳು. ರಾಧಾ ಗಂಭೀರವಾಗಿ ಯೋಚಿಸುತ್ತಾ ಹೊರಬಂದಳು.

*   *   *   *

ಡಾ॥ ಆಶಾಳೊಡನೆ ರಾಧಾ ಮಾತನಾಡಿದಳು. ಮಧುರಳ ಬಗ್ಗೆ ಹೇಳಿದಳು. ಡಾಕ್ಟರು ಅವಳನ್ನು ಒಳಗಿನ ರೂಮಿಗೆ ಕರೆದುಕೊಂಡು ಹೋಗಿ ಬಾಗಿಲನ್ನು ಹಾಕಿಕೊಂಡು ಪರೀಕ್ಷಿಸಿದಳು. ಹೆಸರು, ವಯಸ್ಸು, ಸ್ಕೂಲು ತರಗತಿಗಳ ಬಗ್ಗೆ ಕೇಳಿದಳು.

"ನಿನಗೆ ಯಾರಾದ್ರೂ ಬಾಯ್‌ಫ್ರೆಂಡ್ಸ್ ಇದಾರಾ?" ಸುಮ್ಮನೆ ಎಂಬಂತೆ ಕೇಳಿದಳು. ಇಲ್ಲ ಎನ್ನುವಂತೆ ತಲೆಯಾಡಿಸಿದಳು.

"ಗುಡ್" ಎಲ್ಲಾ ಸರಿಯಾಗಿದೆ. ನಾನು ಒಂದು ಟಾನಿಕ್ ಬರೆದು ಕೊಡ್ತೀನಿ ದಿನಾ ರಾತ್ರಿಯ ಹೊತ್ತು ಎರಡು ಚಮಚ ತಗೋ.... ಒಂದು ವಾರದಲ್ಲಿ ನಿನ್ನ ಪಿರಿಯಡ್ಸ್ ಆಗೋ ಹಾಗೆ ಮಾತ್ರೆ ಕೊಡ್ತೀನಿ. ಏನೂ ವರಿ ಮಾಡ್ಕೋಬೇಡ."

"ಡಾಕ್ಟರ್.... ನಂಗೆ ಒಂದು ಅನುಮಾನ.... ನಾನು ಪ್ರೆಗ್ನೆಂಟ್ ಆಗಿರಬಹುದಾ? ಹೊಟ್ಟೆ ಯಾಕೆ ಹೀಗೆ ದಪ್ಪಗಾಗಿದೆ."

"ಛಾನ್ಸೇ ಇಲ್ಲ. ಹುಚ್ಚು ಹುಡುಗಿ. ಹಾಗೆಲ್ಲಾ ಯೋಚಿಸಬಾರದು. ನೀನು ಗುಡ್ ಗರ್ಲ್ ಅಲ್ವಾ?....

"ಆದರೆ ನಾನು ಒಂದು ವಿಷಯಾನ ನಾನು ಯಾರಿಗೂ ಹೇಳಿಲ್ಲ ಡಾಕ್ಟ್ರೇ.... ಯಾರಾದ್ರೂ ಗಂಡಸ್ರು ಮೈ ಮುಟ್ಟಬಿಟ್ಟರೆ ಪ್ರೆಗ್ನೆಂಟ್ ಆಗಿಬಿಡ್ತಾರಂತೆ ಹೌದಾ? ಹಾಗೇನಾದ್ರೂ ಆದ್ರೆ ನಾನು ಸತ್ತು ಹೋಗ್ತೀನಿ ಅಷ್ಟೇ."

"ಹಾಗಂತ ಯಾರು ಹೇಳಿದ್ರು...? ಯಾವ ಗಂಡಸು ನಿನ್ನ ಮೈ ಮುಟ್ಟಿದ? ಏನು ವಿಚಾರ ನಡೀತು... ಅಂತ ಹೇಳಿದ್ರೆ ನಾನು ನಿಂಗೆ ಸಹಾಯ ಮಾಡ್ತೀನಿ..."

"ನಾನು ಪ್ರೆಗ್ನೆಂಟ್ ಆಗಿಬಿಟ್ಟಿದ್ರೆ..."

"ಇಲ್ಲಮ್ಮ... ಹಾಗಾಗುವ ಛಾನ್ಸೇ ಇಲ್ಲ. ಆದರೆ ಏನು ನಡೀತು ಅಂತ ನೀನು ನಂಗೆ ಹೇಳದಿದ್ರೆ ತಪ್ಪಾಗುತ್ತೆ."

"ನಮ್ಮ ತಾಯಿಗೂ ತಿಳಿಯಬಾರದು... ನನ್ನ ಸಂಗೀತದ ಟೀಚರ್ ತಮ್ಮ ಒಬ್ಬ ಇದಾನೆ. ಒಂದು ದಿನ ಅವರ ಮನೆಗೆ ಹೋಗಿದ್ದಾಗ ಏನೇನೋ ಮಾಡಿದ. ಏನೇನೋ ಮಾತಾಡಿದ. ಹೇಳುಕ್ಕೆ ಮುಜುಗರವಾಗುತ್ತೆ."

"ನನ್ನ ಹತ್ರ ಹೇಳು ಪರವಾಗಿಲ್ಲ. ನಾನು ಯಾರಿಗೂ ಹೇಳುಲ್ಲ. ನೀನ್ಯಾಕೆ ಅವರ ಮನೆಗೆ ಹೋಗಿದ್ದೆ.?

"ಟೀಚರ್ ಪುಸ್ತಕ ಕೊಡ್ತೀನಿ ಅಂತ ಹೇಳಿದ್ರು. ಅವರ ಮನೆಗೆ ಹೋದಾಗ ಅವರಿರಲಿಲ್ಲ. ಅವನೊಬ್ಬನೇ ಇದ್ದ, ಅಕ್ಕ ಬಂದುಬಿಡ್ತಾಳೆ. ಕೂತ್ಕೋ ಅಂತಂದ. ಆಮೇಲೆ ಆಮೇಲೆ ನನ್ನ ಪಕ್ಕ ಕೂತ್ಕೊಂಡು ನನ್ನ ಮೈಮೇಲೆ ಕೈಯಾಡಿಸಿದ ಇಲ್ಲೆಲ್ಲಾ ಕೈಯಾಡಿಸಿದ.... ಎಂದು ಹೇಳಿ ಎದೆಯ ಭಾಗವನ್ನು ತೊಡೆಯನ್ನು ತೋರಿಸಿದಳು. ಹೇಳುತ್ತಾ ಹೇಳುತ್ತಾ ಬೆವತು ಹೊಗಿದ್ದಳು.

"ಅವನು ಲೋಫರ್. ನೀನು ನಿನ್ನ ಟೀಚರ್‌ಗೆ ಹೇಳಬೇಕಾಗಿತ್ತು."

"ಅಷ್ಟರಲ್ಲಿ ಬಂದವರಿಗೆ, ಅವರಿಗೇ ಗೊತ್ತಾಗಿರಬೇಕು.... ನಾನು ಏನಾದರೂ ಆಡುವ ಮೊದಲೇ ಅವನು ಹೀಗೆ ವರ್ತಿಸಿದ ಅಂತ ನಿಮ್ಮ ಮನೇಲಿ ಯಾರಿಗೂ ಹೇಳಬೇಡ ಅಂತ ಆಣೆ ಹಾಕಿದರು."

"ನೀನು ಸುಮ್ಮನಾಗಿ ಬಿಟ್ಟೆಯಾ? ನೀನು ತಪ್ಪು ಮಾಡಿದೆ."

"ಆಗ ನಾನು ಹೆದರಿದ್ದೆ... ಯಾರಿಗೂ ಹೇಳಲಿಲ್ಲ. ಈಗ ಹೇಳಿದರೆ ಅಮ್ಮ ಖಂಡಿತಾ ಬೈತಾಳೆ. ಅವನು ನನ್ನ ಮೈ ಮುಟ್ಟಿಬಿಟ್ಟಿದಾನೆ.... ಈಗ ನನ್ನ ಭಯ ಇನ್ನೂ ಹೆಚ್ಚಾಗಿದೆ."

"ಬರೀ ಮೈ ಮುಟ್ಟಿದರೆ ಪ್ರೆಗ್ನೆಂಟ್ ಆಗಲು ಸಾಧ್ಯವಿಲ್ಲ. ನಿಜವಾಗಿಯೂ ಇಷ್ಟೇ ನಡೆದಿದ್ದರೆ, ನೀನು ಸೇಫ್ ಇಲ್ಲದಿದ್ದರೆ...."

"ಇಲ್ಲ ನಡೆದದ್ದು ಇಷ್ಟೇ. ಅಷ್ಟರಲ್ಲಿ ಟೀಚರ್ ಬಂದರು. ಆಮೇಲೆ ಅವರು ಮನೆಗೂ ಪಾಠಕ್ಕೆ ಬಂದಿಲ್ಲ. ನಾನೂ ಮತ್ತೆ ಮುಟ್ಟಾಗಿಲ್ಲ, ಈಗೊಂದು ವಾರದಿಂದ ನನಗೆ ಈ ಭಯ ಪ್ರಾರಂಭ ಆಗಿದೆ."

"ಖಂಡಿತಾ ನೀನು ಪ್ರೆಗ್ನೆಂಟ್ ಆಗಿಲ್ಲ. ಒಂದು ವಾರದೊಳಗೆ ನೀನು ಮತ್ತೆ ಮುಟ್ಟಾಗ್ತೀಯ. ಆದರೆ ನೀವು ಹುಡುಗಿಯರು ಎಚ್ಚರಿಕೆಯಿಂದ ಇರಬೇಕು. ಯಾರನ್ನೂ ನಂಬಬಾರದು..."

"ಈಗ ನಮ್ಮ ಮನೆಗೆ ಒಬ್ಬ ಹುಡುಗ ಬಂದು ಸೇರಿಕೊಂಡಿದಾನ. ನನಗೆ ಅವನ ಮೇಲೂ ಅನುಮಾನ ಬರುತ್ತೆ. ಆದರೆ ಅವನು ಚಿಕ್ಕವನು. ಅಲ್ಲದೆ ಒಳ್ಳೆಯವನು."

"ಯಾರವನು? ನಿನಗೇನಾಗಬೇಕು?"

"ನಮ್ಮ ತಂದೆಯ ಸ್ನೇಹಿತನ ಮನೆಯವನು. ಅವನಿಗೆ ತಂದೆತಾಯಿ ಇಲ್ಲವಂತೆ. ಅಪ್ಪ ಅಮ್ಮಂಗೆ ಅವನ ಬಗ್ಗೆ ಅಭಿಮಾನ ನನಗೆ ಅದು ಸರಿಹೋಗ್ತಿಲ್ಲ. ಅಲ್ಲದೇ ಭಯವೂ ಆಗುತ್ತೆ. ಅವನ್ಯಾಕೆ ನಮ್ಮ ಮನೆಲಿದಾನೋ ಗೊತ್ತಿಲ್ಲ. ನನ್ನ ತಂಗಿ ಅವನೊಡನೆ ಸಲುಗೆಯಿಂದ ಮಾತಾಡ್ತಾಳೆ. ಅವಳಿಗೆ ಹೇಗೆಹೇಳೋದು?"

"ಅವನೆಂದಾದ್ರೂ ನಿನ್ನ ಮೈಮುಟ್ಟಲು ಬಂದಿದ್ನಾ?"

"ಇಲ್ಲ ನಾನು ಅವನ ಹತ್ರ ಹೆಚ್ಚು ಮಾತನ್ನಾಡಿಲ್ಲ. ಒಳ್ಳೆಯವನ ಥರ ಕಾಣ್ತಾನೆ. ಆದರೂ ಭಯ ಆಗುತ್ತೆ.

"ನಾನು ನಿನ್ನ ತಾಯಿಯ ಹತ್ರ ಮಾತಾಡ್ತೀನಿ."

"ಬೇಡ ಡಾಕ್ಟರ್. ನಾನು ರಾಜನ ಬಗ್ಗೆ ನಿಮಗೆ ಹೇಳಿದೆ ಅಂತ ಅಮ್ಮಂಗೆ ತಿಳಿಯಬಾರದು. ಹಾಗೇ ನಾನು ಹೇಳಿದ್ದನ್ನು ಹೇಳಬೇಡಿ."

"ಇಲ್ಲ ಹೇಳುಲ್ಲ. ಹೆದರಬೇಡ. ನಾನು ನಿನ್ನ ಎದುರಿಗೇ ನಿನ್ನ ತಾಯಿಯ ಹತ್ರ ಮಾತಾಡ್ತೀನಿ." ಅವರೇ ರಾಜನ ಬಗ್ಗೆ ಹೇಳಬಹುದು. ಹೊರಕ್ಕೆ ಹೋಗೋಣ" ಎನ್ನುತ್ತಾ ಬಾಗಿಲನ್ನು ತೆರೆದಳು. ಚಡಪಡಿಕೆಯಿಂದ ಕಾಯುತ್ತಿದ್ದ ರಾಧಾ ಆತಂಕದಿಂದ ಆಕೆಯನ್ನೇ ನೋಡಿದಳು. ಆಕೆ ಮುಗುಳ್ನಕ್ಕು ಇಬ್ಬರನ್ನು ಕುಳಿತುಕೊಳ್ಳುವಂತೆ ಹೇಳಿದಳು.

"ನಿಮ್ಮ ಮನೆಯಲ್ಲಿ ಯಾರ್‍ಯಾರಿದೀರಿ...?" ಎನ್ನುತ್ತಾ ಮಾಹಿತಿಯನ್ನು ಪಡೆದಳು. "ನಿಮ್ಮ ಮಗಳು ಇನ್ನು ಚಿಕ್ಕವಳು. ದೇಹ ನಾಜೂಕಾಗಿದೆ. ಬೆಳವಣಿಗೆ ಇನ್ನೂ ಪೂರ್ಣವಾಗಿರುಲ್ಲ. ದೇಹದ ಒಳಗೆ ನಡೆಯುವ ಕ್ರಿಯೆಗಳು ಒಬ್ಬರಿಗೆ ಇದ್ದಂತೆ ಇನ್ನೊಬ್ಬರಿಗಿರುವುದಿಲ್ಲ. ಎಷ್ಟೋ ವೇಳೆ ಅದಕ್ಕೆ ಮನೆಯ ವಾತಾವರಣ, ಸ್ಕೂಲು, ವಿದ್ಯಾಭ್ಯಾಸ, ಸ್ನೇಹಿತರು ಎಲ್ಲವೂ ಕಾರಣವಾಗುತ್ತದೆ. ಮಧುರ ಬೇರೆ ಎಲ್ಲಾ ರೀತಿಯಿಂದಲೂ ಆರೋಗ್ಯವಾಗಿದಾಳೆ. ತಿಂಗಳಿನ ಮುಟ್ಟು ಸರಿಯಾಗುವಂತೆ ಮಾತ್ರೆಗಳನ್ನು ಟಾನಿಕ್‌ನೂ ಕೊಡಬೇಕು. ಬರೆದುಕೊಡ್ತೀನಿ. ನಿಮಗೆ ಬರೀ ಮೂರು ಜನ ಹೆಣ್ಣು ಮಕ್ಕಳು ಅಂತ ಹೇಳಿದ್ರಿ.... ಅವರುಗಳ ವಯಸ್ಸು ಎಷ್ಟು?"

"ಮಯೂರ, ಒಂದುಕಾಲು ವರ್ಷಕ್ಕೆ ಚಿಕ್ಕವಳು. ಅವಳ ತಂಗಿ ಮಂದಾರ ನಾಲ್ಕು ವರ್ಷಕ್ಕೆ ಚಿಕ್ಕವಳು."

"ಮಧುರ, ಮಯೂರ, ಮಂದಾರ, ಹೆಸರುಗಳು ಸೊಗಸಾಗಿವೆ. ಗಂಡು ಮಗು ಹುಟ್ಟಿದರೆ, ಅವನಿಗೂ ಮಕಾರದಿಂದ ಹೆಸರನ್ನಿಡುತ್ತಿದ್ರಾ?"

"ಹುಂ ಅಂತ ಕಾಣುತ್ತೆ. ಆದರೆ ಗಂಡು ಮಕ್ಕಳಾಗಲೇ ಇಲ್ಲವಲ್ಲ."

"ಅದರ ಬಗ್ಗೆ ನಿಮಗೆ ಬೇಸರ ಅಂತ ಅನ್ನಿಸುತ್ತಾ?"

"ಬೇಸರವೇನಿಲ್ಲ. ಆದರೆ ಒಮ್ಮೊಮ್ಮೆ ಕೊರತೆ ಅಂತನ್ನಿಸುತ್ತೆ. ಈ ಕಾಲದಲ್ಲಿ ಗಂಡಾದರೇನು, ಹೆಣ್ಣಾದರೇನು ಎಲ್ಲಾ ಒಂದೇ ಅಂತ ನನಗೆ ನಾನೇ ಸಮಾಧಾನ ಹೇಳಿಕೊಳ್ತೀನಿ. ನಮ್ಮ ಅತ್ತೆಗೆ ಮಾತ್ರ ತುಂಬಾ ಬೇಸರ.... ಒಮ್ಮೊಮ್ಮೆ ಅವರ ಸಮಾಧಾನಕ್ಕೋಸ್ಕರವಾದ್ರೂ ಒಂದು ಗಂಡು ಮಗುವನ್ನು ದತ್ತು ತೆಗೆದುಕೊಳ್ಳಬೇಕೆಂದು ಮಾತಾಡಿಕೊಳ್ತೀವಿ."

"ಐ.ಸೀ... ಆ ಆಸೆ ಈಗ್ಲೂ ಇದೆಯಾ?"

"ಆಸೆ ಅಂತಲ್ಲ. ಒಬ್ಬ ಅಣ್ಣನೋ ತಮ್ಮನೋ ಇವರುಗಳ ಜೊತೆಯಲ್ಲಿದ್ದರೆ ಚೆನ್ನ ಅಂತ ಅನ್ನಿಸುತ್ತೆ.."

"ಒಂದೋ, ಎರಡೋ ಮಕ್ಕಳು ಸಾಕು ಎನ್ನುವ ಈ ಕಾಲದಲ್ಲಿ ಹೀಗೆ ಯೋಚಿಸ್ತೀರಾ?"

"ಮಕ್ಕಳು ನಮ್ಮವರೇ ಆದಾಗ, ಲೆಖ್ಖದ ಪ್ರಶ್ನೆ ಹೇಗೆ? ಎಲ್ಲರನ್ನು ಒಂದೇ ಥರ ಸಾಕ್ತೀವಿ."

"ಹಾಗಾದ್ರೆ ಅನಾಥಾಶ್ರಮದಿಂದ ಯಾವುದಾದರೂ ಒಂದು ಗಂಡು ಮಗುವನ್ನು ತಂದು ಹಾಕುವ ಆಲೋಚನೆಯಲ್ಲಿದ್ದೀರಾ? ಒಬ್ಬ ಅನಾಥ ಮಗುವಿಗೆ ತಂದೆತಾಯಿ ಸಿಕ್ಕಂತಾಗುತ್ತದೆ. ಜೀವನ ರೂಪುಗೊಳ್ಳುತ್ತದೆ. ಭವಿಷ್ಯ ಚೆನ್ನಾಗುತ್ತದೆ."

ರಾಧಾ ಮಧುರಳ ಕಡೆ ನೋಡಿದಳು. ಅವಳು ಕತ್ತು ಬಗ್ಗಿಸಿ ಕುಳಿತಿದ್ದಳು. ರಾಧಾ, ರಾಜನ ಬಗ್ಗೆ ಹೇಳಿದಳು. "ಹುಡುಗ ತಬ್ಬಲಿ. ನಮ್ಮ ಪರಿಚಯದವರ ಮನೆಯಲ್ಲಿ ಬೆಳೆದವನು... ಅವನನ್ನೇ ನಮ್ಮ ಮಗನಂತೆ ಸಾಕಿಕೊಳ್ಳುವ ಆಲೋಚನೆ ಇದೆ."

"ಹುಡುಗ ದೊಡ್ಡವನು ಅಂತೀರ... ಅವನ ನಡತೆ ಸ್ವಭಾವ ಎಲ್ಲಾ ಹೇಗೆ? ಹೊಂದಿಕೊಂಡು ಹೋಗ್ತಾನಾ?"

"ಹೂಂ. ಯಾವುದೂ ಸಮಸ್ಯೆ ಇಲ್ಲ. ಈಗ್ಗೆ ಎರಡು ತಿಂಗಳಿಂದ ನಮ್ಮ ಮನೇಲೇ ಇದಾನೆ. ಇವಳಿಗೂ ಗೊತ್ತು ಕೇಳಿ."

"ಹುಡುಗಿಯರು ಬೆಳೆದಿದಾರೆ. ಅವರಿಗೆ ಮುಜುಗರವಾಗೋದಿಲ್ವಾ?"

"ಮುಜುಗರ ಪಟ್ಕೊಂಡ್ರೆ ಮುಜುಗರ ಆಗುತ್ತೆ. ನಾವೆಲ್ಲಾ ದೊಡ್ಡ ಕುಟುಂಬದಲ್ಲಿ ಬೆಳೆದವರು. ಒಟ್ಟಾಗಿ ಆಟವಾಡಿಕೊಂಡು ಬೆಳೆದವು. ಯಾವುದೂ ಮುಜುಗರ ಎನಿಸುತ್ತಿರಲಿಲ್ಲ. ಇಲ್ಲಿ ನಮ್ಮ ಮನೆಯಲ್ಲೂ ಬರೋರು ಹೋಗೋರು ಇದ್ದೇ ಇರ್ತಾರೆ. ಇದುವರೆಗೂ ಹೆಣ್ಣು ಮಕ್ಕಳು ಚಿಕ್ಕವರಾಗಿದ್ರು. ಈಗ ಇವಳು ಮೈನೆರೆದಿದಾಳೆ. ಇವಳಿಗೊಬ್ಬ ಅಣ್ಣ ಇದ್ದಿದ್ದರೆ... ಯಾವ ಮುಜುಗರ ಇರುತ್ತಿತ್ತು? ಈಗಲೂ ಹಾಗೇ ಅಂದ್ಕೊಂಡ್ರೆ ಸಾಕು."

"ಹೌದು. ನೀವು ಹೇಳೋದು ಸರಿ. "ಡಾಕ್ಟರು ತಲೆಯಾಡಿಸಿದಳು. ಓರೆಗಣ್ಣಿನಿಂದ ಮಧುರಳ ಕಡೆ ನೋಡಿದಳು. ಅವಳ ಮುಖದಲ್ಲಿ ಯಾವ ಅಸಮಾಧಾನದ ಛಾಯೆ ಇರಲಿಲ್ಲ. ಆದರೆ ಗೊಂದಲಕ್ಕೊಳಗಾದಂತಿತ್ತು.

ರಾಧಾ ಮುಂದುವರೆಸಿದಳು. "ಈ ಮುಂಚೆ ದತ್ತು ತೆಗೆದುಕೊಳ್ಳುವ ಬಗ್ಗೆ ಗಂಭೀರವಾಗಿ ಯೋಚಿಸಿರಲಿಲ್ಲ. ಈಗ ರಾಜ ಮನೆಗೆ ಬಂದು

ಸೇರಿಕೊಂಡಮೇಲೆ, ನಮ್ಮ ಅತ್ತೆಗೆ ಮೊಮ್ಮಗ ಬೇಕೆಂದು ಎನಿಸಿದೆ. ನನ್ನ ಗಂಡನಿಗೂ ಒಪ್ಪಿಗೆ ಇದೆ. ನನಗೂ ನನ್ನ ಹೆಣ್ಣು ಮಕ್ಕಳಿಗೆ ಒಬ್ಬ ಸೋದರನಿರಲಿ ಎಂದು ಅನ್ನಿಸುತ್ತೆ. ಆದರೂ ಹೆಣ್ಣು ಮಕ್ಕಳ ಒಪ್ಪಿಗೆಯಿಲ್ಲದೇ ನಾವು ಮುಂದುವರೆಯುವುದಿಲ್ಲ. ಮಂದಾರ ಚಿಕ್ಕವಳು ಅವಳಿಗೆ ಏನೂ ತಿಳಿಯದ ವಯಸ್ಸು. ಇವರಿಬ್ಬರೂ ದೊಡ್ಡವರು. ಆದರೂ ಏನನ್ನು ಸರಿಯಾಗಿ ನಿರ್ಧರಿಸಲಾಗದ ವಯಸ್ಸು. ಆದರೆ ದಿನ ಕಳೆದಂತೆ ಬೇರೆ ಬೇರೆ ಸಮಸ್ಯೆಗಳು ಹುಟ್ಟುತ್ತವೆ. ಈಗ ಒಂದು ಚಿಕ್ಕ ಮಗುವನ್ನು ತೆಗೆದುಕೊಂಡು ಬೆಳೆಸಿ ದೊಡ್ಡವನನ್ನಾಗಿ ಮಾಡುವುದಕ್ಕಿಂತ ಬೆಳೆದ ಹುಡುಗನನ್ನೇ ದತ್ತು ತೆಗೆದುಕೊಂಡರೆ ಬೇಗ ನಮ್ಮ ಕೈಗೆ ಬರ್ತಾನೆ.” ರಾಧಾ ಬಲವಂತವಾಗಿ ನಕ್ಕಳು.

“ಅದಕ್ಕೆ ನಿಮ್ಮ ರಾಜನ... ಅಂದರೆ, ಆ ಹುಡುಗನ ಒಪ್ಪಿಗೆ ಇದೆಯಾ? ಬರೀ ರಾಜನೋ ರಾಜಕುಮಾರನೋ... ರಾಜಶೇಖರನೋ...

“ರಾಜ ಅವನನ್ನು ಕರೆಯುವ ಹೆಸರು, ನಿಜವಾದ ಹೆಸರು ಮನೋಹರ ಅಂತ.”

“ಓ.... ನಿಮ್ಮ ಮನೆಗೆ ಹೊಂದುವ ಮಕಾರದಿಂದ ಪ್ರಾರಂಭವಾಗುವ ಹೆಸರು. ಹೆಸರು ಚೆನ್ನಾಗಿದೆ. ನೋಡಲು ಹೇಗಿದಾನೆ? ನಿಮ್ಮ ಮಗಳ ಹಾಗೇ ಮುದ್ದಾಗಿದಾನೋ?” ಮಧುರಳನ್ನು ಮೆಚ್ಚುಗೆಯಿಂದ ನೋಡಿದಳು. ಅವಳ ಮುಖ ಅರಳಿತು.

“ಇಲ್ಲ.... ತೆಳ್ಳತೆಳ್ಳಗೆ ಇದಾನೆ. ಸಾಧಾರಣ ರೂಪು. ಆದರೆ ಚುರುಕಾಗಿದಾನೆ. ತಬ್ಬಲಿ ಅನ್ನೋ ಮನೋಭಾವ ಹೋದರೆ, ಅವನೂ ಗುಂಡುಗುಂಡಗೆ ಆಗಬಹುದು. ಅವನ ತಂದೆತಾಯಿ ಹೇಗಿದ್ರೋ ತಿಳಿಯದಲ್ಲ.”

“ಪರಿಚಯದವರ ಮನೆ ಹುಡುಗ ಅಂತ ಹೇಳಿದ್ರಿ. ಅವರು ಹೇಳಲಿಲ್ವಾ!”

“ಇಲ್ಲ. ನಾವು ಕೇಳಲಿಲ್ಲ. ನಮಗೆ ಅದು ಅವಶ್ಯಕ ಎನಿಸಲಿಲ್ಲ. ಕೇಳಿದರೆ ತಿಳಿಯುತ್ತೆ ಹುಡುಗ ಏನಂತಾನೆ?” ಮಗಳ ಕಡೆ ನೋಡಿ, ಮಾತನ್ನು ಮುಂದುವರೆಸಿದಳು.

"ಅವನಿಗೂ ಹಲವಾರು ಸಂದೇಹಗಳು. ಆದರೂ, ನಮ್ಮ ಮನೆಯ ವಾತಾವರಣ ಅವನಿಗೆ ಹಿಡಿಸಿದೆ. ಅಜ್ಜಿಯ ಬಗ್ಗೆ ಗೌರವವಿದೆ. ನಮ್ಮಿಬ್ಬರ ಬಗ್ಗೆ ವಿಶ್ವಾಸವಿದೆ. ತಂಗಿಯರ ಬಗ್ಗೆ ಪ್ರೀತಿ ಇದೆ...

"ಹಾಗಾದ್ರೆ ಎಲ್ಲಾ ನಿರ್ಧಾರವಾಗಿದೆ...

"ಹೌದು. ಆದಷ್ಟು ಬೇಗ ನಿರ್ಧರಿಸಲೇಬೇಕಾಯ್ತು. ಇನ್ನೊಂದೆರಡು ದಿನಗಳಲ್ಲಿ ಅವನಿಗೆ ಹದಿನೆಂಟು ವರ್ಷಗಳು ತುಂಬಿಬಿಡುತ್ತೆ. ಆ ನಂತರ ಕಾನೂನಿನ ಪ್ರಕಾರ ದತ್ತು ತೆಗೆದುಕೊಳ್ಳಲಾಗುವುದಿಲ್ಲ. ಅದೇ ಸಮಸ್ಯೆ."

"ಹಾಗಾದ್ರೆ ಬೇಗ ಆ ಕ್ರಿಯೆಯನ್ನು ಮುಗಿಸುವುದು ಒಳ್ಳೆಯದು. ಏನಮ್ಮ ಮಧುರ ಏನಂತೀಯಾ?"

"ನಾನೇನು ಹೇಳ್ಲಿ ಆಂಟೀ."?

"ಆಂಟಿಯಲ್ಲ. ಡಾಕ್ಟರ್ರು. ನೀನೀಗ ದೊಡ್ಡವಳು. ಹಿರಿಮಗಳು. ನಿನ್ನ ಒಪ್ಪಿಗೆ ಇದ್ದರೆ, ನಿನ್ನ ತಂಗಿಯರೂ ಒಪ್ಪುತ್ತಾರೆ. ನಿಮಗೆಲ್ಲ ಒಬ್ಬ ಹಿರಿಯಣ್ಣ ಬೇಕೋ ಬೇಡವೋ...?"

"ಗೊತ್ತಿಲ್ಲ ಡಾಕ್ಟ್ರೇ...."

"ನಮ್ಮ ಅತ್ತೆಯಂತೂ ತುಂಬಾ ಸಂತೋಷದಿಂದ ಒಪ್ಪಿಕೊಡಿದಾರೆ. ನನ್ನ ಮಗಳು ಮೈನೆರೆದ ದಿನವೇ ಆ ಹುಡುಗ ನಮ್ಮ ಮನೆಗೆ ಬಂದು ಸೇರಿಕೊಂಡು. ಆ ಗಳಿಗೆ ತುಂಬಾ ಒಳ್ಳೆಯದು. ಮೊಮ್ಮಗ್ರ ಸಿಕ್ಕಿದ ಅಂತ ಬಹಳ ಖುಷಿಯಿಂದ ಇದಾರೆ."

"ನಿಮ್ಮ ಅತ್ತೆ ಗ್ರೇಟ್ ಲೇಡಿ. ಉದಾರವಾದ ಮನಸ್ಸು."

ಅದಕ್ಕೆ ಬೇರೆಯೇ ಕಾರಣವಿದೆ ಅಂತ ಹೇಳಬೇಕೆಂದುಕೊಂಡರೂ ಮಧುರಳ ಎದುರಿಗೆ ಹೇಳಲಾಗಲಿಲ್ಲ.

"ನಮ್ಮ ಅಜ್ಜಿ ತುಂಬಾ ಮಡಿ ಡಾಕ್ಟ್ರೇ. ನಮಗೆಲ್ಲಾ ಎಷ್ಟೋ ಸಾರಿ ಅವರ ಮೇಲೆ ಕೋಪ ಬರುತ್ತೆ. ಆದರೆ ಇವನನ್ನು ಹೇಗೆ ಒಪ್ಪಿಕೊಂಡರೋ ಆಶ್ಚರ್ಯವಾಗುತ್ತೆ."

"ರಾಜ ಅಜ್ಜಿಗೆ ಬಹಳ ಸಹಾಯ ಮಾಡಿದಾನೆ. ಮೆಚ್ಚುಗೆ ಗಳಿಸಿದಾನೆ ಅಷ್ಟೇ."

"ನಾವೂ ಸಹಾಯ ಮಾಡಿದೀವಿ. ಆದರೆ ಅಜ್ಜಿ ಎಂದೂ ಹೊಗಳಿಲ್ಲ."

"ಆದರೆ, ಈಗ, ನಿನ್ನ ನಕ್ಷತ್ರದ ಬಲದಿಂದ, ಮನೆಗೊಬ್ಬ ಮೊಮ್ಮಗ ಬಂದ ಅಂತ ಸಂಭ್ರಮದಲ್ಲಿದ್ದಾರೆ. ಇವಳು ಮೈನೆರೆದಾಗ, ಅವರ ಇಷ್ಟದಂತೆಯೇ ಆರತಕ್ಷತೆಯ ಸಮಾರಂಭ ಮಾಡಿದ್ದು. ಅದೇ ದಿನವೇ ರಾಜ ನಮ್ಮ ಮನೆಗೆ ಬಂದದ್ದು."

"ಓ... ಹಾಗಾದರೆ ಮೊಮ್ಮಗಳಿಗೆ ಅಜ್ಜಿ ಕಡೆಯಿಂದ ಉಡುಗೊರೆ. ಅಣ್ಣಂದಿರು ಅಷ್ಟು ಸುಲಭವಾಗಿ ಸಿಗುಲ್ಲ ಮಧುರ. ನೀನು ಅದೃಷ್ಟವಂತೆ. ಸುನಾಯಾಸವಾಗಿ ನಿಮ್ಮ ಮನೆಗೇ ನೇರವಾಗಿ ನಿಮ್ಮ ಅಣ್ಣನಾಗಿ ಬಂದಿದಾನೆ. ಈ ಸಾರಿಯ "ರಕ್ಷಾಬಂಧನ"ದ ಹಬ್ಬದಲ್ಲಿ ನೀವು ಮೂರು ಜನ ತಂಗಿಯರೂ 'ರಾಖಿ'ಯನ್ನೂ ಕಟ್ಟಿ ಹಾಗೆ ಉಡುಗೊರೆಯನ್ನು ಕೇಳಿ ತೆಗೆದುಕೊಳ್ಳಿ ಮರೆಯಬೇಡಿ...ಗುಡ್‌ಲಕ್" ಎಂದು ಹೇಳಿ ಪ್ರಿಸ್ಕ್ರಿಪ್ಷನ್ ಬರೆದುಕೊಟ್ಟು ವಿವರವನ್ನು ಹೇಳಿದಳು.

"ಏನೂ ವರಿ ಮಾಡ್ಕೋಬೇಡ ಮಧುರ. ಎಲ್ಲಾ ರೀತಿಯಿಂದಲೂ ಆರೋಗ್ಯವಾಗಿದೀಯ. ಈಗೊಬ್ಬ ಅಣ್ಣನೂ ಸಿಕ್ಕಿದಾನೆ.ಇನ್ನೂ ನಿನಗೆ ಯಾರ ಭಯವೂ ಇರುವುದಿಲ್ಲ. ಮುಂದಿನವಾರ ಬರುವಾಗ ನಿನ್ನ ಅಣ್ಣನನ್ನು ಕರೆದುಕೊಂಡು ಬಾ. ನಾನೂ ನೋಡಿದಂತಾಗುತ್ತದೆ."

"ಆಗ್ಲಿ ಡಾಕ್ಟರ್" ಮಧುರ ತಲೆಯಾಡಿಸಿದಳು. ಅವಳ ಹೃದಯ ಹಗುರವಾಗಿತ್ತು. ಸದ್ಯ ತನಗೇನೂ ತೊಂದರೆ ಆಗಿಲ್ಲ. ಇನ್ಮೇಲೆ ಯಾರಾದ್ರೂ ನನ್ನ ಮೈಮುಟ್ಟಿದರೆ, ನನ್ನ ರಕ್ಷಣೆಗೆ ನಮ್ಮ ರಾಜ ಇರ್ತಾನೆ... ಆದ್ರೂ ಈ ನಿರ್ಧಾರದ ಹಿಂದೆ ಏನೋ ರಹಸ್ಯ ಇದ್ದ ಹಾಗೆ ಅನ್ನಿಸುತ್ತೆ. ಅಮ್ಮನ್ನ ಕೇಳಿದ್ರೆ ಹೇಳಲ್ಲ. ರಾಜನನ್ನೇ ಪೀಡಿಸಿ ಕೇಳಿ ತಿಳಿದುಕೊಳ್ತೀನಿ." ತನ್ನಲ್ಲೇ ಅಂದುಕೊಂಡಳು.

ಇಬ್ಬರೂ ಕ್ಲಿನಿಕ್‌ನಿಂದ ಹೊರಬಂದು ರಿಕ್ಷಾ ಹತ್ತಿದರು. ಮನೆಗೆ ಬರುವ ಹೊತ್ತಿಗೆ ಸಾಕಷ್ಟು ಸಮಯವಾಗಿತ್ತು.

"ಎಲ್ಲಿಗೆ ಹೋಗಿದ್ರಿ ಇಬ್ರೂ? ಇವಳನ್ನು ಕೇಳಿದ್ರೆ ಗೊತ್ತಿಲ್ಲ ಅಂತ ಹೇಳಿದ್ಲು ಅವಳು ನೋಡಿದ್ರೆ ಅಳ್ತಾ ಇದಾಳೆ" ಅಜ್ಜಿಯ ಮಾತುಗಳನ್ನು ಕೇಳಿ ಮಧುರ ಹಗುರವಾಗಿ ನಕ್ಕು ಮಯೂರಳ ಕಡೆ ನೋಡಿ ಕಣ್ಣು ಸಂಜ್ಞೆಯಲ್ಲಿ ಅವಳನ್ನು ಕರೆದಳು.

"ತುಂಬಾ ಮಾತನಾಡೋದಿದೆ. ಒಂದು ಸ್ವಾರಸ್ಯವಾದ ಸುದ್ದಿಯನ್ನು ಹೇಳ್ತೀನಿ ಬಾ" ತಂಗಿಯ ಕೈಹಿಡಿದು ಅವಳನ್ನು ಮುಂದಿನ ರೂಮಿಗೆ ಕರೆದೊಯ್ದಳು.

"ಏನೇ ಅದು? ಡಾಕ್ಟರರ ಹತ್ರ ಹೋಗಿದ್ಯಾ! ಅವರೇನಂದ್ರು! ಹೊಟ್ಟೆನೋವಿಗೆ ಔಷಧಿ ಬರೆದುಕೊಟ್ರಾ?"

"ಹುಂ.. ಅದಲ್ಲ ಬೇರೇನೇ ವಿಷಯ" ಅವರಿಬ್ಬರನ್ನೇ ಗಮನಿಸುತ್ತಿದ್ದ ಮಂದಾರ ಓಡಿಬಂದಳು.

"ಅದೇನೇ ಗುಟ್ಟು? ಅಮ್ಮ ಏನು ಕೊಡಿಸಿದ್ದು ನಿಂಗೆ?"

"ಸುಮ್ನೆ ಹೋಗೇ... ನಿನ್ನನ್ಯಾರೂ ಇಲ್ಲಿ ಕರೀಲಿಲ್ಲ." ಮಯೂರ ತಂಗಿಯನ್ನು ತಳ್ಳಿದಳು.

"ನೋಡಮ್ಮ. ಇವಳು ಹೇಗಾಡ್ತಾಳೆ..?"

"ಮಂದಾರ, ಮಯೂರ ಇಬ್ರೂ ಇಲ್ಲಿ ಬನ್ನಿ. ಅವಳನ್ನ ಸುಮ್ನೆ ಗೋಳು ಹುಯ್ಕೋಬೇಡಿ. ಡಾಕ್ಟರು ಅವಳಿಗೆ ರೆಸ್ಟ್ ಹೇಳಿದಾರೆ." ರಾಧಾ ಬಂದು ಇಬ್ಬರನ್ನೂ ಹಿಂದಕ್ಕೆ ಎಳೆದಳು.

"ಆಮೇಲೆ ಬಾ..." ಮಧುರ ಪಿಸುದನಿಯಲ್ಲಿ ಹೇಳಿ, ರೂಮಿನೊಳಕ್ಕೆ ಸೇರಿಕೊಂಡು ಬಾಗಿಲನ್ನು ಹಾಕಿಕೊಂಡಳು. ಕನ್ನಡಿಯ ಮುಂದೆ ನಿಂತು ತನ್ನನ್ನು ತಾನೇ ಅವಲೋಕಿಸಿಕೊಂಡಳು. ತನಗೇನೂ ಆಗಿಲ್ಲ ಅಂತ ಡಾಕ್ಟರು ಹೇಳಿದರು. ಆದರೂ ಹೊಟ್ಟೆ ಸ್ವಲ್ಪ ದಪ್ಪಗಿದೆ. ಅದು ಕರಗಬೇಕು. ಪಿರಿಯಡ್ಸ್ ಸರಿಯಾಗಿ ತಿಂಗಳು ತಿಂಗಳಿಗೆ ಆದರೆಹೊಟ್ಟೆ ಇರುವುದಿಲ್ಲ ಎಂದರು ಡಾಕ್ಟರು. ಅಬ್ಬಾ ಎಷ್ಟು ಹೆದರಿಬಿಟ್ಟಿದ್ದೆ ನಾನು...! ಆ ಟೀಚರ್ ತಮ್ಮ ಒಬ್ಬ ಅಯೋಗ್ಯ... ಹತ್ತಿರ ಕೂತು ಮೈ ಸವರಿದ. ಥೂ ಅಸಹ್ಯ... ತಾನು ರಾಜನ ಬಗ್ಗೆಯೂ ಏನೇನೋ ಅಂದ್ಕೊಂಡೆ. ರಾಜ ಒಳ್ಳೆಯ ಹುಡುಗ ಒಂದು ದಿನವೂ ಹತ್ತಿರ ನಿಂತು ಮಾತನಾಡಿದವನಲ್ಲ. ಆದರೂ ತಾನು ಅವನ ಬಗ್ಗೆ ಹೆದರಿದ್ದೆ. ಆದರೆ ಇನ್ನು ಮುಂದೆ ಅವನು ಅಣ್ಣನಾಗುತ್ತಾನೆ. ಯಾವ ಭಯವೂ ಇರುವುದಿಲ್ಲ. ನಮಗೊಬ್ಬ ಅಣ್ಣ ಇದಾನೆ ಅಂತ ಹೆಮ್ಮೆಯಿಂದ ಹೇಳಿಕೊಳ್ಳಬಹುದು. ಆದರೆ ಆ ಭಾವನೆ ತತ್‌ಕ್ಷಣಕ್ಕೆ ಬರಲು ಸಾಧ್ಯವೇ? ಅವನು ಹುಡುಗ ನಾನು ಹುಡುಗಿ ಸ್ಕೂಲಿನಲ್ಲಿ ಹುಡುಗಹುಡುಗಿಯರು ಒಟ್ಟಾಗಿ ನಿಂತು ಪ್ರಾರ್ಥನಾ ಗೀತೆ ಹಾಡ್ತೀವಿ.... ಒಂದೇ ತರಗತಿಯಲ್ಲಿ ಕುಳಿತುಕೊಳ್ತೀವಿ. ಅಗತ್ಯವಿದ್ದಾಗ ಮಾತೂ ಆಡ್ತೀವಿ. ಅದೇ ಭಾವನೆಯನ್ನು

ಬೆಳೆಸಿಕೊಳ್ಳಬೇಕು. ಇದೇ ವಿಷಯವನ್ನು ಮಯೂರಳ ಹತ್ರ ಮಾತ್ನಾಡಬೇಕಾಗಿತ್ತು. ಆ ಕೋತಿ ಮಂದಾರ ಬಂದು ಎಲ್ಲವನ್ನು ಕೆಡಿಸಿಬಿಟ್ಟಳು.

ಓರೆ ಮಾಡಿದ್ದ ಬಾಗಿಲನ್ನು ಸರಿಸಿಕೊಂಡು ಮಯೂರ ಒಳಬಂದು ಬಾಗಿಲನ್ನು ಭದ್ರಪಡಿಸಿ ನಕ್ಕಳು.

"ಆ ಕೋತಿ, ಆ ಬ್ರಹ್ಮಚಾರಿ ಜತೆ ಕೂತ್ಕೊಂಡು ಹಲ್ಲು ಕಿರೀತಾ ಮಾತಾಡ್ತಿದೆ. ಸರಿಯಾಗಿದೆ ಇಬ್ಬರ ಜೋಡಿ."

"ಬ್ರಹ್ಮಚಾರಿ ಯಾರೇ...?"

"ಅದೇ ಇದಾನಲ್ಲ ರಾಜಕುಮಾರ.... ಸಂಧ್ಯಾವಂದನೆ ಮಂತ್ರಗಳನ್ನು ಹೇಳಿ ಅಜ್ಜೀನ, ಅಮ್ಮನ್ನ ವಶೀಕರಣ ಮಾಡ್ಕೊಂಡು ಬಿಟ್ಟಿದಾನೆ..."

"ಮಾಡ್ಕೊಳ್ಳಲಿ ಬಿಡೇ ನಮಗೇನು?.... ನಾವು ಏನೇ ಮಾಡಿದ್ರೂ ಅಜ್ಜಿಗೆ ಸಂತೋಷವಾಗುಲ್ಲವಲ್ಲ."

"ಹೌದು ಕಣೇ... ಎಂದಾದ್ರೂ ಒಂದು ದಿನ.... ನಿನ್ನ ಹಾಡನ್ನಾಗಲೀ, ನನ್ನ ಡ್ಯಾನ್ಸನ್ನಾಗಲೀ ಮೆಚ್ಚಿ ಹೊಗಳಿಲ್ಲ. ಅಮ್ಮನಿಗೆ ಅದನ್ನೆಲ್ಲ ಕೇಳುಕ್ಕೆ ನೋಡುಕ್ಕೆ ಸಮಯವಿಲ್ಲ.... ಈಗ ಮಾತ್ರ ಬದಲಾಗಿದಾರೆ. ಏನೋ ಹೊಸದನ್ನ ಕಂಡವರಂತೆ..... ಅದೇನೋ ಹೇಳ್ಬೇಕು ಅಂತ ಅಂದ್ಯಲ್ಲಾ ಹೇಳು... ಊಟಕ್ಕೆ ಹೊತ್ತಾಗುತ್ತೆ..."

"ರಾಜ ನಮಗೆಲ್ಲ ಅಣ್ಣನಾಗಬೇಕಂತೆ... ಅಮ್ಮ ಡಾಕ್ಟರ ಹತ್ರ ಹೇಳಿದ್ರು."

"ಅಣ್ಣಾನಾ?... ಬೇರೆ ಮನೆಯವನು ಅಣ್ಣನಾಗುಕ್ಕೆ ಹೇಗೆ ಸಾಧ್ಯ? ಅದೂ ಅಲ್ಲದೇ ಈಗ?"

"ಅದೇನೋ ಗೊತ್ತಿಲ್ಲ. ಅಪ್ಪ ಅಮ್ಮ ಅಜ್ಜಿ ಎಲ್ಲರೂ ನಿರ್ಧರಿಸಿಬಿಟ್ಟಿದ್ದಾರೆ.... ಅವನನ್ನು ದತ್ತು ತಗೋತಾರಂತೆ."

"ಹೌದಾ? ಯಾಕೆ? ನಾವೆಲ್ಲಾ ಮಕ್ಕಳಿಲ್ವಾ?"

"ಇದೀವಿ. ಆದರೆ ಮದುವೆ ಮಾಡಿಕೊಂಡು ನಾವೆಲ್ಲಾ ಹೊರಟುಹೋಗ್ತೀವಲ್ಲ..."

"ಮದುವೇನೇ ಮಾಡಿಕೊಳ್ದೇ ಇದ್ರೆ... ಇಲ್ಲೇ ಇರಬಹುದಲ್ಲ..."

"ಅದೂ ಸರಿ... ಅವನಿಗೆ ತಂದೆತಾಯಿ ಇಲ್ಲವಲ್ಲ. ಅದಕ್ಕೇ ಅವನಿಗೆ ಇವರು ತಂದೆತಾಯಿ ಆಗ್ತಾರಂತೆ..."

"ಇದರಿಂದ ಲಾಭ ಆಗೋದು ಅವನಿಗೆ... ಇನ್ನು ಮುಂದೆ ನಾವು ಮುಂಚಿನಂತೆ ಇರೋಕಾಗುಲ್ಲ. ನಮಗೆ ಯಾವ ಅಣ್ಣನೂ ಬೇಡ. ಹಾಗಂತ ಹೇಳಿಬಿಡೋಣ."

"ಬೇಕಾ, ಬೇಡವಾ, ಅಂತ ನಮ್ಮನ್ನು ಕೇಳಿಲ್ಲವಲ್ಲ. ನಾವಾಗೇ ಹೇಳಿದ್ರೆ ಯಾರೂ ಸುಮ್ಮನಿರುಲ್ಲ. ನಮ್ಮನ್ನೇ ಬೈತಾರೆ."

"ಹಾಗಾದ್ರೆ ಒಂದು ಕೆಲಸ ಮಾಡೋಣ. ಅವನ ಹತ್ರ ಮಾತನಾಡೋಣ. ನನಗೆ ಆಗಲೇ ಅನುಮಾನ ಬಂದಿತ್ತು. ಅವನಿಗೆ ನಮ್ಮ ಅಮ್ಮನೇ ಬೇಕಾದ್ರೆ ಬೇರೆ ಅಪ್ಪ ಅಮ್ಮನ್ನ ಹುಡುಕಿಕೊಳ್ಳಲಿ. ಆ ಮನೆಗೆ ಅಜ್ಜೀನೂ ಕಳಿಸಿಬಿಡೋಣ" ಮಯೂರ ಕಿಸಕಿಸನೆ ನಕ್ಕಳು.

"ಅಪ್ಪ ಅಮ್ಮಂಗೆ ಗೊತ್ತಾಗದಂತೆ ಅವನ ಹತ್ರ ಮಾತನಾಡ್ಬೇಕು. ಇಲ್ಲದೇ ಹೋದರೆ.... ನಾವು ಬದಲಾಗಬೇಕು. ಹಾಗೇ ಕಂಡೀಷನ್ ಹಾಕಬೇಕು. ಅವನಿಂದ ನಮಗೆ ಯಾವ ತೊಂದರೆ ಆಗಬಾರದು. ಹೊರಗಿನವನಂತೆ ಹೊರಹೊರಗೇ ಇರಬೇಕು. ಯಾವಾಗ ಮಾತನಾಡೋಣ.?"

"ರಾತ್ರಿಯ ಊಟವಾದ ಮೇಲೆ ಮಾತನಾಡೋಣ. ಅಪ್ಪ ರಾತ್ರಿಯ ರೈಲಿಗೆ ಊರಿಗೆ ಹೊರಟಿದಾರೆ. ಯಾವುದೋ ಲೆಖ್ಖ ಹೇಳಿಸ್ಕೋಬೇಕು ಅಂತ ಅಮ್ಮಂಗೆ ಹೇಳಿ ಇಬ್ಬರೂ ಮೇಲಿನ ರೂಮಿಗೆ ಹೋಗಿ ಮಾತನಾಡೋಣ." ಪರಸ್ಪರ ಮುಗುಳ್ನಕ್ಕರು.

* * * *

ಊಟವಾದ ಮೇಲೂ, ರಾಜ ಮೇಲೆ ಹೋಗದೇ ಕೆಳಗೇ ಉಳಿದ. ಕೇಶವನನ್ನು ರೈಲ್ವೆ ಸ್ಟೇಷನ್‌ಗೆ ಬಿಟ್ಟುಬಂದ. ಮಂದಾರ ಮಲಗಿದ್ದಳು. "ನಂಗೆ ತುಂಬಾ ಸುಸ್ತಾಗಿದೆ ನಾನೂ ಮಲಗ್ತೀನಿ" ಎಂದು ಹೇಳಿ, ರಾಧಾ ಮಧುರಂಗೆ ಮಾತ್ರೆಯನ್ನು ಟಾನಿಕ್‌ನ್ನು ಕೊಟ್ಟು ಮಲಗಲು ಹೋದಳು.

"ಅಮ್ಮಾ.... ಈ ಔಷಧಿಗಳನ್ನ ಯಾರು ತಂದ್ರಮ್ಮ? ನಾವು ಕ್ಲಿನಿಕ್‌ನಿಂದ ಹಾಗೇ ಬಂದುಬಿಟ್ಟಿವಲ್ಲ."

"ರಾಜನ ಕೈಲಿ ತರಿಸಿದೆ. ಸ್ಟೇಷನ್‌ನಿಂದ ಬರ್ತಾ ಹಾಗೇ ತಂದ." ಮಧುರ ತಂಗಿಯ ಕಡೆ ನೋಡಿದಳು.

"ನೀವಿಬ್ರೂ ಮಲಕ್ಕೊಳ್ಳಿ. ರಾಜ ಇಲ್ಲೇ ಹಾಲಿನಲ್ಲಿ ಓದ್ತಾ ಇದಾನೆ. ಆಮೇಲೆ ಇಲ್ಲೇ ಮಲಗ್ತಾನೆ." ಅಕ್ಕತಂಗಿಯರು ಕಣ್ಣುಗಳಲ್ಲೇ ಮಾತನಾಡಿಕೊಂಡರು. ರಾಧಾ ಹೊರಟುಹೋದಳು. ಅಕ್ಕತಂಗಿಯರು, ಮೊದಲು ನೀಹೋಗು ಮೊದಲು ನೀನು" ಎಂದು ಗುಸುಗುಸು ಚರ್ಚೆಯ ನಂತರ ಇಬ್ಬರೂ ಒಂದಾಗಿ ಹೊರಬಂದರು. ತಾಯಿತಂಗಿಯರು ಮಲಗಿದ್ದ ರೂಮಿನ ಬಾಗಿಲು ಹಾಕಿತ್ತು. ಅಜ್ಜಿಯ ಗೊರಕೆ ಕೇಳಿಬರುತ್ತಿತ್ತು. ಒಮ್ಮೆ ಕತ್ತೆತ್ತಿ ನೋಡಿದ ರಾಜ, ಮತ್ತೆ ತನ್ನ ಓದಿನಲ್ಲಿ ಮುಳುಗಿದ. ಅಲ್ಲೇ ಒಂದೆರಡುಗಳಿಗೆ ನಿಂತಿದ್ದವರು ಮತ್ತೆ ಮಾತನ್ನು ಪ್ರಾರಂಭಿಸಲಾಗದೇ ರೂಮಿಗೆ ಹೋದರು. ಮತ್ತೆ ಕೆಲವೇ ಕ್ಷಣಗಳಲ್ಲಿ ಹಿಂತಿರುಗಿದರು.

"ಏನಾದ್ರೂ ಬೇಕಿತ್ತಾ?" ರಾಜ ತಲೆ ಎತ್ತಿ ಕೇಳಿದ.

"ಏನನ್ನೋ ಕೇಳ್ಬೇಕಾಗಿತ್ತು" ಮಯೂರ ಉಗುಳು ನುಂಗಿ ನುಡಿದಳು.

"ಹುಂ.... ಕೇಳಿ..."

"ತಪ್ಪು ತಿಳ್ಕೋಬಾರದು ನೀವು..."

"ನೀವು ಅಲ್ಲ... ನೀನು.... ನಾನು ನಿಮಗೆಲ್ಲ ಅಣ್ಣನಾಗಬೇಕು." ಅಕ್ಕ ತಂಗಿಯರು ಮುಖ ಮುಖನೋಡಿಕೊಂಡರು.

"ಹೌದು ನಿಮಗೆಲ್ಲ ನಾನು ಬೇಕೋ ಬೇಡವೋ. ಆದರೂ ನಾನು ನಿಮ್ಮೆಲ್ಲರ ಅಣ್ಣನಾಗಿರುವುದು ನಿಜ."

"ಇದು ಸರಿ ಎನಿಸುತ್ತಾ?"

"ಸರಿ, ತಪ್ಪಿನ ಪ್ರಶ್ನೆಯೇ ಇಲ್ಲ... ಯಾಕೆ? ನಿಮ್ಮಿಬ್ಬರಿಗೂ ಈ ವಿಷಯ ತಿಳಿದು ಬೇಜಾರಾಗ್ತಿದೆಯಾ?"

"ಹಾಗೇನಿಲ್ಲ..."

"ಮತ್ತೆ ಸರಿ. ಇನ್ನೇನು ಸಂದೇಹ?"

"ಈ ಮುಂಚೆ ನಾವ್ಯಾರು ಅಂತ ಗೊತ್ತಿರಲಿಲ್ಲ. ಈಗ ಇದ್ದಕ್ಕಿದ್ದಂತೆ ಈ ಮನೆಗೆ ಮಗನಾಗಿ, ನಮಗೆ ಅಣ್ಣನಾಗಿರುವುದಕ್ಕೆ ಮುಜುಗರ ಆಗ್ತಿಲ್ವಾ?"

"ಮೊದಲಿಗೆ ಮುಜುಗರವಾದದ್ದು ನಿಜ. ಈಗ ಬಳಕೆ ಆಯಿತು. ಈ ಸಂಬಂಧವನ್ನು ನಾನು ಹುಡುಕಿಕೊಂಡು ಬಂದದ್ದಲ್ಲ. ಈ ಸಂಬಂಧ ಮೊದಲಿನಿಂದಲೇ ಇತ್ತು. ಆದರೆ ಕೆಲವೇ ದಿನಗಳ ಹಿಂದೆ ಪ್ರಕಟವಾಯಿತು.

"ಅಂದ್ರೇ...?" ಇಬ್ಬರೂ ಒಟ್ಟಿಗೇ ಕೇಳಿದ್ರು.

"ನಾನು ನಿಮ್ಮ ದೊಡ್ಡಪ್ಪನ ಮಗ. ಅಂದ್ರೆ ಈ ಮನೆಯ ಹಿರಿಮಗನ ಮಗ.... ನಿಮ್ಮ ಲಜ್ಜಿಗೆ ಮೊದಲ ಮೊಮ್ಮಗ. ನಿಮಗೆ ಸರಿ ಎನಿಸಿದ್ರೆ ಸ್ವಂತ ಅಣ್ಣನಾಗಿರ್ತೀನಿ. ಆ ಕರ್ತವ್ಯವನ್ನು ನಿಭಾಯಿಸ್ತೀನಿ."

"ಸುಳ್ಳು.... ನಮಗೆ ಯಾವ ದೊಡ್ಡಪ್ಪನೂ ಇರಲಿಲ್ಲ. ಎಲ್ಲಾ ಕಟ್ಟುಕತೆ."

"ಕಟ್ಟುಕತೆ ಹೇಳುವ ಅಗತ್ಯವಿಲ್ಲ. ನಿಮಗ್ಯಾರಿಗೂ ನಾನು ಬೇಡವಾದರೆ ನನ್ನ ಓದು ಮುಗಿದ ಮೇಲೆ ಬೇರೆ ಊರಿನಲ್ಲಿ ಕೆಲಸ ಹುಡುಕಿಕೊಂಡು ಹೋಗ್ತೀನಿ. ನಿಮ್ಮಗಳ ಮದುವೆಯಲ್ಲಿ ಬಂದು ಓಡಾಡ್ತೀನಿ. ಈ ಸಂಬಂಧವಂತೂ ಹೋಗುವುದಿಲ್ಲವಲ್ಲ."

"ಅಲ್ಲ ರಾಜ.... ಈಗ ನಿಮ್ಮ ಮಾವ ಏನಂತಾರೆ?"

"ಅವರು ಏನಂತಾರೆ? ನಮ್ಮ ಅಪ್ಪನ ಕೊನೆಯ ಆಸೆ ಇದ್ದದ್ದು ನಾನು ಅಜ್ಜಿಯ ಮೊಮ್ಮಗನಾಗಿ ಈ ಮನೇಲಿರಲಿ ಅಂತ... ನಿಮಗ್ಯಾರಿಗೂ ಬೇಡವಾದ್ರೆ ನಾನು ಅಜ್ಜೀನೂ ಕರ್ಕೊಂಡು ಹೋಗ್ತೀನಿ."

"ಹಾಗೆ ಮಾಡು. ಆದರೆ ನಿನ್ನ ಮಾತನ್ನು ನಿಜ ಅಂತ ಹೇಗೆ ನಂಬುಕ್ಕೆ ಆಗುತ್ತೆ?"

"ನಿಮ್ಮ ತಂದೇನ ಕೇಳಿ. ಅವರು ನಿಜ ಏನೂಂತ ಹೇಳಲೇಬೇಕಾಗುತ್ತೆ."

"ಇಲ್ಲಪ್ಪ. ಅಪ್ಪನ ಹತ್ರ ಇದನ್ನೆಲ್ಲ ಕೇಳುಕ್ಕೆ ಆಗುತ್ತಾ? ಬೈತಾರೆ ಅಷ್ಟೇ..."

"ನಿಮ್ಮ ಜೊತೇಲಿ ನಾನೂ ಇರ್ತೀನಿ. ಆಗ ಅವರು ಬೈಯುಲ್ಲ."

"ನಾವು ಇದನ್ನೆಲ್ಲ ಮಾತಾಡಿದೀವಿ ಅಂತ ಅವರಿಗೆ ಗೊತ್ತಾಗಲೇಬಾರದು. ಚಿಕ್ಕವರಿಗೆ ಯಾಕೆ ದೊಡ್ಡವರ ವಿಷಯ ಅಂತ ಬೈದೇ ಬೈತಾರೆ."

"ಹಾಗಾದ್ರೆ ಸುಮ್ಮನಿದ್ದು ಬಿಡಿ. ಮತ್ಯಾಕೆ ದೊಡ್ಡವರ ಮಾತಿಗೆ ಹೋಗಬೇಕು? ನಾವೆಲ್ಲರೂ ಚಿಕ್ಕವರೇ. ಅವರುಗಳಿಗೆ ಒಳ್ಳೇದು ಯಾವುದು. ಸರಿ ಯಾವುದು ಅಂತ ಖಂಡಿತಾ ಗೊತ್ತಿರುತ್ತೆ."

"ಆದರೂ...."

"ನಾನೊಂದು ಮಾತು ಹೇಳ್ಲಾ? ನಾನು ನಿಮಗೆ ಭರವಸೆ ಕೊಡ್ತೀನಿ. ಸದ್ಯಕ್ಕೆ ನನ್ನ ಕೋರ್ಸು ಮುಗಿಯುವವರೆಗೂ ನಾನು ಇಲ್ಲಿಯೇ ಇರ್ತೀನಿ. ಅಲ್ಲಿಯವರೆಗೆ ಸಹಿಸ್ಕೊಂಡು ಬಿಡಿ ನನ್ನನ್ನ.... ಮೂರು ನಾಲ್ಕು ವರ್ಷಗಳಲ್ಲಿ

ಏನೇನು ಬದಲಾವಣೆಗಳಾಗುತ್ತೋ... ಹೇಗೂ ನಾನು ಮೆಜಾರಿಟಿಗೆ ಬಂದ ಮೇಲೆ ನನಗೆ ಕೆಲವು ಹಕ್ಕುಗಳು ಬರುತ್ತವೆ. ಅದಕ್ಕೆ ಎಲ್ಲರೂ ಒಪ್ಪಲೇಬೇಕಾಗುತ್ತೆ. ಅದನ್ನು ಯಾರೂ ಬದಲಾಯಿಸುಕ್ಕೆ ಆಗುಲ್ಲ. ನಾನಂತೂ ಯಾರಿಗೂ ಬೇಡದವನಾಗಿ ಈ ಮನೆಯಿಂದ ಹೊರಟುಹೋಗ್ತೀನಿ. ಆದರೆ, ಮತ್ತೆ ಬಾ ಅಂತ ಅಂದ್ರೂ ನಾನು ಬಹುಶಃ ಬರುಕ್ಕೆ ಆಗದಿರಬಹುದು. ಹೇಗೂ ನಾನು ತಬ್ಬಲಿ. ಹೇಗೋ ನಾನು ದಿನಗಳನ್ನು ಕಳೆದುಕೊಳ್ತೀನಿ. ನೀವುಗಳು ಆರಾಮವಾಗಿರಬಹುದು. ನನ್ನಿಂದ ಮಾತ್ರ ಯಾರಿಗೂ ತೊಂದರೆ ಖಂಡಿತಾ ಆಗುಲ್ಲ." ಇಬ್ಬರೂ ತೆಪ್ಪಗಾಗಿದ್ದರು. ಅವನ ಈ ಮಾತುಗಳಿಗೆ ಏನು ಹೇಳಬೇಕೆಂದು ಅವರಿಬ್ಬರಿಗೂ ಗೊತ್ತಾಗಿರಲಿಲ್ಲ. ರೂಮಿನಿಂದ ಹೊರಬಂದ ರಾಧಾ ಅವನ ಮಾತುಗಳನ್ನು ಕೇಳಿಸಿಕೊಂಡಿದ್ದಳು. ಆದರೂ ತನಗೆ ಏನೂ ಗೊತ್ತಿಲ್ಲವೆಂಬಂತೆ,

"ಇಲ್ಲೇನು ಮಾಡ್ತಿದೀರಿ ಇಬ್ರೂ.... ಓದಿದ್ದು ಮುಗಿದಿದ್ರೆ ಎಲ್ಲರೂ ಮಲಕ್ಕೊಳಿ. ಹೊತ್ತಾಗಿದೆ." ಇಬ್ಬರೂ ಪೆಚ್ಚಾಗಿ, ತಮ್ಮ ರೂಮಿಗೆ ಹಿಂತಿರುಗಿದರು. ರಾಜನೂ ಮಲಗುವ ಸಿದ್ಧತೆ ನಡೆಸಿದ. ರಾಧಾ, ಮುಂಬಾಗಿಲು, ಹಿಂಬಾಗಿಲುಗಳನ್ನು ನೋಡಿ ದೀಪವಾರಿಸಿದಳು. ಮಲಗಲು ರೂಮಿಗೆ ಹೋದಳು.

ಗೌರಮ್ಮನ ಆಸೆಯಂತೆ, ಹೆಣ್ಣು ಮಕ್ಕಳು ತಮ್ಮ ಗಂಡಂದಿರು, ಹಾಗೂ ಮಕ್ಕಳೊಂದಿಗೆ ಬಂದಿಳಿದರು. ಮನೆಯಲ್ಲಿ ಸಂಭ್ರಮದ ವಾತಾವರಣ. ಇದ್ದಕ್ಕಿದ್ದಂತೆ ಇವರುಗಳು ಏಕೆ ಬಂದಿರುವರೆಂದು ಮಧುರ, ಮಯೂರಳಿಗೆ ಆಶ್ಚರ್ಯವೆನಿಸಿದರೂ, ಮುಖದಲ್ಲಿ ಗಾಂಭೀರ್ಯವನ್ನು ನಟಿಸಿದರು. ಸುನೀತಾ ಮಧುರಳ ಕೈಹಿಡಿದಳು.

"ಚೆನ್ನಾಗಿ ಕಾಣ್ತೀಯ ಕಣೇ.... ಮೈ ಬಂದಿದೆ... ಆರೈಕೆ ತುಂಬಾ ಜೋರಾಗಿದೆ ಅಂತ ಕಾಣುತ್ತೆ" ಮಧುರ ತಂಗಿಯ ಕಡೆ ನೋಡಿದಳು.

"ಆರೈಕೆ ಕಡಿಮೆ ಇದ್ದರೂ, ಹೀಗೆ ಊದಿದಾಳೆ. ಸರಿಯಾಗಿ ನಡೆದಿದ್ದರೆ ಬೆಲೂನಿನಂತೆ ಊದಿ ಹಾರಿ ಹೋಗಿರುತ್ತಿದ್ಲು."

"ಯಾಕೇ... ಮೈ ಬರುತ್ತೆ ಅಂತ ಹೆದರಿದೆಯಾ?..."

"ಇಲ್ಲಪ್ಪ ಅವಳಿಗ್ಯಾಕೆ ಹೆದರಿಕೆ? ಅಮ್ಮಂಗೆ ಹೆದರಿಕೆ ಅಷ್ಟೇ." ಮೂವರು ನಕ್ಕರೂ.

"ಎಲ್ಲೇ ನಿಮ್ಮ ರಾಜಕುಮಾರ... ಕಾಣ್ತಾ ಇಲ್ಲ..."

"ಯಾಕಮ್ಮಾ ಅವನಿಂದ ನಿನಗೇನಾಗ್ಬೇಕು?"

"ಅಲ್ಲ ಎರಡು ತಿಂಗಳಿಂದ ಇಲ್ಲಿ ಇದಾನಲ್ಲ.... ಇದಾನ್ರೋ ಅಥವಾ ನಿಮ್ಮ ಮೂವರ ಕಾಟ ತಡೀಲಾರದೇ ಓಡಿ ಹೋದ್ನೋ ಅಂತ ಅಷ್ಟೇ."

"ಓಡಿಹೋದ... ಎಲ್ಲಿ ಹೋದ್ನೋ... ಹುಡಿಕ್ಕೊಂಡು ಬಾ..."

"ಅಡ್ರೆಸ್ ಗೊತ್ತಾ?..."

"ನಮಗೆ ತಿಳಿದ್ಮೂಡ್ಲೇ ನೀನ್ಗೂ ತಿಳಿಸ್ತೀವಿ... ಆದರೆ ಏನು ಸಮಾಚಾರ ಅಂತ? ಅವನ ಬಗ್ಗೆ ಯಾಕೆ ಅಷ್ಟು ಆಸಕ್ತಿ? ನಮ್ಮ ಮನೆಗೆ ಅಪ್ಪನ ಸ್ನೇಹಿತರ ಕಡೆಯವರು ಯಾರಾದ್ರೂ ಬರ್ತಾನೇ ಇರ್ತಾರೆ. ಇವನದ್ದೇನೂ ಸ್ಪೆಷಲ್ ಇಲ್ಲ."

"ನಂಗೂ ಏನೂ ಆಸಕ್ತಿ ಇಲ್ಲ. ಸುಮ್ಮನೇ ಕೇಳಿದೆ ಅಷ್ಟೇ." ಅಷ್ಟರಲ್ಲಿ ರಾಜ ಅಲ್ಲಿಗೆ ಬಂದ. ಮಾತು ನಿಂತಿತು. ಆದರೆ ನಗುವಿನ ಅಲೆ ಎದ್ದಿತು. ರಾಜ ಬೆಪ್ಪಾಗಿದ್ದ.

"ಬಂದ ನೋಡು ನಿನ್ನ ರಾಜಕುಮಾರ... ಅವನ ಅಡ್ರೆಸ್ ಬರ್ಕ್ಕೋ ಕೇರಾಫ್... ಕೇಶವರಾವ್..." ಮತ್ತೊಮ್ಮೆ ಎಲ್ಲರೂ ಜೋರಾಗಿ ನಕ್ಕರು. ಮಂದಾರ ಸಲುಗೆಯಿಂದ ಅವನ ಕೈಹಿಡಿದು ಆಡಿಸುತ್ತಿದ್ದಳು. ಮೂವರೂ ಅವನನ್ನೇ ನೋಡಿ ಮತ್ತೊಮ್ಮೆ ನಕ್ಕರು. ಅವನ ಗಮನ ಅವರ ನಗುವಿನ ಮೇಲಿರಲಿಲ್ಲ. ಅವರುಗಳೆಲ್ಲ ತನ್ನನ್ನು ಏನು ಕೇಳಿಬಿಡುವರೋ....ಎಂಬ ಗೊಂದಲದಲ್ಲಿ ಮುಳುಗಿದ್ದ. ಮನೆಯಲ್ಲಿ ಹಬ್ಬದ ವಾತಾವರಣ. ಅಜ್ಜಿ ಸಂಭ್ರಮದಿಂದ ಮಕ್ಕಳೊಡನೆ ಮಾತನಾಡುತ್ತಿದ್ದಳು. ಮಧುರ, ಮಯೂರರಿಗೆ ಸಂಭ್ರಮದ ಬಗ್ಗೆ ತಿಳಿದಿದ್ದರೂ, ತಮಗೇನೂ ತಿಳಿಯದು ಎಂಬಂತೆ ನಟಿಸಿದ್ದರು.

ಪ್ರಭಾವತಿ, ಸತ್ಯವತಿ, ರಾಧಾಳೊಂದಿಗೆ ಅಡಿಗೆ ಮನೆ ಸೇರಿದರು. ಕೇಶವ ತನ್ನ ಭಾವಂದಿರನ್ನು ಮಾರ್ಕೆಟ್ಟಿಗೆ ಕರೆದೊಯ್ದಿದ್ದ. ಸುನೀತಾಳ ತಮ್ಮ ಮಂದಾರನ ಜೊತೆ ಜೊತೆಯಲ್ಲಿ ರಾಜನ ಹಿಂದೆ ಮುಂದೆ ಸುತ್ತುತ್ತಿದ್ದ. ಪ್ರಭಾವತಿಯ ಮಗಳಿಗೆ ಮದುವೆಯಾಗಿ ಗಂಡನ ಮನೆಯಲ್ಲಿದ್ದಳು. ಮಗ, ಮಾರನೇ ದಿನ ಬರುವವನಿದ್ದ. ಸುನೀತಾ, ಮಧುರ, ಮಯೂರಳೊಡನೆ ರೂಮನ್ನು ಸೇರಿಕೊಂಡಿದ್ದಳು. ಗೌರಮ್ಮ ಜೋರು ದನಿಯಲ್ಲಿ ಹಾಡು ಹೇಳುತ್ತಿದ್ದಳು.

"ಅಮ್ಮಂಗೆ ಎಷ್ಟು ಖುಷಿಯಾಗಿದೆ ನೋಡು.... ಮಗನೇ ಮನೆಗೆ ವಾಪಸ್ಸು ಬಂದಷ್ಟೆ ಆನಂದವಾಗಿದೆ."

"ಹೌದು, ಕೇಶವ ಒಳ್ಳೆಯ ಕೆಲಸವನ್ನೇ ಮಾಡಿದ. ಮನೆ ಹುಡುಗ ಮನೇಲೆ ಇದ್ದ ಹಾಗಾಗುತ್ತೆ. ಅವನಿಗೂ ಒಂದು ನೆಲೆ ಸಿಕ್ಕಂತಾಗುತ್ತೆ.... ರಾಧಾ ಈ ವಿಷಯ ಮೂರ್ತಿಗೆ ಗೊತ್ತಾ?"

"ಹುಂ. ಅವರ ಆಸೆ ಹೀಗಿದೆ ಅಂತಲೇ ರಾಜ ಒಪ್ಪಿದ್ದು. ಬೆಳೆದ ಹುಡುಗನಾದುದರಿಂದ ಸ್ವಲ್ಪ ತಕರಾರು ಮಾಡಿದ."

"ಸಹಜವೇ... ಇದ್ದಕ್ಕಿದ್ದಂತೆ ಜೀವನದಲ್ಲಿ ಬದಲಾವಣೆಗಳು ಎದುರಾದರೆ ಭಯ ಆಗುತ್ತೆ. ಇನ್ನು ಯಾವ ಚಿಂತೆಯೂ ಇಲ್ಲ. ಆರಾಮವಾಗಿ ಮನೆ ಮಗನಾಗಿರ್ತಾನೆ. ನಿನ್ನ ಮಕ್ಕಳು... ಏನಂತಾರೋ?"

"ಇನ್ನೂ ಅವಕ್ಕೆ ಗೊತ್ತಿಲ್ಲ. ಏನನ್ನುತ್ತವೋ... ಮೊದಲೇ ಮಾತನ್ನಾಡಬೇಕೆಂದುಕೊಂಡಿದ್ದೆವು. ಆದರೆ ಸಮಯವೇ ಇರಲಿಲ್ಲ. ಕಾನೂನಿನ ಪ್ರಕಾರ ದತ್ತು ತೆಗೆದುಕೊಂಡದ್ದಾಗಿದೆ. ನಾಳೆ ಅದನ್ನು ಬಹಿರಂಗ ಪಡಿಸಬೇಕು. ಹುಟ್ಟುಹಬ್ಬದ ಆಚರಣೆ ನೆವದಲ್ಲಿ ನಿಮ್ಮನ್ನೆಲ್ಲಾ ಕರೆಸಿದ್ದಾಗಿದೆ. ಲಾಯರ್ರು ಬಂದು ವಿಲ್ ಓದ್ತಾರೆ. ಆಗ ಎಲ್ಲರಿಗೂ ತಿಳಿದೇ ತಿಳಿಯುತ್ತೆ."

"ಈ ಕಾರ್ಯಕ್ರಮ ಮುಗಿದ ಮೇಲೆ, ಆಶ್ರಮಕ್ಕೆ ಹೋಗಿಬರಬೇಕು. ಮೂರ್ತಿಗೆ ಮಗನನ್ನು ತೋರಿಸಿ, ಇನ್ನು ನಿಶ್ಚಿಂತೆಯಾಗಿರು ಅಂತ ಹೇಳಬೇಕು. ಮೊದಲ್ನಿಂದ್ಲೂ ಕದಡಿದ ಮನದವನು. ಇನ್ನಾದರೂ ನೆಮ್ಮದಿಯಿಂದಿರಲಿ."

"ಕಡೆಗೂ ಒಂದು ದಿನವೂ, ಅಣ್ಣನ ತಪ್ಪು ಏನು ಅಂತ ಅಮ್ಮ ಸರಿಯಾಗಿ ಹೇಳಿಲ್ಲ. ಅದೆಂಥ ಜಾತಕವೋ... ಹುಟ್ಟಿಸಿದವರಿಂದ ದೂರವೇ ಇದ್ದುಬಿಟ್ಟ. ಹುಟ್ಟಿಸಿದವನನ್ನು ದೂರ ಇಟ್ಟ." ಸತ್ಯವತಿ ಲೊಚಗುಟ್ಟಿದಳು.

"ಆ ಮಾತುಗಳನ್ನೆಲ್ಲಾ ಆಡಿ ಏನು ಪ್ರಯೋಜನ ಅತ್ತಿಗೆ. ಮಕ್ಕಳಿಗೆ ಅನುಮಾನ ಬಂದರೆ, ತಲೆ ತಿನ್ನುತ್ತವೆ. ಹೇಳುಕ್ಕಿಲ್ಲ, ಹೇಳದೇ ಇರೂಕ್ಕಿಲ್ಲ."

"ಮಧುರ, ಮಯೂರಂಗೆ ಏನೂ ಅನುಮಾನ ಬಂದಿಲ್ವಾ?"

"ಅನುಮಾನ ಬಂದಿರಬಹುದು. ನಮ್ಮಿಬ್ಬರ ಮೇಲೆ ಕೋಪವೂ ಬಂದಿರಬಹುದು. ಮೊದಮೊದಲು ಕಿತ್ತಾಡುತ್ತಿದ್ದ ಅಕ್ಕತಂಗಿಯರು ಇದ್ದಕ್ಕಿದ್ದಂತೆ ಅನ್ಯೋನ್ಯವಾಗಿದಾರೆ. ಗುಸುಗುಸು ಪಿಸುಪಿಸು ಮಾತೇನು ನಗುವೇನು?"

"ನಾಳೆ ಏನಾದ್ರೂ ಗಲಾಟೆ ಮಾಡಿ ಅತ್ತು ಕರೆದು ರಂಪ ಮಾಡಿದ್ರೆ.?

"ಮಾಡುಲ್ಲ ಅಂತ ಅಂದ್ಕೊಂಡಿದೀನಿ. ಅಷ್ಟು ಸಂಸ್ಕೃತಿ ಇದೆ..."

"ಸದ್ಯ ಏನೂ ಗಲಾಟೆ ಮಾಡದಿದ್ರೆ ಸಾಕು. ಅವೂ ಮನೆಯ ಮಕ್ಕಳೇ." ಗೋಡೆಯ ಮೇಲಿದ್ದ ಹಲ್ಲಿ ಲೊಚಗುಟ್ಟಿತು. ಎಲ್ಲರೂ ಮೌನಿಗಳಾದರು.

* * * *

ಬೆಳಗಾಯಿತು. ಸೂರ್ಯೋದಯಕ್ಕೆ ಮೊದಲೇ ಹೆಂಗಸರು ಎದ್ದು ಮನೆಯ ಕೆಲಸಗಳನ್ನೂ ಪ್ರಾರಂಭಿಸಿದ್ದರು. "ಹಂಡೆ ನೀರು ಕಾದಿದ್ದರೆ ರಾಜನಿಗೆ ಎಣ್ಣೆ ಒತ್ತಿ ನೀರು ಹಾಕಿಬಿಡೋಣ" ಪ್ರಭಾವತಿ ಎಂದಳು. ರಾಜ ಇಳಿದು ಬರುವುದನ್ನೇ ಕಾದಿದ್ದು ಅವನನ್ನು ಬಲವಂತವಾಗಿ ಕೂರಿಸಿ, ಎಣ್ಣೆ ಒತ್ತಿದರು.

"ಹೋಗಿ ಚೆನ್ನಾಗಿ ಸ್ನಾನ ಮಾಡಿಕೊಂಡು ಬಾ. ಎಣ್ಣೆ ಚೆನ್ನಾಗಿ ಹೋಗುವಂತೆ ಸೀಗೆಪುಡಿ ಉಜ್ಕೋ...." ಸತ್ಯವತಿ ಎಂದಳು. ರಾಜ ಸ್ನಾನ ಮುಗಿಸಿ ಬಂದ ಹಣೆಗೆ ಕುಂಕುಮದ ಬೊಟ್ಟನ್ನಿಟ್ಟುಕೊಂಡು, ಸಂಧ್ಯಾವಂದನೆ ಮಾಡಿದ. ದೇವರಿಗೆ ನಮಸ್ಕಾರ ಮಾಡಿ, ಹಿರಿಯರಿಗೆ ನಮಸ್ಕಾರ ಮಾಡಿದ. ಎಲ್ಲರೂ ಹೃದಯಪೂರ್ವಕವಾಗಿ ಆಶೀರ್ವಾದ ಮಾಡಿದರು. ರಾಜ ಉತ್ತೇಜಿತನಾಗಿದ್ದ. ಉಲ್ಲಾಸಗೊಂಡಿದ್ದ.

"ಸ್ಕೂಲ್ಗೆ ಹೋಗುಲ್ವೇನ್ರೇ...." ಸತ್ಯವತಿ ಮಂದಾರಳನ್ನು ಕೇಳಿದಳು.

"ಮನೇಲಿ ಹಬ್ಬದ ಅಡಿಗೆ ಮಾಡ್ತಾರೆ... ನಾನ್ಯಾಕೆ ಹೋಗ್ಲೀ..." ಮೂತಿ ಉದ್ದ ಮಾಡಿ ನುಡಿದಳು...

"ಅರ್ಚಕರು ಬಂದು, ದೇವರಿಗೆ ಅಭಿಷೇಕ, ಪೂಜೆ ಮಾಡ್ತಾರೆ. ಒಂದು ಸ್ವಲ್ಪ ಮಾವಿನಸೊಪ್ಪನ್ನು ತಂದು ಮುಂಬಾಗಿಲಿಗೆ ಸಿಕ್ಕಿಸಿ. ಮುಂಬಾಗಿಲಿಗೆ ಮಾವಿನಸೊಪ್ಪು, ಇಲ್ಲದಿದ್ರೆ ಮನೆಗೆ ಶೋಭೆಯೇ ಇರುಲ್ಲ" ಗೌರಮ್ಮ ನುಡಿದಾಗ, ಕೇಶವನೇ ಎದ್ದು, ಪಕ್ಕದ ಮನೆಯವರ ಮಾವಿನ ಮರದಿಂದ ಎಲೆಗಳನ್ನು ಕಿತ್ತುತಂದು ಬಾಗಿಲಿಗೆ ಸಿಕ್ಕಿಸಿದ.

"ತಿಂಡಿ ತಿಂದ್ಕೊಂಡು ಸ್ಕೂಲಿಗೆ ಹೋಗ್ಬನ್ನಿ. ಮನೇಲಿ ಕೂತು ಏನ್ಮಾಡ್ತೀರಿ!" ರಾಧಾ ಮಕ್ಕಳಿಗೆ ಹೇಳಿದಳು.

"ರಾಜ ಕಾಲೇಜಿಗೆ ಹೋಗ್ತಾನಾ?" ಮಯೂರ ಕೇಳಿದಳು.

"ಇಲ್ಲ. ಇವತ್ತು ಅವನ ಹುಟ್ಟಿದ ಹಬ್ಬ. ಅವನ ಸೋದರಮಾವನೂ ಬರ್ತಾರೆ..."

"ಸರಿ ಮತ್ತೆ. ನಾವೂ ಹೋಗುಲ್ಲ. ಚುನ್ನಿಗೆ ಬೇಸರವಾಗುತ್ತೆ."

"ಅಟೆಂಡೆನ್ಸ್ ಹೋಗುತ್ತೆ ಸುಮ್ಮನೆ ಹೋಗಿ. ಮಧ್ಯಾಹ್ನ ಬಂದುಬಿಡಿ. ಅರ್ಧದಿನದ ರಜ ಹಾಕಿ..." ರಾಧಾ ರಾಜನ ಕಡೆ ನೋಡಿದಳು. ಅವನ ಮುಖದಲ್ಲಿ ಗೊಂದಲವಿರಲಿಲ್ಲ. ಗೆಲುವಾಗಿದ್ದ. ಅವಳಿಗೆ ನಿರಾಳವೆನಿಸಿತ್ತು. ಅಷ್ಟರಲ್ಲಿ ಸುನೀತಾ ಬಾಯಿ ಹಾಕಿದಳು.

"ಒಂದು ದಿನ ಕ್ಲಾಸಿಗೆ ಚಕ್ಕರ್ ಹೊಡೆದ್ರೆ, ಅಟೆಂಡೆನ್ಸ್ ಕಡಿಮೆ ಆಗುಲ್ಲ.... ನಾನೊಬ್ಬೇ ಆಗಿಬಿಡ್ತೀನಿ. ಈ ತರಲೆ ಮುಖಾನ ದಿನಾ ನೋಡೀ ನೋಡೀ ಬೇಜಾರಾಗಿದೆ." ತಮ್ಮನ ಕಡೆ ಕೈ ಮಾಡಿದಳು.

"ತಮ್ಮಂದಿರು ಯಾವಾಗ್ಲೂ ಹಾಗೇ... ತರಲೆಗಳೇ... ಅದೇ ಅಣ್ಣ ಆಗಿದ್ದಿದ್ರೆ ಜವಾಬ್ದಾರಿ ಜಾಸ್ತಿ... ಅಲ್ವೇನೋ?" ರಾಜ ಅವನ ತಲೆಯ ಮೇಲೆ ಕೈಯಾಡಿಸಿದ.

"ಹು ಕಣ್ರೀ.... ಇವಳು ನನ್ನನ್ನ ತರಲೆ ಅಂತಾಳೆ. ಇವಳೇನು ಸಾಮಾನ್ಯಾನಾ? ನಾನು ಅಣ್ಣ ಆಗಿದ್ದಿದ್ರೆ... ಸರಿಯಾಗಿ ಮಟ್ಟ ಹಾಕ್ದಿದ್ದೆ.... ಪಾಪ ಬಚಾವಾದ್ಲು."

"ಹಾಕ್ತೀನಿ ನೋಡು..." ಚುನ್ನಿ ಹೊಡೆಯಲೆಂದು ಕೈ ಎತ್ತಿದಳು. ಅವನು ರಾಜನ ಹಿಂದೆ ಬಚ್ಚಿಟ್ಟುಕೊಂಡ.

"ಇತ್ಲಾಗೆ ಬಾರೋ.... ಅವನಿಗ್ಯಾಕೆ ಹಿಂಸೆ ಮಾಡ್ತೀಯ. ಇವತ್ತು ಅವನ ಹುಟ್ಟಿದ ಹಬ್ಬ. ಅವನಿಗೆ ಬೇಸರ ಮಾಡಬೇಡಿ" ಪ್ರಭಾವತಿ ಎಂದಳು.

"ಓ.... ಇವತ್ತು ನಿಮ್ಮ ಬರ್ತ್‌ಡೇನಾ? ಗೊತ್ತೇ ಇರಲಿಲ್ಲ." ಹ್ಯಾಪೀ ಬರ್ತ್‌ಡೇ ಟೂ ಯೂ..." ಅವನು ಚಪ್ಪಾಳೆ ತಟ್ಟಿ ಹಾಡಿದ... ಕೇಕ್ ಎಲ್ಲಿ? ಯಾವಾಗ ಪಾರ್ಟಿ?" ಅವನು ಕೈಕುಲಕಿ ಪ್ರಶ್ನಿಸಿದ.

"ಇದಕ್ಕೇ ನಿನ್ನನ್ನ ತರಲೆ ಅಂದದ್ದು..." ಸುನೀತಾ ಕೆಣಕಿದಳು.

"ಕೇಕ್ ಕೊಡಿಸ್ತೀನಿ. ಆದರೆ ಸಾಯಂಕಾಲಕ್ಕೆ ಎಲ್ರೂ ಹೋಗಿಬರೋಣ" ಅವನು ಆಸೆ ಕಣ್ಣುಗಳಿಂದ ಹುಡುಗಿಯರ ಕಡೆ ನೋಡಿದ. ಅವರುಗಳು ಪರಸ್ಪರ ಮುಖ ನೋಡಿಕೊಂಡರು. ಎಲ್ಲಿದ್ದಳೋ, ಮಂದಾರ "ನಾನು ರೆಡಿ" ಎಂದಳು ಜೋರಾಗಿ.

"ಅರ್ಚಕರು ಬಂದರು, ದಾರಿ ಬಿಡಿ." ಕೇಶವ ಎಲ್ಲರಿಗೂ ಕೇಳುವಂತೆ ಹೇಳಿದ. ಕೆಲವೇ ನಿಮಿಷಗಳಲ್ಲಿ ಅರ್ಚಕರು ಮನೆಯ ದೇವರುಗಳಿಗೆ ಅಭಿಷೇಕವನ್ನು ಪ್ರಾರಂಭಿಸಿದರು. ಗೌರಮ್ಮನೊಂದಿಗೆ, ರಾಧಾ ಅಡಿಗೆ ಮನೆಯನ್ನು ಸೇರಿಕೊಂಡಳು.

"ಶ್... ಯಾರೂ ಗಲಾಟೆ ಮಾಡ್ಬೇಡಿ. ಅರ್ಚಕರಿಗೆ ಮಂತ್ರ ಹೇಳೋಕೆ ತೊಂದರೆ ಆಗುತ್ತೆ" ಸತ್ಯವತಿ ಎಂದಳು.

"ಎಲ್ರೂ ಮೇಲೆ ಹೋಗೋಣ. ಯಾರಿಗೂ ತೊಂದರೆ ಆಗುಲ್ಲ" ಮಯೂರ ಹೇಳಿದಾಗ ಉಳಿದವರು ಅನುಮೋದಿಸಿದರು. ಎಲ್ಲರೂ ಹೋದರೂ ರಾಜ ಹಾಗೇ ನಿಂತಿದ್ದ. ವಿನೀತ ಅವನ ಕೈ ಎಳೆದ.

"ಬನ್ರೀ ನೀವೂ... ಅಂತ್ಯಾಕ್ಷರಿ ಆಡೋಣ" ರಾಜ ಕೇಶವನ ಕಡೆನೋಡಿದ. ಕೇಶವ ಮುಗುಳ್ನಕ್ಕ.

"ಹೋಗು ಪರವಾಗಿಲ್ಲ. ನೀನೂ ಚಿಕ್ಕವನೇ... ಮಂಗಳಾರತಿಯ ಹೊತ್ತಿಗೆ ಎಲ್ಲರೂ ಬಂದುಬಿಡಿ ಅಷ್ಟೇ." ರಾಜ ಕಣ್ಣಿನಲ್ಲೇ ಗೌರವವನ್ನು ಸೂಚಿಸಿ ಅವನೊಂದಿಗೆ ಮಹಡಿ ಹತ್ತಿದ.

"ನಾವು ಒಟ್ಟು ಆರು ಜನ ಇದೀನಿ. ಇಬ್ಬರೇ ಹುಡುಗರು.... ನಾನು, ಮಧುರ, ಮಂದಾರ ಒಂದು ಗ್ರೂಪ್... ಉಳಿದವರು ಇನ್ನೊಂದು ಗ್ರೂಪು ಸರೀನಾ ?" ವಿನೀತ ಎದ್ದು ನಿಂತು ನುಡಿದ.

"ಯಾಕೋ.... ನೀನು ನಿಮ್ಮ ಅಕ್ಕನ ಗ್ರೂಪ್‌ಗೆ ಸೇರುಲ್ವಾ ?"

"ಬೇಡ.... ಆ ತರಲೆ ಅಲ್ಲೇ ಇರಲಿ... ಗೆಲ್ತೀನಿ ಅಂತ ತಿಳ್ಕೊಂಡಿದಾನೆ. ನಾವು ಸೋಲಿಸೋಣ."

"ನೀನೇ ಸೋಲೋದು... ರಾಜಂಗೆ ಹಾಡು ಬರುಲ್ಲ. ನಿಂಗೂ ಬರುಲ್ಲ. ಮಯೂರಂಗೆ ಕುಣಿಯೋದು ಒಂದೇ ಗೊತ್ತು."

"ಏ ಕಮಂಗಿ... ನನ್ನ ತಂಟೆಗೆ ಬಂದರೆ ಸುಮ್ನಿರುಲ್ಲ. ಮಧುರ ಹಾಡ್ತಾಳೆ ಅಂತ ನೀನು ಹಾರಾಡಬೇಡ."

"ಸರಿ ಸರಿ ಶುರು ಮಾಡಿ... ನಮ್ಮ ಗ್ರೂಪೇ ಗೆಲ್ಲೋದು... ಛಾಲೆಂಜು ವಿನೀತ ಗೊಗ್ಗರು ದನಿಯಲ್ಲಿ ಹಾಡಲು ಪ್ರಾರಂಭಿಸಿದ.

ರಾಜ ಆ ಹುಡುಗನ ಉತ್ಸಾಹ, ಚಟುವಟಿಕೆಯನ್ನೇ ಗಮನಿಸಿದ. ತಾನು ಆ ವಯಸ್ಸಿನಲ್ಲಿ ಹಾಗೆ ಎಂದೂ ಆಡಿದ್ದು ನೆನಪಿಲ್ಲ. ಸೋದರಮಾವನ

ಮಕ್ಕಳೂ ಇಷ್ಟು ಚೂಟಿಯಾಗಿರಲಿಲ್ಲ..."ಹೇಳ್ರೀ.... ಏನು ಯೋಚಿಸ್ತಿದೀರಿ" ವಿನೀತ ಕೂಗು ಹಾಕಿದಾಗ ರಾಜ ಬೆಚ್ಚಿ ಅತ್ತಿತ್ತ ನೋಡಿದ... ಚುನ್ನಿ ಹಾಡಲು ಪ್ರಾರಂಭಿಸಿದ್ದಳು. ಗುಲ್ಲೆಬ್ಬಿಸಿಕೊಂಡು ಹಾಡುತ್ತಿದ್ದವರಿಗೆ ಸಮಯ ಹೋದುದೇ ತಿಳಿಯಲಿಲ್ಲ. ಕಾಲಿಂಗ್ ಬೆಲ್ ಹೊಡೆದಾಗ ಹಾಡುವುದನ್ನು ನಿಲ್ಲಿಸಿದರು.

"ಮಂಗಳಾರತಿಯಾಗುತ್ತೆ ಹೋಗೋಣ." ರಾಜ ಎದ್ದುನಿಂತ. ವಿನೀತ ಮೆಟ್ಟಿಲ ಬಳಿ ಹೋದ. ಮಧುರ ಹಿಂದೆ ಉಳಿದಳು. ಬಾಗಿಲ ಬಳಿ ನಿಂತಿದ್ದ ರಾಜನನ್ನು ಕುರಿತು "ಒಂದ್ನಿಮಿಷ" ಎಂದಳು. ರಾಜ ಹಿಂತಿರುಗಿ ನೋಡಿ ನಿಂತ. ತನ್ನ ಕೈಯಲ್ಲಿಟ್ಟುಕೊಂಡಿದ್ದ ಕೇಸರಿ ಬಣ್ಣದ ದಾರದಿಂದ ತಾನೇ ತಯಾರಿಸಿದ್ದ 'ರಾಖಿ'ಯನ್ನು ತೆಗೆದಳು. ಅವನ ಬಲಗೈಯನ್ನು ಎತ್ತಿಹಿಡಿದು, ಅವನ ಮಣಿಕಟ್ಟಿಗೆ ರಾಖಿಯನ್ನು ಸುತ್ತಿ ಕಟ್ಟಿದಳು. "ಹುಟ್ಟುಹಬ್ಬದ ಶುಭಾಶಯಗಳು" ಎಂದು ಹೇಳಿ ಅವನು ಥ್ಯಾಂಕ್ಸ್ ಹೇಳುವ ಮೊದಲೇ, ಎಲ್ಲರಿಗಿಂತ ಮುಂದಾಗಿ ಇಳಿದು ಕೆಳಗೆ ಬಂದಳು.

ತನ್ನ ಮುಂಗೈ ನೋಡಿಕೊಂಡು ರಾಜನಿಗೆ ಎಲ್ಲಾ ಅರ್ಥವಾಗಲು ಕೆಲವು ನಿಮಿಷಗಳು ಹಿಡಿದವು. ಮಧುರ ತನಗೆ ರಾಖಿಯನ್ನು ಕಟ್ಟಿದಾಳೆ. ಅಂದರೆ ತನ್ನನ್ನು ಸೋದರ ಎಂದು ಸ್ವೀಕರಿಸಿದ್ದಾಳೆ. ಅದನ್ನು ಈ ರೀತಿ ತೋರ್ಪಡಿಸಿದ್ದಾಳೆ. ಅವನ ಹೃದಯವೂ ಅರಳಿತು.

ರೂಮಿನಲ್ಲೇ ಉಳಿದ ಮಧುರ ಹೊರಬಂದಿರಲಿಲ್ಲ. ಏನೋ ಒಂದು ರೀತಿಯ ಭಾವನೆಗಳ ಉದ್ವೇಗಕ್ಕೆ ಒಳಗಾಗಿದ್ದಳು. ಮಧುರಳನ್ನು ಹುಡುಕಿಕೊಂಡು ಬಂದ ಮಯೂರಳಿಗೆ ಏದುಸಿರುಬಿಡುತ್ತಾ ಹೇಳಿದಳು.

"ನಾನು, ರಾಜಂಗೆ ರಾಖಿ ಕಟ್ಟಿದೆ.... ನೀನು ಕಟ್ಟಿಬಿಡು... ಮಂದಾರಳ ಕೈಯಲ್ಲೂ ಕಟ್ಟಿಸು." ಎನ್ನುತ್ತಾ ತನ್ನ ಬಳಿ ಇದ್ದ ಉಳಿದ ಎರಡು ಬಣ್ಣದ ರಕ್ಷಾದಾರಗಳನ್ನು ಕೊಟ್ಟಳು.

"ಇದನ್ನೆಲ್ಲಿಂದ ತಂದ್ಯೆ? ನನಗೆ ತೋರಿಸ್ಲೇಇಲ್ಲ."

"ಕಸೂತಿ ಹಾಕುವ ದಾರ ಇತ್ತಲ್ಲ. ನಾನೇ ತಯಾರು ಮಾಡಿದೆ..."

"ನಾನು ಆಮೇಲೆ ನಿಧಾನವಾಗಿ ಕಟ್ತೇನಿ. ಇದು ಇಲ್ಲೇ ಇರಲಿ."

"ನಾನು ಅವನನ್ನ ಅಣ್ಣ ಅಂತ ಒಪ್ಕೊಂಡಿದ್ದು ಆಯ್ತು. ನೀನೂ ಒಪ್ಕೋ ಮಂದಾರಂಗೂ ಹೇಳು."

"ನೀನು ಈಗ ನಂಗೆ ಹೇಳ್ತಿದೀಯಲ್ಲ. ಆಗ್ಲೇ ಹೇಳಬಾರದಾಗಿತ್ತಾ?"

"ನಂಗೂ ಏನು ಮಾಡ್ಬೇಕು ಅಂತ ಗೊತ್ತಾಗ್ಲಿಲ್ಲ. ನಿಂಗೇನು ಯಾವ ಸಮಸ್ಯೆಯೂ ಇರಲಿಲ್ಲ. ನಿನ್ನ ತಂಗಿಗೂ ಅಷ್ಟೇ. ನನ್ನ ಮನಸ್ಸೇ ಡೋಲಾಯಮಾನ ಆಡ್ತಿದ್ದದ್ದು ಅದು ಈಗ ನಿಂತಿತು. ಮೊನ್ನೆ ರಾತ್ರಿ ಅವನ ಹತ್ರ ಮಾತಾಡ್ದಾಗ್ನಿಂದ, ತಲೆ ಒಂದು ಥರ ಕೆಟ್ಟುಹೋಗಿತ್ತು. ಈಗ ನಿರಾಳವಾಯ್ತು."

"ಒಳ್ಳೇದೇ ಆಯ್ತು. ನೀನು ಒಪ್ಪಿಕೊಂಡ ಮೇಲೆ ಮುಗೀತು... ನಾನು ರಾಖಿಯನ್ನು ಕಟ್ಟಲಿ, ಬಿಡಲಿ ಅವನು ನಮಗೆ ಅಣ್ಣನೇ."

"ಏನ್ರೇ ಮಾಡ್ತಿದೀರಿ ಇಬ್ರೂ ಒಳಗೆ... ಮಾವ ಕರೀತಿದಾರೆ..." ಅದೇನೇ ಅದು.." ಎನ್ನುತ್ತಾ ಅಲ್ಲಿದ್ದ ರಾಖಿಯನ್ನು ಕೈಗೆತ್ತಿಕೊಂಡಳು ಸುನೀತಾ.

"ಏನಿಲ್ಲ. ಇದು ರಾಖೀ.... ಯಾರಿಗೋ ಕಟ್ಟುಕ್ಕೆ"... ಮಧುರ ಅದನ್ನು ಕಿತ್ತುಕೊಂಡಳು.

"ಅದು ರಾಖೀನಾ... ಬರೀ ಬಣ್ಣದ ದಾರ ಇದ್ದ ಹಾಗಿದೆ..."

"ಹೌದು. ಬರೀ ಬಣ್ಣದ ದಾರವೇ. ಇರಲಿ ಬಿಡು" ಅದನ್ನು ಪುಸ್ತಕಗಳ ನಡುವೆ ಮುಚ್ಚಿಟ್ಟಳು. ಎಲ್ಲರೂ ಹೊರಬಂದರು. ಅರ್ಚಕರು ಘಂಟಾನಾದವನ್ನು ಮಾಡುತ್ತಾ ಮಂಗಳಾರತಿಯನ್ನೆತ್ತಿದರು. ಮಂತ್ರವನ್ನು ಹೇಳುತ್ತಾ, ಹೂವು ಮಂತ್ರಾಕ್ಷತೆಯನ್ನು ದೇವರಿಗೆ ಅರ್ಪಿಸಿದರು. ರಾಜನೇ ಎಲ್ಲರ ಮುಂದೆ ಮಂಗಳಾರತಿಯ ತಟ್ಟೆಯನ್ನು ಹಿಡಿದ. ರಾಧಾ, ಅವನು ಮುಂಗೈನಲ್ಲಿ ಹೊಸದಾಗಿ ಕಟ್ಟಿಕೊಂಡಿದ್ದ ಬಣ್ಣದ ದಾರವನ್ನು ಗಮನಿಸಿದಳು. ಮಧುರಳ ಮುಂದೆ ಬಂದಾಗ, ಅವಳೊಬ್ಬಳಿಗೇ ಕೇಳಿಸುವಂತೆ "ಥ್ಯಾಂಕ್ಸ್" ಎಂದಿದ್ದ. ಕರ್ಪೂರದಾರತಿಯ ಬೆಳಕಿನಲ್ಲಿ ಮಧುರ ಅವನನ್ನೇ ಅವಲೋಕಿಸಿದಳು. ಅವನ ಮುಖದಲ್ಲಿ ಧನ್ಯತಾ ಭಾವವನ್ನು ಕಂಡಳು. ಈ ದಿನ ನನ್ನ ಈ ಕ್ರಿಯೆಯಿಂದ ಇವನಿಗೆ ತೃಪ್ತಿ ಸಿಕ್ಕಿದೆ.... ಎಂದುಕೊಂಡಳು. ತನ್ನ ಬಗ್ಗೆಯೇ ಹೆಮ್ಮೆ ಎನಿಸಿತು. ಮಂಗಳಾರತಿಯನ್ನು ಕಣ್ಣಿಗೊತ್ತಿಕೊಂಡು ಮುಗುಳ್ನಕ್ಕಳು. ತಾನೊಂದು ಘನಕಾರ್ಯ ಮಾಡಿದೆ ಎನ್ನುವ ಕಳೆ ಅವಳ ಮುಖದಲ್ಲಿ ಮಿನುಗಿತು.

* * * *

"ಊಟದ ಸಮಯವಾದ್ರೂ ನಿಮ್ಮ ಮಾವ ಬರಲಿಲ್ಲವಲ್ಲೋ" ಕೇಶವ ರಾಜನನ್ನು ಪ್ರಶ್ನಿಸಿದ. ರಾಜ ಉತ್ತರಿಸಲಿಲ್ಲ. "ನಾನೇ ಲಾಯರ್‌ರ್ಗೆ ಫೋನು

ಮಾಡ್ತೀನಿ ತಡಿ.." ಕೇಶವ ಸಂಬಂಧಪಟ್ಟ ಲಾಯರ ನಂಬರನ್ನು ಹುಡುಕಿ ಫೋನು ಮಾಡಿದ... ರಾಜನಿಗೆ ಆತಂಕವಾಗತೊಡಗಿತು.

"ಫೋನು ರಿಂಗಾಗುತ್ತಿದೆ. ಯಾರೂ ತಗೊಳ್ಳುತ್ತಿಲ್ಲ." ಕೇಶವನೂ ಆತಂಕದಿಂದ ನುಡಿದಾಗ, ರಾಜನಿಗೆ ಖೇದವಾಗತ್ತೊಡಗಿತ್ತು. ಮಾವ ಯಾಕೆ ಹೀಗೆ ಮಾಡಿದರು? ವಿಲ್ಲು ಅಂತ ಹೇಳಿರುವುದು ಸುಳ್ಳಿರಬಹುದೇ? ನನ್ನನ್ನು ಈ ಮನೆಗೆ ಸೇರಿಸಲು ಒಂದು ನಾಟಕವಾಡಿರಬಹುದೇ?

"ನೀನ್ಯಾಕೆ ಹಾಗೆ ಕೆಟ್ಟ ಮುಖ ಹಾಕಿಕೊಳ್ತೀಯ. ನಂಜುಂಡಸ್ವಾಮಿಯ ಮೇಲೆ ನನಗೆ ನಂಬಿಕೆ ಇದೆ." ಕೇಶವ ರಾಜನಿಗೆ ಸಮಾಧಾನ ಹೇಳಿದ. ಅರ್ಚಕರು ಎಲ್ಲರಿಗೂ ಪಂಚಾಮೃತ ತೀರ್ಥವನ್ನು ಪ್ರಸಾದವನ್ನು ಕೊಟ್ಟರು.

"ರಾಜ ಅರ್ಚಕರಿಗೆ ನಮಸ್ಕಾರ ಮಾಡು" ಗೌರಮ್ಮ ಆದೇಶ ನೀಡಿದಳು. ಅರ್ಚಕರು ತಲೆಯ ಮೇಲೆ ಮಂತ್ರಾಕ್ಷತೆಯ ಕಾಳುಗಳನ್ನು ಹಾಕಿ ಆಶೀರ್ವದಿಸಿದರು.

"ಈ ಹುಡುಗ ಯಾರೋ ಗೊತ್ತಾಗ್ಲಿಲ್ಲ...."

"ನನ್ನ ಮೊಮ್ಮಗ... ರಾಜ ಹಿರಿಯರೆಲ್ಲರಿಗೂ ನಮಸ್ಕಾರಮಾಡು... ಇವತ್ತು ಇವನ ಹುಟ್ಟಿದ ಹಬ್ಬ. ಇವತ್ತಿಗೆ ಹದಿನೆಂಟು ವರ್ಷಗಳು ತುಂಬಿದವು."

"ನಿಮಗೊಬ್ಬ ಮೊಮ್ಮಗ ಇದಾನೆ ಅಂತ ಗೊತ್ತಿರಲೇ ಇಲ್ಲ..." ಅರ್ಚಕರು ಕುತೂಹಲದಿಂದ ಅವನ ಕಡೆ ನೋಡಿದರು.

"ಅವನ ಸೋದರ ಮಾವನ ಮನೇಲಿದ್ದುಕೊಂಡು ಓದುತ್ತಿದ್ದ. ಈಗ ಇಲ್ಲೇ ಇದಾನೆ" ಗೌರಮ್ಮನ ಜಾಣ್ಮೆಯ ಮಾತುಗಳನ್ನು ಕೇಶವ ಮೆಚ್ಚಿದ. ರಾಧಾಳ ಕಡೆ ನೋಡಿ ಮುಗುಳ್ನಕ್ಕ.

"ಅಮ್ಮಾ... ಎಲೆ ಹಾಕಿಸೋಣ್ವಾ? ಅರ್ಚಕರಿಗೆ ಹಸಿವಾಗಿರಬಹುದು" ಮಾತಿನ ಜಾಡನ್ನು ಬದಲಾಯಿಸಿದ.

"ನಂಜುಂಡಸ್ವಾಮಿ ಲಾಯರ್ರು ಯಾರೂ ಬರಲೇ ಇಲ್ಲವಲ್ಲೋ... ಎಲ್ಲರೂ ಕೈತೊಳಕೊಂಡ್ರು ಅಂತ ಕಾಣುತ್ತೆ."

"ತಡವಾಗಿ ಬರ್ತೀನಿ ಅಂತ ಫೋನು ಮಾಡಿದ್ರು.... ನಮಗೋಸ್ಕರ ಊಟಕ್ಕೆ ಕಾಯಬೇಡಿ ಅಂತ ಫೋನು ಮಾಡಿದ್ರು." ಸುಳ್ಳು ಹೇಳಿದ. ಸಾಲಾಗಿ ಬಾಳೆ ಎಲೆಗಳನ್ನು ಹಾಕಿ ನೀರಿನ ಲೋಟಗಳನ್ನಿಟ್ಟರು. ರಾಧಾ ಮಡಿಯಲ್ಲಿ

ಮಾಡಿದ್ದ ಅಡಿಗೆ ಪದಾರ್ಥಗಳನ್ನು ಅತ್ತೆಗೆಂದು ಸ್ವಲ್ಪ ಸ್ವಲ್ಪ ತೆಗೆದಿಟ್ಟು ಹೊರಬಂದಳು. ಅಕ್ಕತಂಗಿಯರೂ ಬಡಿಸಲು ನೆರವಾದರು.

"ರಾಜಣ್ಣ ಬರ್ಬೇಕಂತೆ. ಮಯೂರ ಕರೀತಿದಾಳೆ" ಮಂದಾರ ಬಂದು ರಾಜನ ಕೈಹಿಡಿದು ಎಳೆದು ಕರೆದುಕೊಂಡು ಬಂದಳು. ಮಯೂರ ಕೈಯಲ್ಲಿ ಬಣ್ಣದ ದಾರವನ್ನು ಹಿಡಿದುಕೊಂಡಿದ್ದಳು. ರಾಜ ಮುಗುಳ್ನಕ್ಕು ಕೈ ಮುಂದೆ ಮಾಡಿದ. ಮಯೂರ ಅವನ ಮುಂಗೈಗೆ ರಾಖಿಯನ್ನು ಕಟ್ಟಿದಳು. ಮಧುರ ಇನ್ನೊಂದನ್ನು ಮಂದಾರಳ ಕೈಗಿತ್ತಳು. ಮಂದಾರ ಖುಷಿಯಿಂದ ಕಟ್ಟಿದಳು.

"ನಂಗೊಂದಿದ್ರೆ ಕೊಡೇ.... ನಾನೂ ಕಟ್ತೀನಿ" ಚುನ್ನಿ ಕೇಳಿದಾಗ ಮಧುರ ರೇಗಿಸಿದಳು.

"ಬರೀ ಬಣ್ಣದ ದಾರ ಅಂತ ಅಂದೆ... ಬರೀ ಮೂರೇ ಇದ್ದದ್ದು.... ನಾನೇ ತಯಾರು ಮಾಡಿದ್ದು."

"ನಾನು ಸಾಯಂಕಾಲ ಅಂಗಡಿಯಿಂದ ಹೊಸದನ್ನು ತಂದುಕಟ್ತೀನಿ."

"ಈಗ ಹಬ್ಬ ಇಲ್ಲ. ಅಂಗಡಿಯಲ್ಲಿ ಸಿಗುಲ್ಲ. ಪರವಾಗಿಲ್ಲ ಬಿಡು. ನಿನಗೆ ಅವನು ಅಣ್ಣನಾಗಬೇಕಾಗಿಲ್ಲ. ನಿನಗೆ ಕಸಿನ್ ಮಾತ್ರ" ಮಯೂರ ಸಮಾಧಾನ ಹೇಳಿದಳು.

"ಎಲ್ರೂ ಏನ್ಮಾಡ್ತಿದೀರೇ... ಬಡಿಸಿದ್ದಾಗಿದೆ. ಊಟಕ್ಕೆ ಬರಬಾರ್ದಾ?" ಒಳಗಿನಿಂದ ಸತ್ಯವತಿ ಕರೆದಾಗ ಎಲ್ಲರೂ ಊಟದ ಮನೆಗೆ ಬಂದರು.

"ಇದೇನೋ ರಾಜ. ಕೈತುಂಬಾ ಬಣ್ಣದ ದಾರವನ್ನು ಕಟ್ಟಿಸಿಕೊಂಡಿದೀಯ?" ಸತ್ಯವತಿ ಪ್ರಶ್ನಿಸಿದಳು.

"ಹುಂ... ನನ್ನ ತಂಗಿಯರು ಕಟ್ಟಿದರು..." ಅವರುಗಳ ಕಡೆ ಅಭಿಮಾನದಿಂದ ನೋಡಿದ.

"ನಾನೂ ಕಟ್ತೀನಿ ಕಣಮ್ಮಾ... ನಂಗು ದುಡ್ಡು ಕೊಡು..." ವಿನೀತ ಕೇಳಿದಾಗ, ಹುಡುಗಿಯರು ಗೊಳ್ಳಂತ ನಕ್ಕರು.

"ಅವರು ಅವನ ತಂಗಿಯರು. ಅವನ ಹುಟ್ಟಿದ ಹಬ್ಬ ಅಂತ ಕಟ್ಟಿದಾರೆ. ಈಗ ಊಟಕ್ಕೆ ಕೂತ್ಕೋ. ಸಾಯಂಕಾಲಕ್ಕೆ ನೋಡೋಣ." ಮಕ್ಕಳೆಲ್ಲರೂ ಸಾಲಾಗಿ ಕುಳಿತಮೇಲೆ, ಮತ್ತೆ ಬಡಿಸಲು ಪ್ರಾರಂಭಿಸಿದರು. ಹಬ್ಬದ ಅಡಿಗೆ

ಬಲು ರುಚಿಯಾಗಿತ್ತು. ಊಟ ಮುಗಿಯುವ ಹಂತದಲ್ಲಿದ್ದಾಗ ಫೋನು ರಿಂಗಾಯಿತು. ರಾಧಾ ಫೋನನ್ನೆತ್ತಿಕೊಂಡಳು.

* * * *

ಅರ್ಚಕರು ಊಟ ಮುಗಿಸಿ, ಫಲ ತಾಂಬೂಲವನ್ನು ದಕ್ಷಿಣೆಯನ್ನು ತೆಗೆದುಕೊಂಡು ಹೊರಟುಹೋಗಿದ್ದರು. ಗೌರಮ್ಮನ ಊಟವೂ ಮುಗಿದಿತ್ತು. ರಾಧಾ, ತನ್ನ ಅತ್ತಿಗೆಯರೊಂದಿಗೆ ಊಟಕ್ಕೆ ಕುಳಿತುಕೊಳ್ಳುವ ಮೊದಲು ಕೇಶವನೊಡನೆ ಹೇಳಿದಳು.

"ನಂಜುಂಡಸ್ವಾಮಿ ಫೋನು ಮಾಡಿದ್ದರು. ಅವರು ಆಶ್ರಮದಲ್ಲಿದಾರಂತೆ. ನಿಮ್ಮ ಅಣ್ಣ ರಾಜನನ್ನು ನೋಡಬೇಕು ಅಂತ ಅಪೇಕ್ಷೆ ಪಡ್ತಿದಾರಂತೆ. ಕರ್ಕೊಂಡು ಹೋಗ್ಬೇಕಂತೆ. ಅವರು ವ್ಯಾನು ಕಳಿಸ್ತಾರಂತೆ."

"ಅವನನ್ನೇ ಕರ್ಕೊಂಡು ಬರಬಹುದಾಗಿತ್ತಲ್ಲ."

"ಕರೆಯದೇ ಅವರು ಹೇಗೆ ಬರ್ತಾರೆ? ನಿಮ್ಮಮ್ಮ ಒಪ್ಪಬೇಕಲ್ಲ. ರಾಜನನ್ನು ನಿಮ್ಮ ಅಕ್ಕಂದಿರನ್ನು ಕರೆದುಕೊಂಡು ಹೋಗ್ಬನ್ನಿ. ಅವರಿಗೂ ಸಂತೋಷವಾಗುತ್ತೆ.

"ವ್ಯಾನು ಬರುತ್ತಲ್ಲ. ಎಲ್ಲರೂ ಹೋಗಿ ಬಂದುಬಿಡೋಣ. ಬೇಗ ಬೇಗ ಊಟ ಮಾಡಿಬಿಡಿ. ಅವನು ತನ್ನ ತಾಯಿಯೊಡನೆ ಮಾತನಾಡಲೆಂದು ಹಿತ್ತಲಿಗೆ ಬಂದ. ರಾಧಾ, ಅತ್ತಿಗೆಯರಿಗೆ ವಿಷಯವನ್ನು ತಿಳಿಸಿದಳು. ಎಲ್ಲರೂ ಬೇಗ ಬೇಗ ಊಟವನ್ನು ಮುಗಿಸಿ ಸಿದ್ಧರಾದರು. ವ್ಯಾನು ಬಂದು ನಿಂತಕೂಡಲೇ ಎಲ್ಲರೂ ಹತ್ತಿದರು. ವ್ಯಾನು ಆಶ್ರಮದ ದಾರಿಯನ್ನು ಹಿಡಿಯಿತು.

* * * *

ಆಶ್ರಮದ ಮಹಾದ್ವಾರದಲ್ಲಿ ಇವರುಗಳಿಗಾಗಿಯೇ ಕಾಯುತ್ತಾ ನಿಂತಿದ್ದ ನಂಜುಂಡಸ್ವಾಮಿ, ಹಾಗೂ ಸಂಗಡಿಗರು ಎಲ್ಲರನ್ನು ಅಲ್ಲಿಯ ಅತಿಥಿಗೃಹಕ್ಕೆ ಕರೆದೊಯ್ದರು. ಅಲ್ಲಿ ಎಲ್ಲರೂ ಕಾಫಿ ತಿಂಡಿಯನ್ನು ಸ್ವೀಕರಿಸಿ, ನಂತರ ಸ್ವಾಮೀಜಿಯ ದರ್ಶನವನ್ನು ಪಡೆದು ಆಶ್ರಮದ ಉದ್ಯಾನವನಕ್ಕೆ ಬಂದರು. ನಂಜುಂಡಸ್ವಾಮಿ, ಕೇಶವನ ಕಿವಿಯಲ್ಲಿ ಏನೋ ಉಸುರಿದರು. ಕೇಶವ ತನ್ನ ಹೆಂಡತಿ ಮಕ್ಕಳನ್ನು ಕರೆದುಕೊಂಡು, ಒಂದು ಕುಟೀರಕ್ಕೆ ಬಂದ. ಅಲ್ಲಿ ಅವನ ಅಣ್ಣ ಇವರುಗಳಿಗಾಗಿ ಕಾಯುತ್ತಾ ಕೂತಿದ್ದ. ಕೇಶವ ಅವನಿಗೆ ಕೈಮುಗಿದು ತನ್ನ

ಪರಿವಾರದವರನ್ನು ಪರಿಚಯ ಮಾಡಿಕೊಟ್ಟ. ಮಕ್ಕಳಿಗೆ, ಅವನಿಗೆ ನಮಸ್ಕರಿಸುವಂತೆ ಹೇಳಿದ. "ದೇವರು ಒಳ್ಳೇದು ಮಾಡಲಿ" ಮೂರ್ತಿ ಹಾರೈಸಿದ. ಎಲ್ಲರೂ ಹಿಂತಿರುಗುವಾಗ, ಮೂರ್ತಿ ಕೇಶವನ ಕೈಹಿಡಿದು ನಿಲ್ಲಿಸಿಕೊಂಡ. ಉಳಿದವರು ಮುಂದೆ ಮುಂದೆ ಹೊರಟುಹೋಗಿದ್ದರು.

"ಥ್ಯಾಂಕ್ಸ್ ಕಣೋ ಕೇಶವಾ.... ನಿನ್ನ ಈ ಉಪಕಾರದ ಋಣವನ್ನು ನಾನು ಹೇಗೆ ತೀರಿಸಲಿ?"

"ದೊಡ್ಡ ಮಾತುಗಳೆಲ್ಲ ಬೇಡ. ನಾನು ನಿನ್ನ ಮಾತನ್ನು ನಡೆಸಿಕೊಟ್ಟಿದೀನಿ. ನನ್ನ ಹೆಂಡತಿಗೂ ಯಾವ ಅಭ್ಯಂತರವಿರಲಿಲ್ಲ. ಅವಳಾಗಿಯೇ ಈ ಮಾತನ್ನು ಎತ್ತಿದಳು. ಅಮ್ಮನದೇ ಸ್ವಲ್ಪ ತಕರಾರು."

"ಅಮ್ಮನ ಮನಸ್ಸನ್ನು ನಾನು ನೋಯಿಸಿಬಿಟ್ಟಿದೀನಿ ಕಣೋ... ಅಮ್ಮನ ಹತ್ರ ಮಾತನಾಡಬೇಕು ಅಂತ ಅನ್ನಿಸ್ತಿದೆ. ಕರ್ಕೊಂಡು ಬರ್ತೀಯ."

"ಕರ್ಕಂಡು ಬರ್ತೀನಿ. ಅಮ್ಮ ಏನಾದ್ರೂ ಆಡಿದ್ರೂ ನೀನು ಸುಮ್ಮನಿರಬೇಕು. ಅವಳೀಗ ಹರ್ಷದಲ್ಲಿದ್ದಾಳೆ." ಮೂರ್ತಿ ಮತ್ತೊಮ್ಮೆ ಥ್ಯಾಂಕ್ಸ್ ಹೇಳಿದ. ಕೇಶವ ತಾಯಿಯನ್ನು ಕರೆದುಕೊಂಡು ಬಂದ. ಮೂರ್ತಿ ತಾಯಿಯನ್ನು ಕಂಡೊಡನೆ ಕಾಲಿಗೆ ಬಿದ್ದು ದೀರ್ಘ ದಂಡ ನಮಸ್ಕಾರಹಾಕಿದ.

"ಸಾಕು ಏಳು ಅತಿಯಾಯ್ತು.."

"ಅಂತೂ ನಿನ್ನ ಹೃದಯ ದೊಡ್ಡದು ಅಂತ ತೋರಿಸಿಬಿಟ್ಟೆ."

"ಇದೇ ನೋಡು ತಾಯಿಗೂ ಮಕ್ಕಳಿಗೂ ಇರುವ ವ್ಯತ್ಯಾಸ. ಮಕ್ಕಳು ಮಾಡಿದ್ದನ್ನೆಲ್ಲಾ ತಾಯಿ ನುಂಗಿಕೊಂಡು ಸಹಿಸುತ್ತಾಳೆ. ನೀನು ಮಾಡಿದ ತಪ್ಪಿಗೆ ನಿನ್ನ ಮಗನಿಗ್ಯಾಕೆ ಶಿಕ್ಷೆ ಆಗಬೇಕು? ಇನ್ನು ಅವನು ನಿನ್ನ ಮಗ ಎನ್ನುವುದನ್ನು ಮರೆತುಬಿಡು. ರಾಧಂದು ದೊಡ್ಡ ಹೃದಯ. ಗಂಡನನ್ನು ಒಲಿಸಿ, ಒಪ್ಪಿಸಿದಾಳೆ. ಇಲ್ದಿದ್ರೆ ನಿನ್ನ ಮಗನಿಗೆ ಆಮನೇಲಿ ಜಾಗ ಎಲ್ಲಿ ಇರ್ತಿತ್ತು?"

"ನನ್ನ ಭಾಗದ ಆಸ್ತಿಯನ್ನೆಲ್ಲಾ ನನ್ನ ಮಗನಿಗೆ ಕೊಡ್ತೀಯ ಅಲ್ವೇನಮ್ಮ? ಅವನಿಗೆ ಮೋಸ ಆಗುಲ್ಲ ಅಂತ ಅಂದುಕೊಂಡಿದೀನಿ."

"ಅಯ್ಯೋ ಹುಚ್ಚು ಮುಂಡೇಗಂಡ, ಸಂಸಾರವೇ ಇಲ್ಲದೇ ಪರದೇಶಿಯಂತೆ ಜೈಲಿನಲ್ಲಿದ್ದು, ಈಗ ಅಜ್ಞಾತವಾಸದಲ್ಲಿದೀಯ. ನಿನಗೇಕೆ ಆಸ್ತಿಯ ಚಿಂತೆ! ನಿಮ್ಮಪ್ಪ ಏನು ಆಸ್ತಿ ಮಾಡಿಟ್ಟಿದ್ದರು? ಇದ್ದದ್ದನ್ನೆಲ್ಲಾ ಹೆಣ್ಣು ಮಕ್ಕಳ ಮದುವೇಲಿ ಮಾರಿದ್ದಾಯ್ತು. ಈಗ ಇರುವುದೆಲ್ಲಾ ಕೇಶವಂದು. ಅವನ ಸ್ವಂತದ್ದು. ಅದರಲ್ಲಿ ನಿನ್ನ ಮಗನಿಗೂ ಅಲ್ಲ, ನನ್ನ ಮೊಮ್ಮಗನಿಗೂ

ಪಾಲು ಇದೆ. ಇನ್ನು ನೀನು ಅವನ ಚಿಂತೆಯನ್ನು ಬಿಡು. ಪದೇ ಪದೇ ಕರೆಸುವುದಾಗಲೀ, ನೋಡುವುದಾಗಲೀ, ಮಾತನಾಡುವುದಾಗಲೀ ಮಾಡುಲ್ಲ ಅಂತ ಭಾಷೆ ಕೊಡು. ರಾಜ ಅಭಿವೃದ್ಧಿಗೆ ಬರಬೇಕು ಅಂತ ಇದ್ದರೆ, ನೀನು ಇದನ್ನು ನಡೆಸಿಕೊಡಲೇಬೇಕು. ಇಲ್ಲದಿದ್ದರೆ ನಿನ್ನ ಮಗನ ಭವಿಷ್ಯ ಹಾಳಾಗುತ್ತದೆ. ನಾನಿನ್ನೂ ಹೊರಡ್ತೀನಿ."

"ಅಮ್ಮ.... ನನ್ನ ತಪ್ಪನ್ನು ಕ್ಷಮಿಸಿದೀಯ ಅಲ್ವೇನಮ್ಮ?...

"ನಿನ್ನನ್ನು ಕ್ಷಮಿಸಿಬಿಟ್ಟರೆ, ಆ ಕಹಿಪ್ರಸಂಗ ಅಳಿಸಿ ಹೋಗುತ್ತಾ? ಆ ಕಹಿ ನೆನಪುಗಳು ಮರೆಯಾಗುತ್ತಾ! ನಾನು ಬದುಕಿರುವರೆಗೂ, ನನ್ನನ್ನು ಸತಾಯಿಸುತ್ತಲೇ ಇರುತ್ತದೆ.... ನಾನು ಹೇಗೆ ಕ್ಷಮಿಸಲಿ.? ನಿನ್ನ ಹೆಂಡತಿಯದು ಯಾವ ತಪ್ಪು ಇರಲಿಲ್ಲ.... ಅವಳ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ನನ್ನ ಮನೆಯಲ್ಲಿ ನನ್ನ ಮನದಲ್ಲಿ ಸ್ಥಾನ ಕೊಟ್ಟಿದೀನಿ. ಇದ್ದಕ್ಕಿಂತ ಹೆಚ್ಚಿನದನ್ನೇನೂ ಅಪೇಕ್ಷಿಸಬೇಡ."

"ನನ್ನ ಮೇಲಿನ ಸಿಟ್ಟನ್ನು ನನ್ನ ಮಗನ ಮೇಲೆ ತೋರಿಸುವುದಿಲ್ಲ ತಾನೇ?"

"ಛೀ ಪಾಪಿ.... ನಿನ್ನ ಅಂತರಂಗ ಶುದ್ಧವಾಗಿಲ್ಲ. ನಿನ್ನಂಥೋನಿಗೆ ಇಂಥ ಆಶ್ರಮದಲ್ಲಿ ಇರುವ ಅರ್ಹತೆಯೇ ಇಲ್ಲ. ನೀನು ಉದ್ಧಾರವಾಗುಲ್ಲ."

"ಅಮ್ಮಾ ನೀನು ಹೀಗೆಲ್ಲಾ ಮಾತನಾಡಿದರೆ, ನಾನು ಬದಲಾಗುವುದಾದರೂ ಹೇಗೆ? ನಾನು ಕೇಶವನಿಗೆ ಭಾಷೆ ಕೊಟ್ಟಿದೀನಿ. ನಿನ್ನ ಮನಸ್ಸನ್ನು ಮತ್ತೆ ಮತ್ತೆ ನೋಯಿಸುವುದಿಲ್ಲಅಂತ. ಇನ್ನು ಮುಂದೆ ನನ್ನಿಂದ ನಿನಗೆ ಯಾವ ನೋವೂ ಉಂಟಾಗುವುದಿಲ್ಲ. ಇದೇ ಕೊನೆಯ ನಮಸ್ಕಾರ." ಅವನು ಮತ್ತೊಮ್ಮೆ ಕಾಲಿಗೆ ಬಿದ್ದ.

ಅವಳು ಕಲ್ಲಿನಂತೆ ಹಾಗೇ ನಿಂತಿದ್ದಳು. "ಅಜ್ಜೀ.... ಅಜ್ಜೀ" ಎನ್ನುತ್ತಾ ರಾಜ ವೇಗವಾಗಿ ಬಂದ. ಮೂರ್ತಿ ಎದ್ದುನಿಂತ. "ಅಜ್ಜಿ ಬರ್ಬೇಕಂತೆ, ಅಪ್ಪ ಕರೀತಿದಾರೆ..."

"ಹುಂ.ನಡೀ ಮಗು..." ಗೌರಮ್ಮ ಹಿಂತಿರುಗಿ ನೋಡದೇ ಮುಂದೆ ಮುಂದೆ ನಡೆದಳು. ರಾಜ ಮಾತ್ರ ಒಂದೆರಡು ಸಲ ತಿರುಗಿ ನೋಡಿದ... ಮೂರ್ತಿಯ ಹೃದಯ ಕಲಕಿತು. ತನ್ನ ರಕ್ತವನ್ನು ಹಂಚಿಕೊಂಡು, ತನ್ನಷ್ಟೇ ಎತ್ತರಕ್ಕೆ ಬೆಳೆದಿರುವ ಮಗ... ಮಗನನ್ನು ಮನಸಾರೆ ನೋಡಿ ಮುದ್ದಿಸುವ ಭಾಗ್ಯ ತನಗಿರಲಿಲ್ಲ. ಸಾಕಿಸಲಹಿ ಪೋಷಿಸುವ ಯೋಗ್ಯತೆ ಇರಲಿಲ್ಲ.

ಹೋಗಲಿ ಒಟ್ಟಿಗೇ ಇರುವ ಅದೃಷ್ಟವೂ ತನಗಿಲ್ಲ. ತಾನೆಂಥಾ ಪಾಪಿ. ಅವನ ಹೃದಯ ಅತ್ತಿತು. ಕಣ್ಣೀರು ಹನಿಗಳು ಉದುರಿದವು. ಮತ್ತೊಮ್ಮೆ ರಾಜ ತಿರುಗಿದಾಗ, ಪ್ರಯತ್ನದಿಂದ ಬಲಗೈಯನ್ನು ಎತ್ತಿ ಆಡಿಸಿದ. ರಾಜನೂ ಪ್ರತಿಯಾಗಿ ಕೈಯಾಡಿಸಿದಾಗ, ಅವನ ಹೃದಯ ಸಂತಪ್ತಿಯಿಂದ ನಕ್ಕಿತು. ತುಟಿಗಳು ಬಿರಿದವು. ಮಂದಹಾಸ ಕಂಡೂ ಕಾಣದಂತೆ ಮಿನುಗಿತು. ತಾಯಿಯ ಪಕ್ಕದಲ್ಲಿ ತಾನೇ ಹೆಜ್ಜೆ ಹಾಕುತ್ತಿರುವಂತೆ ಭಾಸವಾಯಿತು. ಅವರಿಬ್ಬರೂ ಕಣ್ಣಿಗೆ ಗೋಚರವಾಗುವವರೆಗೂ ಅಲ್ಲಿಯೇ ನಿಂತಿದ್ದ.

ಎಲ್ಲರೂ ಮತ್ತೊಮ್ಮೆ ಅತಿಥಿಗೃಹಕ್ಕೆ ಬಂದರು. ನಂಜುಂಡಸ್ವಾಮಿ ಮತ್ತೊಮ್ಮೆ ಪ್ರತ್ಯಕ್ಷನಾದ. ನೆನ್ನೆ ದಿನ ಈ ಆಶ್ರಮದ ವಾರ್ಷಿಕೋತ್ಸವ ಸಮಾರಂಭ ನೆರವೇರಿತು. ಈ ದಿನ ನೀವು ಅತಿಥಿಗಳಾಗಿ ಆಗಮಿಸಿದ್ದಿರಿ. ಎಲ್ಲರೂ ಊಟ ಮಾಡಿಕೊಂಡು ಹೋಗಬೇಕೆಂದು ಸ್ವಾಮೀಜಿಗಳ ಅಪ್ಪಣೆಯಾಗಿದೆ." ಆತ ಕೈಮುಗಿದು ವಿನಂತಿಸಿಕೊಂಡ. ಎರಡು ತಿಂಗಳ ಹಿಂದೆ ತಾವು ಇಲ್ಲಿಗೆ ಬಂದಿದ್ದ ಗಳಿಗೆಯನ್ನೂ ಎಲ್ಲರೂ ನೆನಪಿಸಿಕೊಂಡರು.

"ನನ್ನ ಮಗ ಬರ್ತೀನಿ ಅಂತ ಅಂದೋನು ಬರಲೇ ಇಲ್ಲ. ಇಂಥದ್ದನ್ನೆಲ್ಲಾ ಕಣ್ಣಾರೆ ನೋಡಿ ಅನುಭವಿಸುವ ಭಾಗ್ಯವೇ ಇಲ್ಲ. ಯಾವಾಗ ನೋಡಿದರೂ ಅದೇನೋ ಬಿಸಿ" ಪ್ರಭಾವತಿ ಪೇಚಾಡಿದಳು.

"ದೊಡ್ಡಮ್ಮ... ಆ ಸಾರಿ ಎಷ್ಟು ಮಜಾ ಇತ್ತು ಅಲ್ವಾ! ಈ ಸಾರಿ ಯಾಕೋ ಹಾಗೆ ಅನ್ನಿಸ್ತಾನೇ ಇಲ್ಲ" ಚುನ್ನಿ ನುಡಿದಳು.

"ಹೌದು ಕಣೇ ಅಕ್ಕ... ಆಗ ಮನಸ್ಸು ನಿರಾಳವಾಗಿತ್ತು. ಈ ಸಾರಿ ಯಾಕೋ ಏನೋ ಹೃದಯ ಕುದಿದು ಹೋಗ್ತಿದೆ."

"ಅಂಥಾದ್ದೇನಾಯ್ತಮ್ಮ... ಅಸಿಡಿಟೀನಾ?" ಚುನ್ನಿ ನಗುತ್ತಾ ಪ್ರಶ್ನಿಸಿದಳು.

"ಅದೆಲ್ಲಾ ನಿಂಗ್ಯಾಕೆ? ಕಾಲ ಒಂದೇ ಥರ ಇರುಲ್ಲ. ಕೆಲವನ್ನು ಮರೇತಿಬಿಟ್ಟಿರುತ್ತೀವಿ. ಅದೇ ವಾಸಿ ಅಂತ ಅನ್ನಿಸುತ್ತೆ."

"ಈಗ ಅದೆಂಥಾ ನೆನಪು ನಿನ್ನನ್ನ ಕಾಡ್ತು ಇರೋದು. ಅಪ್ಪಂಗೆ ಹೇಳ್ಲಾ?"

"ಹೇಳ್ಕೋ ಹೋಗೇ ಇವಳೊಬ್ಳು ಅಪ್ಪನ ಮಗಳು. ನೋಡು, ನಿನ್ನ ಕೇಶವಮಾವನ ಮಕ್ಕಳು ಹೇಗಿದಾರೆ... ಎಷ್ಟು ಯೋಗ್ಯರು.."

"ನಾವೂ ಯೋಗ್ಯರೇ. ನಮ್ಮ ಯೋಗ್ಯತೆಯಲ್ಲಿ ಏನೂ ಕಡಿಮೆ ಆಗಿಲ್ಲ. ಅತ್ತೆ ತುಂಬಾ ಒಳ್ಳೆಯವರು. ಮೂವರನ್ನು ಒಂದೇ ಥರ ನೋಡ್ತಾರೆ. ನೀನು? ನಿನಗೆ ನಿನ್ನ ಮಗ ಆ ಕಮಂಗೀನೇ ಹೆಚ್ಚು" ಅವಳೂ ಮೂದಲಿಸಿದಳು.

"ಇದಕ್ಕೇ ನೋಡು ನಾನು ಬೈಯೋದು. ಈಗ ಅವನೇನು ಮಾಡ್ದ! ಅವನು ನಿನ್ನ ಬೆನ್ನಲ್ಲಿ ಬಿದ್ದ ತಮ್ಮ ಕಣೇ. ಶತ್ರು ಅಲ್ಲ. ಆ ಹುಡುಗೀರನ್ನ ನೋಡು. ರಾಜನ ಬಗ್ಗೆ ಎಷ್ಟು ಪ್ರೀತಿ ಇದೆ ಗೌರವ ಇದೆ."

"ಅವನು ರೆಡಿಮೇಡ್ ಅಣ್ಣಾ.... ದೊಡ್ಡೋನು ಅವನಿಗೆ ಹೆದರ್ತಾರೆ. ಇವನಿಗೆ ನಾನ್ಯಾಕೇ ಹೆದರ್ಬೇಕು. ನನ್ನ ತಮ್ಮ ಅಲ್ವಾ!"

"ನಿನಗೆ ಹೇಳುಕ್ಕಾಗುಲ್ಲ. ಏನಾದ್ರೂ ಮಾಡ್ಕೋ..." ಚುನ್ನಿ ಅಲ್ಲಿಂದ ಎದ್ದು ಹೋಗಿದ್ದಳು.

"ರಾಧಾ, ಕೇಶವಂಗೆ ಇಷ್ಟವಾದ್ರೆ, ಮುಂದೆ ನಿನ್ನ ಮಗಳನ್ನ ಸೊಸೆಯನ್ನಾಗಿ ಮನೆ ತುಂಬಿಸಿಕೊಳ್ಳಬಹುದು. ಕೇಳಿ ನೋಡು."

"ಈಗಲೇ ಅದೆಲ್ಲಾ ಬೇಡ ಅಕ್ಕ. ಚುನ್ನಿ ಈ ಮನೆಗೆ ಹಿರಿಯ ಸೊಸೆಯಾಗಿ ಬಂದರೆ, ಅವಳ ಜವಾಬ್ದಾರಿ ಹೆಚ್ಚುತ್ತೆ. ಮೂರು ಮೂರು ಜನ ನಾದಿನಿಯರು ಹುರಿದು ಮುಕ್ಕಿಬಿಡ್ತಾರೆ ಅಷ್ಟೇ."

"ಈಗ್ತಾನೇ ಯೋಗ್ಯರು ಅಂತಂದೆ."

"ಅನ್ನೋಕೆ ಏನು ಕಷ್ಟಪಡಬೇಕು?... ಅಲ್ಲದೇ ರಾಜನ ಬಗ್ಗೆ ನಮಗೇನು ಗೊತ್ತಿದೆ? ಅಪ್ಪನಂತೆ ಗುಣವಂತನಾದರೆ?..."

"ಅಲ್ವೇ ನಾವು ಮೂರ್ತಿನ ಮಾತನಾಡಿಸಲೇ ಇಲ್ಲವಲ್ಲ. ಏನಂದುಕೊಂಡನೋ ಏನೋ...?"

"ಭಾವನ್ನ ಕೇಳಿ ನೋಡು... ಹೋಗಿಬರೋಣ."

"ಬೇಡ. ನಿಮ್ಮ ಭಾವಂಗಾಗ್ಲೀ, ನಿನ್ನ ಗಂಡಂಗಾಗ್ಲೀ ಮೂರ್ತಿ ಇಲ್ಲಿದಾನೆ ಅಂತ ಗೊತ್ತಿಲ್ಲ. ಅದು ಬಹಿರಂಗವಾಗದಿದ್ದರೇ ವಾಸಿ..."

"ಒಂದಲ್ಲ ಒಂದು ದಿನ ಗೊತ್ತಾದಾಗ, ಹಂಗಿಸದೇ ಇರುವುದಿಲ್ಲ."

"ಆ ಕಾಲ ಬಂದಾಗ ನೋಡಿಕೊಳ್ಳೋಣ. ಕಳೆದ ಸಾರಿಯಂತೆ, ನಾವುಗಳೇ ಇದ್ದಿದ್ರೆ ಹೋಗಿ ಮಾತನಾಡಿಸಬಹುದಾಗಿತ್ತು. ಅಣ್ಣನ ಬಗ್ಗೆ ನಾನಂತೂ ನನ್ನ ಗಂಡನಿಗೆ ಏನನ್ನು ಹೇಳಿಲ್ಲ. ನೀನು?"

"ನಾನೂ ಹೇಳಿಲ್ಲ. ಏನಂತ ಹೇಳೋದು?... ನಮಗೂ ಸರಿಯಾಗಿ ಗೊತ್ತಿಲ್ಲ. ಅಮ್ಮನ್ನ ಕೇಳೋ ಧೈರ್ಯವಿರಲಿಲ್ಲ."

"ಅಪ್ಪ ಅಮ್ಮನ್ನ, ಮನೆಬಿಟ್ಟು ಹೋದವನ ಬಗ್ಗೆ ಹೇಳಿಕೊಂಡ್ರೆ ಸಾಕು. ಅದಕ್ಕಿಂತ ಬೇಜಾರಾದ್ದು ಏನಿದೆ?

"ಅಣ್ಣ.... ಅಣ್ಣನ ಮಗ ಅಂತ ಹೆಮ್ಮೆಯಿಂದ ಹೇಳಿಕೊಳ್ಳದ ಹಾಗೆ ಮಾಡಿಬಿಟ್ಟ." ಇಬ್ಬರೂ ನಿಟ್ಟುಸಿರುಬಿಟ್ಟರು.

"ಎಲ್ಲರೂ ಊಟದ ಮನೆಗೆ ಬಂದರು. ನಂಜುಂಡಸ್ವಾಮಿಯ ನೇತೃತ್ವದಲ್ಲಿ ಎಲ್ಲರಿಗೂ ಸಿಹಿ ಅಡುಗೆಯ ಊಟವನ್ನು ಬಡಿಸಿದರು. ದೂರದಲ್ಲಿ ನಿಂತು ಮೂರ್ತಿ ಎಲ್ಲರನ್ನು ನೋಡುತ್ತಿದ್ದ. ಅವನ ಕಣ್ಣುಗಳಲ್ಲಿ ನೀರು ತುಂಬಿತ್ತು. ನಂಜುಂಡಸ್ವಾಮಿಗೆ ಮನದಲ್ಲೇ ಕೃತಜ್ಞತೆಗಳನ್ನು ಸಲ್ಲಿಸಿದ. ಊಟವಾದ ನಂತರ ಎಲ್ಲರಿಗೂ ಹಣ್ಣುಗಳನ್ನು ಕೊಟ್ಟರು. ನಂಜುಂಡಸ್ವಾಮಿ ಹೊರಡುವ ಮೊದಲು ಗೌರಮ್ಮನವರ ಕಾಲುಗಳಿಗೆ ಎರಗಿದ. ಗೌರಮ್ಮ ಮೌನವಾಗಿಯೇ ಆಶೀರ್ವದಿಸಿದಳು. ಅವಳ ಮನ ದುಗುಡಗಳಿಂದ ತುಂಬಿಹೋಗಿತ್ತು. ಆ ಕಾರಣದಿಂದ ಯಾರೂ ಎಷ್ಟೇ ಹೇಳಿದರೂ ಫಲಾಹಾರವನ್ನು ತೆಗೆದುಕೊಂಡಿರಲಿಲ್ಲ. ಎಲ್ಲರೂ ವ್ಯಾನನ್ನು ಹತ್ತಿದರು. ವ್ಯಾನು ಆಶ್ರಮದ ಮುಖ್ಯದ್ವಾರದಿಂದ ಹೊರಕ್ಕೆ ರಸ್ತೆಗೆ ಇಳಿಯಿತು. ಗೇಟಿನ ಬಳಿ ನಿಂತಿದ್ದ ವಾಚ್‌ಮನೆ ಸಲಾಮು ಹೊಡೆದು ಬಾಗಿಲನ್ನು ಹಾಕಿಕೊಂಡ.

ಎಲ್ಲರೂ ಕುಳಿತಿದ್ದ ಸೀಟಿನಲ್ಲೇ ಹಿಂದಕ್ಕೆ ಒರಗಿದರು. ಕೆಲವರಿಗೆ ನಿದ್ದೆ ಮಂಪರು. ಕೆಲವರಿಗೆ ಆಲೋಚನೆಗಳು. ಮಾತನಾಡಲು ಸಾಕಷ್ಟು ವಿಷಯಗಳಿದ್ದರೂ, ಯಾರಿಗೂ ಮಾತು ಬೇಕಿಲಲಿಲ್ಲ. ಎರಡು ತಿಂಗಳ ಹಿಂದೆ ಇದೇ ಆಶ್ರಮಕ್ಕೆ ಬಂದಾಗ ಮೊಟ್ಟಮೊದಲನೆಯ ಅನುಭವಕ್ಕೂ, ಈ ಬಾರಿಯ ಅನುಭವಕ್ಕೂ ನಡುವೆ ಸಾಕಷ್ಟು ವಿಷಯಗಳು, ಚರ್ಚೆಗಳು, ಪಡೆದುಕೊಂಡದ್ದು, ಕಳೆದುಕೊಂಡದ್ದು.

"ಅಣ್ಣ ಹೊರಕ್ಕೇ ಉಳಿದುಬಿಟ್ಟ. ಮತ್ತೆ ನಮ್ಮ ಸಂಸಾರಕ್ಕೆ ಸೇರಲಿಲ್ಲ. ಸೇರುವ ಆಸೆ ಅವನಿಗಿರಲಿಲ್ಲವೋ ಅಥವಾ ನಮ್ಮೆಲ್ಲರಿಗೂ ಇರಲಿಲ್ಲವೋ. ಕೇಶವ ತನ್ನಲ್ಲೇ ಚಿಂತಿಸುತ್ತಿದ್ದ ಇನ್ನು ನನ್ನ ಜವಾಬ್ದಾರಿ ಹೆಚ್ಚಾಯಿತು. ಹೊತ್ತ ಜವಾಬ್ದಾರಿಯನ್ನು ಸರಿಯಾಗಿ ಪಾಲಿಸಲೇಬೇಕು.... ಇಲ್ಲದಿದ್ದರೆ ಅಪವಾದ ಬರುವುದು ಖಂಡಿತಾ... ಪಕ್ಕದಲ್ಲಿ ಕುಳಿತಿದ್ದ ಹೆಂಡತಿಯ ಕಡೆ ತಿರುಗಿದ ಕೇಶವ. ಅವಳು ಕಣ್ಣು ಮುಚ್ಚಿರುವಂತೆ ಅನ್ನಿಸಿತು. ನಿದ್ದೆ ಮಾಡುತ್ತಿರಬಹುದು

ಎಬ್ಬಿಸುವುದು ಬೇಡ ಎಂದುಕೊಂಡ. ಈ ಎಲ್ಲಾ ಕ್ರಿಯೆಗಳಿಗೂ ರಾಧಾಳೇ ಕಾರಣ. ತನಗೆ ಒಂದು ಗಂಡು ಮಗುವನ್ನು ಹೆತ್ತುಕೊಡಲಿಲ್ಲವೆಂಬ ಕೊರತೆ ಅವಳನ್ನು ಬಾಧಿಸುತ್ತಿತ್ತೇನೋ... ಮಗನನ್ನು ಪಡೆದಳು. ಮನೆಯನ್ನು ಉಳಿಸಿದಳು. ರಾಧಾ ಬಾಹ್ಯದಲ್ಲಿ ಎಷ್ಟು ಸುಂದರಿಯೋ, ಅಂತರಂಗ ದಲ್ಲಿಯೂ ಸೌಂದರ್ಯವುಳ್ಳವಳು. ಇಂಥ ಹೆಂಡತಿ ಸಿಕ್ಕಿದ್ದು ನನ್ನ ಪುಣ್ಯ. ಅವನ ಹೃದಯ ಹೆಮ್ಮೆಯಿಂದ ಬೀಗಿತು. ಇನ್ನೆಂದೂ ಅಮ್ಮ ಗಂಡು ಮಕ್ಕಳಿಲ್ಲವೆಂದು ಹಂಗಿಸಿ ಆಡುವಂತಿಲ್ಲ. ಅವಳ ಬಾಯಿಯನ್ನು ಕಟ್ಟಿದಂತಾಯಿತು. ಮಕ್ಕಳೇನೋ ಈಗ ಚಿಕ್ಕವರು. ಮುಂದೆ ಬೆಳೆದು ದೊಡ್ಡವರಾದಂತೆ ಅವರವರ ಮನದಲ್ಲಿ ಏನೇನು ಭಾವನೆಗಳು ಮೂಡುತ್ತದೆಯೋ...? ರಾಜ ಹೇಗೂ ಇಂಜಿನಿಯರ್ ಆಗುತ್ತಾನೆ. ಮಧುರ ಸಂಗೀತ ವಿದುಷಿಯಾಗಬೇಕು, ಮಯೂರ ನಾಟ್ಯ ಕಲಾವಿದೆಯಾಗಬೇಕು... ರಾಧಾಳಿಗೆ ಈ ಆಸೆಗಳು ಇವೆ. ಇವೆಲ್ಲಕ್ಕಿಂತ ಮುಖ್ಯವಾಗಿ ಸರಿಯಾದ ಶಿಕ್ಷಣವನ್ನು ಕೊಡಿಸಿ, ಅವರವರ ಕಾಲುಗಳ ಮೇಲೆ ಅವರುಗಳು ಸ್ವಾವಲಂಬಿಗಳಾಗಿ ನಿಲ್ಲುವಂತೆ ಮಾಡಬೇಕು. ಗಕ್ಕನೆ ಗಾಡಿ ನಿಂತಾಗ, ಅವನ ಆಲೋಚನೆಗಳೂ ನಿಂತವು. ಎಲ್ಲರೂ ಎಚ್ಚರಗೊಂಡಿದ್ದರು... ಎಲ್ಲರೂ ಮನೆಯನ್ನು ಸೇರಿದಾಗ ಮಧ್ಯರಾತ್ರಿಯಾಗಿತ್ತು.

* * * *

ಬೆಳಗಿನ ಝಾವ ಕಳೆದು, ತಂಗಾಳಿ ಬೀಸುವಾಗ ಮಧುರಳಿಗೆ ಎಚ್ಚರವಾಗಿತ್ತು. ತಾನು, ಎರಡು ತಿಂಗಳ ನಂತರ ಮತ್ತೆ ಮುಟ್ಟಾಗಿರುವ ಅನುಭವ ಉಂಟಾಗಿತ್ತು. ಎಲ್ಲಾ ನಿರಾಳವೆನಿಸಿತ್ತು. ಆತಂಕ, ಅನುಮಾನಗಳು ದೂರವಾಗಿದ್ದವು. ಪಕ್ಕದಲ್ಲಿ ಮಲಗಿದ್ದ ಮಯೂರಳನ್ನು ಎಬ್ಬಿಸಿದಳು. "ಹೋಗೇ ಸ್ವಲ್ಪ ಅಮ್ಮನ್ನ ಕರ್ಕೊಂಡು ಬರ್ತೀಯಾ?"

"ಈಗ್ಲಾ? ಈಗ್ಯಾಕೆ ಹೊಟ್ಟೆ ಹಸೀತಿದೆಯಾ?".... ನಂಗೆ ತುಂಬಾ ನಿದ್ದೆ ಬರ್ತಿದೆ. ನೀನೇ ಹೋಗಿ ಕರ್ಕೊಂಡು ಬಾ...." ಚೆನ್ನಾಗಿ ಬೆಳಕಾಗಿ, ಒಬ್ಬೊಬ್ಬರಾಗಿ ಏಳುವವರೆಗೂ ಮಧುರ ಕಾದಳು. ತಾಯಿಯನ್ನು ಕರೆದು ವಿಷಯವನ್ನು ತಿಳಿಸಿದಳು. ರಾಧಾಳಿಗೂ ನಿರಾತಂಕವಾಗಿತ್ತು. ಕಳೆದ ಎರಡು ತಿಂಗಳಿಂದ ತಾನು ಮಗಳ ಬಗ್ಗೆ ಹೆಚ್ಚು ಗಮನವನ್ನೇ ಹರಿಸಿರಲಿಲ್ಲವೇನೋ... ಸದ್ಯ ಡಾಕ್ಟರ ಹತ್ರ ಹೋದದ್ದು ಒಳ್ಳೇದೇ ಆಯಿತು. ಅಂತಂದುಕೊಂಡಳು.

"ಅತ್ತಿಗೇ ಹೇಗೂ ಬಂದಿದೀರಿ. ಇನ್ನೂ ನಾಲ್ಕೈದು ದಿನಗಳು ಇದ್ದುಬಿಟ್ಟು ಮತ್ತೊಮ್ಮೆ ಮರಿಚಲು ಆರತಿ ಸಮಾರಂಭವನ್ನು ಮುಗಿಸ್ಕೊಂಡೇ ಹೋಗೋರಂತೆ" ಎಂದು ಹೇಳಿ ಅತ್ತಿಗೆಯರನ್ನು ಉಳಿಸಿಕೊಂಡಳು.

"ವ್ಯಾನಿನ ಕುಲುಕಾಟ ಹೆಚ್ಚಾಗಿತ್ತು. ಕಟ್ಟಿದ್ದು ಹರಿಯಿತು" ಸತ್ಯವತಿ ನಗುತ್ತಾ ನುಡಿದಳು.

"ಎಂಥದೋ ಗಂಡಾಂತರ ನೀಗಿತು. ಆಗಲೇ ಶಾಂತಿ ಮಾಡಿಸಬೇಕಾಗಿತ್ತು. ಈಗಲಾದರೂ ಮಾಡಿಸಲೇಬೇಕು. ನೀವುಗಳೆಲ್ಲ ಬಂದು ಕಾರ್ಯಕ್ರಮಗಳನ್ನು ನೆರವೇರಿಸಿಕೊಡಬೇಕು" ಗೌರಮ್ಮ ಮಕ್ಕಳಿಗೆ ಹೇಳಿದಳು.

"ಅಮ್ಮಾ.... ಈ ಸಮಾರಂಭಕ್ಕಾದರೂ ಅಣ್ಣನ್ನ ಕರೆಸೋಣ್ವಾ!"

"ಸುಮ್ನಿರು. ಅವನ ಹೆಸರನ್ನು ನನ್ನ ಎದುರಿಗೆ ಎತ್ತಬೇಡ" ಗೌರಮ್ಮ ಗುಡುಗಿದಳು. ಸತ್ಯವತಿ ಪೆಚ್ಚಾದಳು.

"ಅಮ್ಮಾ ಅವಳು ಹೇಳಿದ್ದರಲ್ಲಿ ತಪ್ಪೇನಿದೆ! ಅವನ ವನವಾಸ ಎಂದೋ ಮುಗಿದಿದೆ. ಇನ್ನಾದರೂ ಎಲ್ಲರೊಂದಿಗೆ ಇರಲಿ."

"ಆಹಹ... ಶ್ರೀರಾಮಚಂದ್ರ ವನವಾಸ ಮುಗಿಸ್ಕೊಂಡು ಬಂದಿದಾನೆ. ಕರೆದು ಪಟ್ಟಾಭಿಷೇಕ ಮಾಡ್ತೀನಿ.... ಏನೂ ಬೇಡ. ಅವನು ಎಲ್ಲಿದಾನೋ ಅಲ್ಲಿಯೇ ಇರಲಿ. ಅಲ್ಲಿಗಾದರೂ ಮರ್ಯಾದೆ ತರಲಿ."

"ಯಾಕಮ್ಮ ಇಷ್ಟು ನಿಷ್ಠೂರವಾಗಿ ಮಾತಾಡ್ತೀಯಾ..."

"ನಾನು ಹಾಗೇನೇ... ಅವನಾಗಿಯೇ ಮನೆಯಿಂದ ಆಚೆ ಹೋದ. ನಾನು ಅವನನ್ನು ಮನದಿಂದ ಹೊರಗೇ ಇಟ್ಟಿದೀನಿ. ಇನ್ನೆಂದೂ ಮತ್ತೆ ಮನಗಳು ಒಂದಾಗಲು ಸಾಧ್ಯವಿಲ್ಲ. ಈಗ ಆ ಆಸೆಯೂ ನನ್ನಲ್ಲಿ ಉಳಿದಿಲ್ಲ. ನಮ್ಮ ಮನೆಯಲ್ಲಿಯೂ ಹೆಣ್ಣು ಮಕ್ಕಳು ಬೆಳೆದು ನಿಂತಿದ್ದಾರೆ. ಮದುವೆ ಮಾಡಿ ಗಂಡನ ಮನೆಗೆ ಕಳಿಸಿಕೊಡಬೇಕು. ಕೇಳಿದವರಿಗೆ ಏನಂತ ಪರಿಚಯ ಮಾಡಿಕೊಡುವುದು? ಆಗ ರಾಜನಿಗೆ ಸತ್ಯ ಗೊತ್ತಾಗುವುದಿಲ್ಲವೆ? ಯಾವುದೂ ಬೇಡ.ಅವನು ಅಲ್ಲಿಯೇ ಇರಲಿ. ಇಲ್ಲಿ ನಾವುಗಳು ನೆಮ್ಮದಿಯಿಂದ ಇರೋಣ" ಇನ್ನು ಮಾತು ಸಾಕು ಎನ್ನುವಂತೆ ಗೌರಮ್ಮ ಅಲ್ಲಿಂದ ಸರಿದಳು.

ಪ್ರಭಾವತಿ, ಸತ್ಯವತಿ ಹಾಗೂ ಅವಳ ಮಗಳು ಚುನ್ನಿ ಉಳಿದುಕೊಂಡರು. ಉಳಿದವರು ಊರಿಗೆ ಪ್ರಯಾಣ ಬೆಳೆಸಿದರು. ಈ ಬಾರಿ ಮೊದಲ ದಿನ ಸ್ವಲ್ಪ ಮುಜುಗರವೆನಿಸಿದರೂ, ಮಧುರ ಎಲ್ಲವನ್ನೂ ಸರಿ

ಹೊಂದಿಸಿಕೊಂಡಳು. ಅವಳೊಡನೆ ಕುಳಿತು ಮಾತನಾಡಲು ಚುನ್ನಿ ಇದ್ದಳು. ಒಮ್ಮೊಮ್ಮೆ ರಾಜನೂ ಬಂದು ಸೇರಿಕೊಳ್ಳುತ್ತಿದ್ದ. ಈಗ ಅವನ ಬಗ್ಗೆ ಸಂಕೋಚ ಎನಿಸುತ್ತಿರಲಿಲ್ಲ.

ಐದನೆಯ ದಿನ ಶುಭಸ್ನಾನವಾಯಿತು. ಸಿಹಿ ಅಡಿಗೆ ಸಿದ್ಧವಾಯಿತು. ಹಣ್ಣುಹಂಪಲನ್ನು ತರಿಸಿದರು. ಮಧುರಳನ್ನೂ ಹಸೆಯ ಮೇಲೆ ಕೂರಿಸಿ, ಮತ್ತೊಮ್ಮೆ ಮಡಿಲನ್ನು ತುಂಬಿದರು. ಸೋದರತ್ತೆಯರು ಹಾಡನ್ನು ಹೇಳಿಕೊಂಡು ಆರತಿ ಎತ್ತಿದರು.

"ರಾಜ, ಅವಳಿಗೆ ಸರಸ್ವತಿಯ ಒಂದು ಸಣ್ಣ ವಿಗ್ರಹವನ್ನು ಉಡುಗೊರೆಯನ್ನಾಗಿ ಕೊಟ್ಟ. ಮಧುರಳಿಗೆ ಉಡುಗೊರೆ ಇಷ್ಟವಾಗಿತ್ತು. ನಂಗೇ.... ಎನ್ನುತ್ತಾ ಮಂದಾರಳು ಅವನಿಗೆ ಜೋತುಬಿದ್ದಳು.

"ಎಲ್ಲಾದಕ್ಕೂ ಮೊದಲು ಓಡಿ ಬರ್ತೀಯಲ್ಲೇ.... ನಿನ್ನ ಸರದಿ ಬಂದಾಗ ನಿನಗೂ ಉಡುಗೊರೆ ಕೊಡ್ತಾನೆ ಬಿಡು." ಸತ್ಯವತಿ ಹೇಳಿದಳು.

"ಥ್ಯಾಂಕ್ಸ್, ವಿಗ್ರಹ ತುಂಬಾ ಚೆನ್ನಾಗಿದೆ."

"ಇಷ್ಟ ಆಯ್ತಲ್ವಾ! ಇದನ್ನು ಮುಂದಿಟ್ಟು ಕೂತು ಸಂಗೀತಾಭ್ಯಾಸ ಮಾಡ್ಬೇಕು" ಮಧುರ, ತಾಯಿಯ ಕಡೆ ನೋಡಿದಳು.

"ನೀವುಗಳು ನನ್ನ ಮೆಚ್ಚಿನ ತಂಗಿಯರು. ಇನ್ನು ಮುಂದೆ ನಾನು ಇಲ್ಲಿಯೇ ನಿಮ್ಮೊಂದಿಗೆ ಇರುವವನು. ನನಗೆ ನಿಮ್ಮಗಳ ಪ್ರೀತಿ, ಸಹಕಾರಬೇಕು. ಅದು ಸದಾಕಾಲ ಸಿಗುತ್ತದೆಂದು ನಂಬಿದ್ದೇನೆ."

"ಹೀಗೆಲ್ಲ ಯಾಕೆ ಮಾತಾಡ್ತಿದೀಯೋ ರಾಜ.... ಏನಾಯ್ತುಈಗ?"

"ಏನೂ ಇಲ್ಲ. ಹೀಗೆ ಹೇಳಬೇಕು ಅಂತ ಅನ್ನಿಸ್ತು ಹೇಳ್ದೇ ಅಷ್ಟೆ."

"ಇನ್ನು ಮುಂದೆ ನೀನು ಹೀಗೆಲ್ಲಾ ಮಾತಾಡಬಾರ್ದು. ಇದನ್ನೆಲ್ಲ ನೀನು ಕೇಳಿ ಪಡೆಯಬೇಕಾಗಿಲ್ಲ. ನೀನು ನಮ್ಮವನೇ.... ಇಲ್ಲಿ ನಿನಗೆ ಎಲ್ಲಾ ಅಧಿಕಾರವೂ ಇದೆ. ಪ್ರತಿಯೊಂದು ಹಕ್ಕು ಇದೆ" ಕೇಶವನೆಂದ.

"ಲಾಯರ್ರು ಬರಲಿಲ್ಲ. ಯಾವ ವಿಲ್ಲನ್ನೂ ತೋರಿಸಲಿಲ್ಲ. ಹಾಗಾದ್ರೆ ಅದೆಲ್ಲಾ ಸುಳ್ಳೇ?" ರಾಜ ಪ್ರಶ್ನಿಸಿದ.

"ಎಲ್ಲಾ ಸುಳ್ಳಲ್ಲ. ವಿಲ್ಲು ಇರುವುದು ನಿಜ. ಲಾಯರ್ರಿಗೆ ಬರುಕ್ಕಾಗಲಿಲ್ಲ. ನಾನೇ ಹೋಗಿ ನೋಡಿದೆ. ಅದರ ಕಾಪಿ ನನ್ನ ಬಳಿ ಇದೆ. ಆಮೇಲೆ ಕೊಡ್ತೀನಿ."

"ನೀವು ನೋಡಿದ್ದರೆ ಸರಿ. ನನಗೆ ನೋಡಲೇಬೇಕೂಂತ ಏನಿಲ್ಲ" ರಾಜ ಕೈ ಹೊಸಕುತ್ತಾ ನುಡಿದ.

"ಅದು ಸರಿ. ಇನ್ನೂ ಯಾವ ವಿಲ್ಲಿನ ಅಗತ್ಯವೂ ಇಲ್ಲ. ಅವಶ್ಯಕತೆಯೂ ಇಲ್ಲ. ಅದೆಲ್ಲ ಹಳೆಯ ಕತೆ" ಎಂದ ಕೇಶವ.

"ಹೌದು. ಇಲ್ಲಿ ಯಾವ ಹಳೆಯ ಕತೆಯ ಬಗ್ಗೆಯೂ ಮಾತಾಡುವಂತಿಲ್ಲ. ಏನಿದ್ರೂ ಹೊಸ ವಿಷಯಗಳ ಬಗ್ಗೆ ಚರ್ಚೆ ನಡೆದರೆ ಸಾಕು" ರಾಧಾ ನುಡಿದಳು.

"ಇನ್ನೂ ಏಳು.... ಮಧುರ. ಎದ್ದು ರೇಶ್ಮೆ ಸೀರೆಯನ್ನು ಬಿಚ್ಚಿ, ಬೇರೆ ಬಟ್ಟೆ ಹಾಕ್ಕೊಂಡು ಬಾ. ಎಲ್ಲರೂ ಒಟ್ಟಿಗೆ ಕೂತು ಊಟ ಮಾಡೋಣ. ಊಟವಾದ ನಂತರ ನಾವು ಊರಿಗೆ ಹೊರಡ್ಬೇಕು."

"ಇನ್ನೊಂದೆರಡು ದಿನ ಇದ್ದು ಹೋಗಿ ಅತ್ತೆ.... ನೀವುಗಳು ಹೊರಟುಹೋದ್ರೆ ಬೇಜಾರಾಗುತ್ತೆ."

"ಎರಡು ದಿನಕ್ಕೆ ಅಂತ ಬಂದೋರು, ಒಂದು ವಾರವಾಗ್ತಾ ಬಂತು. ಈ ಸಾರಿಯ ಬೇಸಗೆ ರಜಕ್ಕೆ ನೀವುಗಳೇ ಬನ್ನಿ. ರಾಜ ನಿಮ್ಮನ್ನೆಲ್ಲ ಕರ್ಕೊಂಡು ಬರ್ತಾನೆ. ನಿಮಗೆ ಯಾವ ಚಿಂತೆಯೂ ಇಲ್ಲ. ಅಲ್ವೇನೋ ರಾಜ" ರಾಜ ತಲೆಯಾಡಿಸಿದ.

ಫೋನು ರಿಂಗಾಗಿತ್ತು. ಕೇಶವ ಎತ್ತಿಕೊಂಡ. ಅತ್ತಲಿಂದ ನಂಜುಂಡಸ್ವಾಮಿ ಮಾತಾಡಿದ್ದರು. ಕೇಶವನ ಮುಖ ಕಪ್ಪಾಗಿತ್ತು. ಬರೀಹಾಂ, ಹೂಂ ಎಂದು ಹೇಳಿ ಮಾತನ್ನು ಮುಗಿಸಿದ ಸತ್ಯವತಿ ಆತಂಕದಿಂದ ನೋಡಿ ಕಣ್ಣಿನಲ್ಲೇ ಪ್ರಶ್ನಿಸಿದಳು.

ರೂಮಿನೊಳಕ್ಕೆ ಅವಳೊಡನೆ ಬಂದ "ಮೂರ್ತಿ ಆಶ್ರಮದಲ್ಲಿ ಇಲ್ಲವಂತೆ. ನಾಪತ್ತೆಯಾಗಿದಾನಂತೆ. ನಂಜುಂಡಸ್ವಾಮಿ ಹೇಳಿದರು."

"ಇಲ್ಲಿಗೇನಾದ್ರೂ ಬಂದಿದಾನಾ ಅಂತ ವಿಚಾರಿಸಿದ್ರಾ?"

"ಬಂದರೂ ಬರಬಹುದು. ಮಗನನ್ನು ಕಂಡಾಗಿನಿಂದ ಅದೇ ಧ್ಯಾನದಲ್ಲಿದ್ದನಂತೆ. ಒಂದು ವೇಳೆ ಬಂದರೆ ಏನು ಮಾಡೋದು? ಏನೇನು ಹಗರಣವಾಗುತ್ತೋ? ಮನಸ್ಸು ತಡೆಯದೇ ರಾಜನಿಗೆ ನೀನು ನನ್ನ ಮಗ ಅಂತ ಹೇಳಿಬಿಟ್ಟರೇ?"

"ಹೇಳಲಿ ಬಿಡು. ಅಲ್ಲಿಗೆ ಎಲ್ಲಾ ನಿಸೂರು ಆಗುತ್ತೆ. ರಾಜಂಗೂ ಗೊತ್ತಾಗ್ಲಿ ಅವನ ಅಪ್ಪ ಎಂಥೋನು ಅಂತ."

"ಹಾಗಲ್ಲ ಸತ್ಯಾ... ನಿಜ ಏನೂಂತ ತಿಳಿದ್ರೆ ಅವನು ಕುಗ್ಗಿ ಹೋಗ್ತಾನೆ."

"ಮಗನ ಭವಿಷ್ಯ ಹಾಳು ಮಾಡ್ಬೇಕು ಅಂತ ಅವನ ಮನಸ್ನಲ್ಲಿದ್ದರೆ ಅದನ್ನು ಯಾರೂ ತಪ್ಪಿಸೋಕೇ ಆಗುಲ್ಲ."

"ನಾನು ಈಗ್ಲೇ ಆಶ್ರಮಕ್ಕೆ ಹೋಗ್ತೀನಿ. ನೀನು ರಾಜನ್ನ ನಿನ್ನ ಜೊತೆ ಕರ್ಕೊಂಡು ಹೋಗಿರು. ನಾಲ್ಕು ದಿನ ಅಲ್ಲೇ ಇರಲಿ..."

"ನಂಗೇನಿಲ್ಲ ಕರ್ಕೊಂಡು ಹೋಗ್ತೀನಿ. ಆದ್ರೆ ಇದೆಲ್ಲಾ ಹಗರಣ ಯಾಕೇ ಅಂತ."

"ನಾವೆಲ್ಲಾ ಸುಖವಾಗಿರೋದು ನಿನ್ನ ಅಣ್ಣನಿಗೆ ಬೇಡ... ಅದಕ್ಕೆ."

"ಅದೇನು ಈಗ ಇದ್ದಕ್ಕಿದ್ದ ಹಾಗೆ ರಾಜನ ಮೇಲೆ ವ್ಯಾಮೋಹ? ಬೇರೆ ಇನ್ನೇನೋ ಕಾರಣ ಇರಬೇಕು. ದುಡ್ಡು ಕಾಸು ಬೇಕಾಗಿದ್ದರೇ..."

"ಹಾಗಂತ ಬಾಯಿಬಿಟ್ಟು ಹೇಳಲಿ. ಅವನ ಭಾಗದ ಹಣವನ್ನು ಅವನಿಗೆ ಕೊಟ್ಟರೆ ಆಯ್ತು. ಅದೇನು ಕತೆಯೋ ಯಾಕೆ ಹೀಗಾಡ್ತಾನೋ?" ಕೇಶವನೇ ಅವರೆಲ್ಲರನ್ನೂ ಬಸ್ಸು ಹತ್ತಿಸಿ, ಹಾಗೇ ತಾನು ಆಶ್ರಮದ ಕಡೆಯ ಬಸ್ಸನ್ನೇರಿದ.

ರಾಧಾ ಸಂಕ್ಷಿಪ್ತವಾಗಿ ಅತ್ತೆಗೆ ವಿಷಯವನ್ನು ತಿಳಿಸಿದಳು. ಗೌರಮ್ಮ ಆತಂಕಪಟ್ಟರೂ, ಅದನ್ನು ಪ್ರಕಟಗೊಳಿಸಲಿಲ್ಲ. "ನೀವ್ಯಾರೂ ಗಾಬರಿಯಾಗಬೇಡಿ. ಅವನಿಗೆ ಇಲ್ಲಿಗೆ ಬರುವ ಮುಖವಿಲ್ಲ. ಬಂದರೂ ನಾನು ಸೇರಿಸೋಲ್ಲ. ನಾನು ಈಗಲೇ ಪಂಡಿತರ ಮನೆಗೆ ಹೋಗಿ ಪ್ರಶ್ನೆ ಕೇಳ್ತೀನಿ. ಏನಾದರೂ ಸಮಸ್ಯೆ ಇದ್ದರೆ ಅದಕ್ಕೆ ಪರಿಹಾರವಿರುತ್ತೆ." ಗೌರಮ್ಮನೂ ಅತ್ತ ಹೊರಟುಹೋದಳು. ರಾಧಾ ಬಾಗಿಲುಗಳನ್ನು ಭದ್ರಪಡಿಸಿಕೊಂಡು, ಕುಳಿತಳು. ಕೆಲವೇ ನಿಮಿಷಗಳಲ್ಲಿ ಮುಂಬಾಗಿಲ ಸದ್ದಾಯಿತು. ಬಾಗಿಲ ಬಳಿ ಬಂದು ಯಾರು ಅಂತ ಪ್ರಶ್ನಿಸಿದಳು.

"ನಾನು" ಪಕ್ಕದ ಕಿಟಕಿಯಿಂದ ಒಬ್ಬ ಗಂಡಸು ನಿಂತಿರುವುದನ್ನು ಕಂಡಳು. ಅನುಮಾನದಿಂದ ಬಾಗಿಲನ್ನು ತೆಗೆದಳು. ಎದುರಿಗೆ ಮೂರ್ತಿನಿಂತಿದ್ದ. ಗಾಬರಿಯಿಂದ ಮುಖ ಬಿಳುಪೇರಿತು. "ಹೆದರಬೇಡ ರಾಧಾ.... ನಾನು ಇದನ್ನು ಕೊಟ್ಟು ಹೋಗೋದಕ್ಕೆ ಬಂದೆ" ತನ್ನ ಕೈಯಲ್ಲಿದ್ದ ಗಂಟನ್ನು ತೋರಿಸಿದ.

"ಏನದು? ಯಾರದ್ದು?...." ಅವಳು ಕರೆಯದಿದ್ದರೂ ಒಳಕ್ಕೆ ಬಂದಿದ್ದ.

"ನನ್ನದೇ.... ನಾನು ಬರೆದಿರುವ ಕತೆಗಳು, ಲೇಖನಗಳು, ಕವನಗಳು ಎಲ್ಲಾ ಇದರಲ್ಲಿ ಇದೆ. ನನ್ನ ವೃತ್ತಾಂತವನ್ನೇ ಈ ಬರಹಗಳು ತಿಳಿಸುತ್ತವೆ. ಇದನ್ನು ಅಮ್ಮನಿಗೆ ಅರ್ಪಣೆ ಮಾಡಿ ಹೋಗೋಣ ಅಂತ ಬಂದೆ."

"ಅಮ್ಮ ಮನೆಯಲ್ಲಿಲ್ಲ...." ಅವಳು ಅಧೀರತೆಯಿಂದ ನುಡಿದಳು.

"ನಂಗೆ ಗೊತ್ತು. ಮನೆಯಲ್ಲಿ ಯಾರೂ ಇಲ್ಲದ್ದನ್ನು ಕಂಡೇ ಬಂದಿದ್ದೇನೆ. ಕೇಶವ ಎಲ್ಲಿ?".... ನೀನು ಹೆದರಬೇಡ.ನಾನಿಲ್ಲಿ ಹೆಚ್ಚು ಹೊತ್ತು ಇರುಲ್ಲ"

"ಅವರು ನಿಮ್ಮ ಆಶ್ರಮಕ್ಕೆ ಹೋಗಿದಾರೆ. ನೀವು ಯಾರಿಗೂ ತಿಳಿಸದೇ ಬಂದಿದೀರಿ... ದಯವಿಟ್ಟು ವಾಪಸ್ಸು ಹೊರಟುಹೋಗಿ."

"ನನಗೆ ಅಲ್ಲಿಯೂ ಇರಲಾಗುತ್ತಿಲ್ಲ. ಹತ್ತಿರವಿದ್ದರೆ ವಾಂಛಲ್ಯ ಎಳೆಯುತ್ತೆ. ಅದಕ್ಕೆ ದೂರದ ಹಿಮಾಲಯಕ್ಕೆ ಹೋಗೋಣ ಅಂತ ಅಂದುಕೊಂಡಿದೀನಿ. ನಾನು ಬಂದ ವಿಷಯವನ್ನು ಯಾರಿಗೂ ತಿಳಿಸಬೇಡ. ರಾಜನಿಗೆ ಕೂಡ. ಇವುಗಳನ್ನು ಪ್ರಿಂಟ್ ಹಾಕಿಸುವ ಕೆಲಸವನ್ನು ನಿಮಗೆ ವಹಿಸುತ್ತಿದ್ದೇನೆ." ರಾಧಾ ಮಿಕಿಮಿಕಿ ಅವನನ್ನೇ ನೋಡಿದಳು. ನಿನ್ನನ್ನು ನೋಡಿದರೆ ಕಾಲುಮುಟ್ಟಿ ನಮಸ್ಕರಿಸಬೇಕು ಅಂತ ಅನ್ನಿಸುತ್ತೆ. ಆದರೆ ನೀನು ಚಿಕ್ಕವಳು. ಆದುದರಿಂದ ಕೈ ಮುಗೀತೀನಿ. ನಿನ್ನ ಈ ಉಪಕಾರಗಳನ್ನು ಈ ಜನ್ಮದಲ್ಲಿ ತೀರಸಲಾಗುವುದಿಲ್ಲ. "ತನ್ನ ಷರಟಿನ ಜೇಬಿನಿಂದ ಒಂದು ಚಿನ್ನದ ಪದಕವನ್ನು ತೆಗೆದುಕೊಟ್ಟ" ಇದು ನನ್ನ ಅಮ್ಮನದು. ಇದನ್ನು ಅವಳ ನೆನಪಿಗಾಗಿ ನನ್ನ ಹತ್ತಿರವೇ ಇಟ್ಟುಕೊಂಡಿದ್ದೆ. ಈ ಮನೆಯಿಂದ ಹೋಗುವಾಗ ಕದ್ದು ತೆಗೆದುಕೊಂಡು ಹೋದದ್ದು. ದೇಶಾಂತರ ಹೋಗುವವನಿಗೆ ಇದು ಹೊರೆ. ಎಲ್ಲವನ್ನು ಮರೆತು ಎಲ್ಲರಿಂದ ದೂರ ಹೋಗುತ್ತಿದ್ದೇನೆ. ನಾನು ಯಾವ ವಿಲ್ಲನ್ನು ಬರೆಸಿರಲಿಲ್ಲ. ಹಾಗಂತ ನಂಜುಂಡಸ್ವಾಮಿಗೆ ಗೊತ್ತಿತ್ತು. ಆದರೂ ನನ್ನಾಸೆಯನ್ನು ನೆರವೇರಿಸಲು ಅವನೂ ಸುಳ್ಳು ಹೇಳಿದ. ಅವನನ್ನು ಕ್ಷಮಿಸಿಬಿಡಿ. ರಾಜನ್ನ ಕರಿ. ನಾನೊಮ್ಮೆ ಅವನನ್ನು ನೋಡಿಹೋಗ್ತೀನಿ."

"ಅವನು ಮನೇಲಿಲ್ಲ... ಊರಿಗೆ ಹೋಗಿದಾರೆ."

"ಸರಿ. ನಾನು ನಿನ್ನ ಮಾತನ್ನು ನಂಬ್ತೀನಿ. ನಾನಿನ್ನೂ ಬರ್ತೀನಿ" ಅವನು ಮತ್ತೆ ಕೈಮುಗಿದ.

"ಒಳಗೆ ಬನ್ನಿ ಕೂತ್ಕೊಳ್ಳಿ."

"ಇಲ್ಲ ನಾನು ಬರುವುದಿಲ್ಲ. ಆ ಅರ್ಹತೆ. ಯೋಗ್ಯತೆ ಯಾವುದೂ ನನಗಿಲ್ಲ. ನಾನು ಇಲ್ಲಿಯ ಜನರಿಗೆ ಪರಿಚಯವಿಲ್ಲ. ನನ್ನನ್ನ ಗುರುತಿಸಲಾರರು. ಆದರೂ ಹೆಚ್ಚು ಹೊತ್ತು ನಾನು ಇಲ್ಲಿರುವುದು ಸರಿಯಲ್ಲ."

ಗೇಟು ಸದ್ದಾಯಿತು. ಸರ್ರನೆ ಬಾಗಿಲು ಮರೆಗೆ ಸರಿದು ನಿಂತ. ಮಧುರ ಬಂದಿದ್ದಳು. ರಾಧಾಳ ಮುಖ ವಿವರ್ಣವಾಯಿತು.

"ಯಾಕೇ ಬೇಗ ಬಂದ್ಬಿಟ್ಟೆ? ಹುಷಾರಾಗಿದೀಯ ತಾನೇ?"

"ಹೂಂ. ನಮ್ಮ ಯಾರು ಬಂದಿದಾರೆ? ಯಾರ ಹತ್ರ ಮಾತಾಡ್ತಿದ್ದೆ?"

"ನಿನ್ನ ಅಪ್ಪನ್ನ ಕೇಳ್ಕೊಂಡು ಬಂದಿದಾರೆ. ಹೊರಟಿದ್ರು." ಮಧುರ ಒಳಕ್ಕೆ ಬಂದಳು. ಯಾರೂ ಕಾಣಲಿಲ್ಲ. ಮೂರ್ತಿ ಬಾಗಿಲ ಮರೆಯಿಂದ ಈಚೆಗೆ ಬಂದು ನಿಂತ. ಸೊಂಪಾಗಿ ನಿಂತಿದ್ದ ಮಧುರಳನ್ನು ಕಣ್ತುಂಬಾ ನೋಡಿದ.

"ನನಗೂ ಒಬ್ಬಳು ಚೆಂದೊಳ್ಳಿ ಮಗಳು ಹುಟ್ಟಲಿ ಅಂತ ಆಸೆ ಇತ್ತು. ಆದರೆ.... ನನ್ನ ಹೆಂಡತಿಗೆ ಇಷ್ಟವಿರಲಿಲ್ಲ. ಹೋಗಲಿ.... ಈಗ ಆ ಮಾತ್ಯಾಕೆ.... ನಿನ್ನ ಮಗಳು ತುಂಬಾ ಚೆನ್ನಾಗಿದಾಳೆ. ರಾತ್ರಿ ದೃಷ್ಟಿ ತೆಗೆದು ನಿವಾಳಿಸು..." ಶುಷ್ಕವಾಗಿ ನಕ್ಕ. ಅವನು ಹೋದರೆ ಸಾಕೆಂದು ರಾಧಾ ಚಡಪಡಿಸಿದಳು.

"ಬಾಮ್ಮಾ ಇಲ್ಲಿ. ಮಧುರಳನ್ನು ಬಳಿಗೆ ಕರೆದು ಅವಳ ತಲೆಯ ಮೇಲೆ ಕೈಯಾಡಿಸಿದ. ನಿನ್ನ ಹೆಸರೇನು? ಏನು ಓದುತ್ತಿದೀಯಾ?" ಅವಳು ಉತ್ತರಿಸಿದಳು.

"ನಿನ್ನ ಹೆಸರು ತುಂಬಾ ಚೆನ್ನಾಗಿದೆ.... ನಿನಗೆ ತಂಗಿ, ತಮ್ಮ ಯಾರು ಇದಾರೆ ಅವರ ಹೆಸರೇನು?"

"ನನಗೆ ಇಬ್ಬರು ತಂಗಿಯರು, ಮಯೂರ, ಮಂದಾರ ಅಂತ. ನಮಗೆ ಒಬ್ಬ ಅಣ್ಣ ಇದಾನೆ. ಅವನ ಹೆಸರು ಮನೋಹರ ಅಂತ. ಎಲ್ಲರ ಹೆಸರೂ ಮಕಾರದಿಂದ ಪ್ರಾರಂಭವಾಗುತ್ತೆ."

'ಮ'ನಿಂದ ಮಮಕಾರವೂ ಹುಟ್ಟುತ್ತೆ. ನೀವೆಲ್ಲರೂ ಅನ್ಯೋನ್ಯವಾಗಿರಬೇಕು ಗೊತ್ತಾಯ್ತಾ! ನಾನಿನ್ನು ಬರ್ತೀನಿ" ಅವನು ಹೊರಟ.

"ಮಧು... ಅವರಿಗೆ ನಮಸ್ಕಾರ ಮಾಡು" ಪರವಾಗಿಲ್ಲ ಬಿಡಮ್ಮ ಎಂದು ಹೇಳಿದರೂ ನಮಸ್ಕರಿಸಿದವಳಿಗೆ ಆಶೀರ್ವಾದ ಮಾಡಿದ. ರಾಧಾಳ ಕೈಯಿಂದ ಚಿನ್ನದ ಪದಕವನ್ನು ಕೇಳಿ ಪಡೆದು ಅದನ್ನು ಮಧುರಳಿಗೆ ಉಡುಗೊರೆಯನ್ನಾಗಿ ಕೊಟ್ಟ.

"ಇದು, ನಮ್ಮ ತಾಯೀದು. ಈಗ ನನಗೆ ನನ್ನ ತಂದೆ ತಾಯಿ ಬಂಧು ಬಳಗ ಯಾರೂ ಇಲ್ಲ. ಇದನ್ನು ನೀನೇ ಇಟ್ಟುಕೋ..."

"ಚಿನ್ನದ್ದು! ನಂಗೆ ಬೇಡ"

"ಕೊಟ್ಟದ್ದನ್ನು ಬೇಡ ಅನ್ನಬಾರದು..."

"ಹೋಗಲಿ ಇಟ್ಕೋ... ಅವರು ಪ್ರೀತಿಯಿಂದ ಕೊಡ್ತಿದ್ದಾರೆ." ರಾಧಾಳೂ ನುಡಿದಾಗ ಮಧುರ ತೆಗೆದಿಟ್ಟುಕೊಂಡು ಥ್ಯಾಂಕ್ಸ್ ಎಂದಳು. ಅವನು ಹೊರಡಲನುವಾದ.

"ಕಾಫಿ ಕುಡೀತೀರಾ?"

"ಬೇಡ ಬೇಡ ಯಾವ ಋಣವನ್ನು ಇಟ್ಟುಕೊಳ್ಳಬಾರದು." ಎನ್ನುತ್ತಾ ಗೇಟನ್ನು ದಾಟಿ ಬೀದಿಗಿಳಿದ. ಮಧುರ ಚಿನ್ನದ ಪದಕವನ್ನು ತಾಯಿಯ ಕೈಗೇ ಕೊಟ್ಟಳು. ರಸ್ತೆಯ ತಿರುವಿನಲ್ಲಿ ತಿರುಗುವವರೆಗೂ ಮೂರ್ತಿ ಒಂದೆರಡು ಬಾರಿ ತಿರುಗಿ ನೋಡಿದ್ದ. ರಾಧಾ ಪದಕವನ್ನು ಮುಚ್ಚಿಟ್ಟಳು. ಅವನು ಅತ್ತ ಹೋದ ಕೆಲವೇ ಸಮಯದಲ್ಲಿ ಗೌರಮ್ಮ ಹಿಂತಿರುಗಿದ್ದಳು. ಹಸನ್ಮುಖಿಯಾಗಿದ್ದಳು.

"ನಾನು ಹೇಳಲಿಲ್ವಾ ಏನೂ ಭಯಬೇಡ ಅಂತ. ಪಂಡಿತರೂ ಅದನ್ನೇ ಹೇಳಿದ್ರು.... ನಮ್ಮ ಮಧು ಮೈನೆರೆದ ಗಳಿಗೆ ತುಂಬಾ ಪ್ರಶಸ್ತವಾಗಿದೆಯಂತೆ. ಎಲ್ಲಾ ಒಳ್ಳೇದೇ ಆಗುತ್ತಂತೆ."

"ಅಜ್ಜೀ... ಅಪ್ಪನ ಸ್ನೇಹಿತರು ಒಬ್ಬರು ಬಂದಿದ್ರು. ನನಗೆ ಒಂದು ಚಿನ್ನದ ಪದಕವನ್ನು ಉಡುಗೊರೆಯನ್ನಾಗಿ ಕೊಟ್ರು. ಎಷ್ಟು ಚೆನ್ನಾಗಿದೆ ಅಂತ. ಅಮ್ಮ ತೋರಿಸಮ್ಮ."

"ಆಮೇಲೆ ನೋಡ್ತೀನಿ.... ಕೇಶವ ಏನಾದ್ರೂ ಫೋನು ಮಾಡಿದ್ನಾ?"

"ಇಲ್ಲ ಅತ್ತೇ..."

"ಅದೇನದು ಆ ಕೈ ಚೀಲದಲ್ಲಿ?"

"ನಿಮ್ಮ ಮಗಂದು... ಏನೋ ಕಾಗದಗಳು... ನೋಡ್ತೀರಾ?"

"ತಮಾಷೆ ಮಾಡ್ಬೇಡ. ನಾನೇನು ಕಟ್ಕೊಂಡೇನು?" ಅಷ್ಟರಲ್ಲಿ ಕೇಶವ ಫೋನು ಮಾಡಿದ್ದ. ರಾಧಾ ಎತ್ತಿಕೊಂಡಳು.

"ನಾನು ಹೀಗೇ ಇಲ್ಲಿಂದಲೇ ಬೆಂಗಳೂರಿಗೆ ನಂಜುಂಡಸ್ವಾಮಿಯವರೊಂದಿಗೆ ಹೋಗ್ತೀನಿ. ಎರಡು ದಿನ ಆಗುತ್ತೆ ವಾಪಸ್ಸು ಬರುಕ್ಕೆ."

"ಅದರ ಅಗತ್ಯವಿಲ್ಲ. ಬಂದುಬಿಡಿ. ಈಗ ಫೋನ್ನಲ್ಲಿ ಮಾತಾಡುಕ್ಕೆ ಆಗುಲ್ಲ. ಬಂದಮೇಲೆ ಹೇಳ್ತೀನಿ. ಅವರನ್ನು ಕರ್ಕೊಂಡು ಬನ್ನಿ."

"ಕೇಶವಂಗೆ ಬಾ ಅಂತ ಹೇಳಿದ್ದು ಒಳ್ಳೇದಾಯ್ತು ಅವನು ಅಲ್ಲೆಲ್ಲಿ ಸಿಗ್ತಾನೆ?" ಅದೇನು ಹಾಗೆ ನೋಡ್ತೀಯ? ರಸ್ತೆಯ ಕೊನೇಲಿ ನಂಗೆ ಸಿಕ್ಕಿದ್ದ. ದೇಶಾಂತರ ಹೋಗ್ತಾನಂತೆ ಹೋಗಲಿ. ಎಲ್ಲಿಗೆ ಬೇಕಾದ್ರೂ ಹೋಗಲಿ ನಂಗೇನು? ಹಿಮಾಲಯಕ್ಕಾದ್ರೂ ಹೋಗಲಿ. ಇಲ್ಲೇ ಬೇಕಾದ್ರೂ ಇರಲಿ. ನನ್ನ ಪಾಲಿಗೆ ಅವನು..."

"ಯಾರ ವಿಷಯ ಹೇಳ್ತಿದೀರಿ ಅಜ್ಜೀ...."

"ಹೀಗೇ ಯಾವನೋ ದಾರಿಹೋಕ... ನಂಗೆ ನಿಂಗೆ ಏನಾಗ್ಬೇಕು?"

"ನೀವು ಹೀಗೆ ಮಾತಾಡ್ಬೇಡಿ. ನಂಗೆ ಭಯ ಆಗುತ್ತೆ."

"ಭಯ ಆದ್ರೆ ದೇವರ ಸ್ತೋತ್ರ ಹೇಳ್ಕೋ" ರಾಧಾ ಅವರಿಬ್ಬರನ್ನೇ ಗಮನಿಸುತ್ತಿದ್ದಳು. ಅವಳನ್ನು ಅವ್ಯಕ್ತಭಯ ಕಾಡಿತು. ರಾಮನಾಮವನ್ನು ಜಪಿಸತೊಡಗಿದಳು.

ಇದ್ದಕ್ಕಿದ್ದಂತೆ, ರಾಧಾಳ ಮನದಲ್ಲಿ ಒಂದು ಆಲೋಚನೆ ಹೊಳೆಯಿತು. ಮಗಳನ್ನು ಕರೆದು ಹೊರಡಿಸಿದಳು. "ಎಲ್ಲಿಗೆ ಅಂತ ಕೇಳ್ಬೇಡ. ನನ್ನ ಜೊತೆಗೆ ಬಾ. ಅತ್ತೇ ನಾವು ಇಲ್ಲೇ ಹೋಗಿ ಬರ್ತೀವಿ" ಎಂದು ಹೇಳಿ, ಆಕೆಯ ಉತ್ತರಕ್ಕ ಕಾಯಲಿಲ್ಲ. ತಾಯಿ ಮಗಳು ಚಪ್ಪಲಿ ಮೆಟ್ಟಿ ಹೊರಟರು.

"ಮಧು, ನನ್ನನ್ನ ಏನು ಕೇಳ್ಬೇಡ. ನಿಧಾನವಾಗಿ ಹೇಳ್ತೀನಿ. ಮೊದಲು ರೈಲ್ವೇ ಸ್ಟೇಷನ್‌ಗೆ ಹೋಗೋಣ" ಎನ್ನುತ್ತಾ ಆಟೋ ಹಿಡಿದಳು. ಇಬ್ಬರೂ ರೈಲ್ವೇ ಸ್ಟೇಷನ್‌ಗೆ ಬಂದರು. ಅವಳ ಅನುಮಾನ ನಿಜವಾಗಿತ್ತು. ಅಲ್ಲಿಯ ಬೆಂಚಿನ ಮೇಲೆ ಕುಳಿತಿದ್ದ ಮೂರ್ತಿ ಕಣ್ಣಿಗೆ ಬಿದ್ದ. ಇಬ್ಬರೂ ಅವನ ಬಳಿಗೆ ಬಂದರು. ಮೂರ್ತಿ ಕತ್ತೆತ್ತಿ ನೋಡಿದ. ಅವನ ಕಣ್ಣುಗಳಲ್ಲಿ ಆಶ್ಚರ್ಯ ತುಳುಕಿತ್ತು.

"ಮನೆಗೆ ಬನ್ನಿ... ಭಾವ" ಆತ್ಮೀಯವಾಗಿ ಕರೆದಳು.

"ಯಾಕೆ? ಏನು ವಿಷಯ? ಅಮ್ಮ ಆರೋಗ್ಯವಾಗಿದ್ದಾಳೆ ತಾನೇ?"

"ಹುಂ. ಅವರಿಗೆ ಏನಾಗಿಲ್ಲ. ನಾನೇ ಕರೀತಿದೀನಿ ಬನ್ನಿ."

"ಇಲ್ಲಮ್ಮ. ಆ ಮನೆಗೂ ನನಗೂ ಯಾವ ಸಂಬಂಧವಿಲ್ಲ."

"ಹಾಗೆನ್ನಬೇಡಿ. ನಾವೆಲ್ಲಾ ನಿಮ್ಮವರೇ.... ಅದು ನಿಮ್ಮ ಮನೆಯೇ..."

"ನನಗೆ ಹಾಗೆನ್ನಿಸುವುದಿಲ್ಲ. ನಾನಾಗಿಯೇ ತೊರೆದ ಮನೆ. ಅಲ್ಲಿ ನನಗೆ ಯಾವ ಅಧಿಕಾರವೂ ಇಲ್ಲ. ಯಾವ ಹಕ್ಕೂ ಇಲ್ಲ."

"ನಿಮ್ಮ ತಾಯಿ, ನಿಮ್ಮ ತಮ್ಮ... ಎಲ್ಲರಿಗಿಂತ ಮುಖ್ಯವಾಗಿ ನಿಮ್ಮ ಮಗನಿರುವ ಮನೆಯಲ್ಲಿ ನಿಮಗೆ ಎಲ್ಲವೂ ಇದೆ. ಯಾರಿಂದ ಯಾವ ಆಕ್ಷೇಪಣೆಯೂ ಇಲ್ಲ. ನೀವು ಬರಲೇಬೇಕು." ಮಧುರ ತಾಯಿಯ ಕಡೆ ನೋಡಿದಳು.

"ಇಲ್ಲ ರಾಧಾ..... ನನ್ನ ಬರವು ಅಮ್ಮನಿಗೆ ಖಂಡಿತಾ ಹಿಡಿಸುವುದಿಲ್ಲ."

"ಇಲ್ಲ ಭಾವ, ಅವರಿಗೂ ವಯಸ್ಸಾಗಿದೆ. ಎಲ್ಲವನ್ನೂ ಮರೆಯುತ್ತಾರೆ. ಮೊಮ್ಮಗನನ್ನು ಒಪ್ಪಿಕೊಳ್ಳಲಿಲ್ಲವೇ? ಅವನಿಗಾಗಿ ನಿಮ್ಮನ್ನು ಒಪ್ಪಿಕೊಳ್ಳುತ್ತಾರೆ. ಎಲ್ಲರೂ ಒಂದಾಗಿರೋಣ."

"ಹೇಗಮ್ಮಾ ನಾನು ಅಲ್ಲಿರಲಿ? ನಾನೊಬ್ಬ ಅಪರಾಧಿ. ಅಮ್ಮನಿಗೆ, ಹೆಂಡತಿಗೆ, ಮಗನಿಗೆ ನನ್ನಿಂದ ಅಪಚಾರವಾಗಿದೆ. ನನ್ನನ್ನು ಏನೆಂದು ಗುರುತಿಸಿಕೊಳ್ಳಲಿ? ನನ್ನಂಥೋನಿಗೆ ಮನೆಮಠ ಯಾವುದೂ ಇಲ್ಲ.... ನನ್ನ ಪಾಡಿಗೆ ನಾನು ಎಲ್ಲಾದರೂ ತಿರುಗಾಡಿಕೊಂಡಿರುತ್ತೇನೆ. ನನಗೆ ಅದೇ ಸರಿಯಾದ ಶಿಕ್ಷೆ."

"ಎಲ್ಲಾ ಶಿಕ್ಷೆಯನ್ನು ಅನುಭವಿಸಿದ್ದಾಗಿದೆಯಲ್ಲ. ಚಿಕ್ಕ ಹುಡುಗಿಯ ಎದುರಿಗೆ ಹಳೇ ಪ್ರಸ್ತಾಪಗಳು ಬೇಡ. ದಯವಿಟ್ಟು ಬನ್ನಿ.... ಮಧುರ ನೀನಾದರೂ ಹೇಳು. ನಿನ್ನ ಮಾತಿಗೆ ಒಪ್ಪುತ್ತಾರೆ." ಮಧುರ ತಬ್ಬಿಬ್ಬಾದಳು. ಒಮ್ಮೆ ಅವಳ ಕಡೆ, ಮತ್ತೊಮ್ಮೆ ಅವನ ಕಡೆ ನೋಡಿದಳು.

"ಇವರು ಯಾರು ಅಂತ ನಂಗೆ ಸರಿಯಾಗಿ ಗೊತ್ತೇ ಇಲ್ಲವಲ್ಲ"

"ಇವರು ನಿನ್ನ ದೊಡ್ಡಪ್ಪ ಕಣೇ. ಸ್ವಂತ ದೊಡ್ಡಪ್ಪ. ಅವರೀಗ ಒಬ್ಬರೇ ಇದಾರೆ. ನಮ್ಮನ್ನು ಬಿಟ್ಟರೆ ಬೇರೆ ಯಾರೂ ಇಲ್ಲ. ನಮ್ಮಗಳ ಜೊತೆಯಲ್ಲಿ ಬಂದು ಇರಿ ಅಂತ ಹೇಳು ಒಪ್ಕೋತಾರೆ."

"ಸರಿ ಬನ್ನಿ ದೊಡ್ಡಪ್ಪಾ. ನೀವೊಬ್ರೇ ಅಲ್ಲಿ ಇಲ್ಲಿ ಯಾಕೆ ಇರ್ಬೇಕು.?"

"ಅದು ಹಾಗಲ್ಲ ಪುಟ್ಟಾ.... ಅಜ್ಜಿಗೆ ನನ್ಮೇಲೆ ಕೋಪ."

"ಅವರಿಗೆ ಕೋಪ ಇದ್ದರೆ ಇರಲಿ. ನಾವುಗಳು ಚೆನ್ನಾಗಿ ನೋಡಿಕೊಳ್ತೀವಿ. ಅಮ್ಮ... ಇವರ ಮಗ ಅಂತ ಅಂದ್ಯೆಲ್ಲಾ ಅವನು ಯಾರು? ಎಲ್ಲಿದಾನೆ"

"ರಾಜನೇ ಇವರ ಮಗ... ಆದರೆ ಅವನಿಗೆ ಇವರೇ ತಂದೆ ಅಂತ ಗೊತ್ತಿಲ್ಲ. ಅದೆಲ್ಲಾ ಹಳೆಯ ಕತೆ..."

"ರಾಜನಿಗೆ ನನ್ನ ವಿಷಯ ತಿಳಿಯಕೂಡದು. ನಾನು ಅಲ್ಲಿದ್ದರೆ ಅವನಿಗೆ ಅನುಮಾನ ಬರುತ್ತದೆ. ಅವನ ಭವಿಷ್ಯ ಹಾಳಾಗುತ್ತದೆ."

"ಅವನ ಭವಿಷ್ಯ ಹಾಳಾಗದಂತೆ ನಾವು ಎಚ್ಚರಿಕೆ ವಹಿಸುತ್ತೀವಿ. ಅವನಿಗೆ ನಾವ್ಯಾರೂ ಈ ವಿಷಯವನ್ನು ತಿಳಿಸುವುದಿಲ್ಲ. ನೀವು ಅವನಿಗೆ ದೊಡ್ಡಪ್ಪನಾಗಿಯೇ ಇದ್ದುಬಿಡಿ."

"ಈ ದೊಡ್ಡಪ್ಪ ಎಲ್ಲಿಂದ ಹೊಸ್ದಾಗಿ ಹುಟ್ಕೊಂಡು ಅಂತ ಅನುಮಾನ ಬಂದೇಬರುತ್ತೆ. ಈಗಿರುವುದೇ ಸರಿ. ದಯವಿಟ್ಟು ಬಲವಂತ ಮಾಡ್ಬೇಡ" ಮೂರ್ತಿ ಅತ್ತ ತಿರುಗಿದ. ಮಧುರ ಅವನ ಮಗ್ಗುಲಲ್ಲಿ ಕುಳಿತಳು.

"ನೀವು ಬರಲೇಬೇಕು ದೊಡ್ಡಪ್ಪಾ. ಇಲ್ದಿದ್ರೆ ನನ್ಮೇಲಾಣೆ."

"ಛೀ ಬಿಡ್ತು ಅನ್ನು. ನನ್ನಂಥ ಅಯೋಗ್ಯನಿಗೋಸ್ಕರ, ಆಣೆ ಪ್ರಮಾಣ ಯಾವುದೂ ಬೇಡ. ನನ್ಮೇಲೇ ಇಷ್ಟು ಪ್ರೀತಿ ಗೌರವವನ್ನು ನೀವಿಬ್ರೂ ಇಟ್ಟುಕೊಂಡಿದೀರಲ್ಲ. ಅಷ್ಟೇ ಸಾಕು" ಅವನ ಕಣ್ಣುಗಳು ನೀರಾಡಿದವು.

"ಇಲ್ಲ ದೊಡ್ಡಪ್ಪಾ ನೀವು ಬರಲೇಬೇಕು. ಅಜ್ಜಿಗೆ ಹೆದರಬೇಡಿ. ಅಲ್ಲಿ ನಾವೆಲ್ಲರೂ ಇದೀವಿ. ನಿಮ್ಮನ್ನು ಚೆನ್ನಾಗಿ ನೋಡಿಕೊಳ್ತೀನಿ. ರಾಜನೂ ಒಳ್ಳೆಯವನು. ಅವನು ನಿಮ್ಮನ್ನು ಖಂಡಿತಾ ಚೆನ್ನಾಗಿ ನೋಡಿಕೊಳ್ತಾನೆ."

"ಹೌದು ಕಂದಾ.... ನೀವೆಲ್ಲರೂ ಒಳ್ಳೆಯವರು. ಮುಗ್ಧರು. ಆದರೆ ನಾನು ಪಾಪಿ... ಪಾಪಿ ಒಳ್ಳೆಯವರ ನಡುವೆ ಇದ್ದರೆ ಅನರ್ಥವಾಗುತ್ತೆ."

"ಭಾವ, ಮತ್ತೆ ಮತ್ತೆ ಅದೇ ಮಾತನ್ನಾಡಬೇಡಿ. ನಿಮ್ಮ ವನವಾಸದ ದಿನಗಳು ಕಳೆದಿವೆ ಅಂತ ಅಂದ್ಕೊಳ್ಳಿ. ನಿಮ್ಮ ಪ್ರಾಯಶ್ಚಿತ್ತಕ್ಕೆ ನಿಮ್ಮ ತಾಯಿಯೂ ನಿಮ್ಮನ್ನು ಖಂಡಿತಾ ಮೆಚ್ತಾರೆ.... ಅವರು ನಿಮ್ಮನ್ನು ಕ್ಷಮಿಸಿದ್ದಾರೆ. ಆ ಕಾರಣದಿಂದಲೇ ರಾಜನ್ನ ಮೊಮ್ಮಗನನ್ನಾಗಿ ಸ್ವೀಕರಿಸಿದ್ದು. ಅಂಥಾದ್ದರಲ್ಲಿ

ನೀವು ಅವರು ಹೆತ್ತ ಮಗ. ನಿಮ್ಮನ್ನು ಖಂಡಿತಾ ಮತ್ತೆ ಸ್ವೀಕರಿಸುತ್ತಾರೆ... ಅವರು ನಿಮ್ಮನ್ನು ದೂರ ಮಾಡಲು ಸಾಧ್ಯವೆ?"....

"ಏಳಿ ದೊಡ್ಡಪ್ಪಾ" ಮಧುರ ಕೈಹಿಡಿದೆಳೆದಳು.

"ನಾನು ಖಂಡಿತಾ ಇದನ್ನು ನಿರೀಕ್ಷಿಸಿರಲಿಲ್ಲ. ನಿಮ್ಮಗಳ ದೊಡ್ಡ ಗುಣಕ್ಕೆ ಏನು ಹೇಳಬೇಕೋ ತಿಳಿಯದಾಗಿದೆ. ಆದರೆ ನಾನ್ಯಾರು ಅಂತ ಹೊರಗಿನವರು ಕೇಳಿದರೆ ಏನು ಹೇಳ್ತೀರಿ. ಹಿಂದೆಂದೋ ಮನೆಬಿಟ್ಟು ಹೋದವನು ಮತ್ತೆ ಮನೆಗೆ ವಾಪಸ್ಸು ಬಂದ ಅಂತ ಹೇಳಿದರೆ ಚೆನ್ನಾಗಿರುವುದಿಲ್ಲ. ರಾಜನ ತಂದೆ ಅಂತ ತಿಳಿದರೆ, ತಂದೆ ಬದುಕಿದ್ದೂ ಮಗನನ್ನು ದತ್ತು ಕೊಟ್ಟ ಅಂತ ಆಡ್ಕೋತಾರೆ. ಸ್ವತಃ ರಾಜನ ಮನಸ್ಸು ಕೆಡಬಹುದು. ಇದನ್ನೆಲ್ಲಾ ಯೋಚಿಸಬೇಡವೇನಮ್ಮ? ನಾನು ಅಜ್ಞಾತವಾಗಿಯೇ ಇರಲು ಬಯಸುತ್ತೀನಿ. ಅದರಲ್ಲಿ ಕ್ಷೇಮವಿದೆ."

"ಕೇಳಿದೋರಿಗೆ ನಾನು ಸರಿಯಾಗಿ ಉತ್ತರ ಹೇಳ್ತೀನಿ. ನೀವು ಮಾತನ್ನಾಡಲೇಬೇಡಿ.... ಸುಮ್ಮನಿದ್ದುಬಿಡಿ."

"ನೀನ್ನು ಚಿಕ್ಕವಳು ಮಗು. ನಿನಗೆ ಇದೆಲ್ಲಾ ಅರ್ಥವಾಗುವುದಿಲ್ಲ."

"ನಾನೀಗ ದೊಡ್ಡೋಳಾಗಿದೀನಿ. ನನಗೂ ಹದಿನೈದು ವರ್ಷ ಕತೆ ಪುಸ್ತಕಗಳನ್ನು ಓದ್ತೀನಿ. ಟಿ.ವಿ., ಸಿನಿಮಾಗಳನ್ನು ನೋಡ್ತೀನಿ. ನಮ್ಮ ಟೀಚರ್ಸ್‌ಗಳಿಂದ ಎಷ್ಟೋ ವಿಷಯಗಳು ತಿಳಿಯುತ್ತವೆ. ನಾನು, ಮಯೂರ ಸೇರಿ ಏನಾದ್ರೂ ಒಂದು ಉಪಾಯವನ್ನು ಹುಡುಕ್ತೀವಿ."

"ಬೇಡ ಮಧು, ಮಯೂರಂಗೆ ಏನೂ ಹೇಳ್ಬೇಡ. ಸದ್ಯಕ್ಕೆ ನಿನಗೆ ಮಾತ್ರ ತಿಳಿದಿರಲಿ. ಅವಳು ನೂರೆಂಟು ಪ್ರಶ್ನೆ ಕೇಳ್ತಾಳೆ."

"ಈ ತಂಟೆ ತಾಪತ್ರಯಗಳೆಲ್ಲ ಯಾಕೆ? ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ. ಹೇಗೋ ಬದುಕಿಕೊಳ್ತೀನಿ."

"ಇಲ್ಲ ನಾವುಗಳೆಲ್ಲಾ ಇದ್ದೂ, ನೀವು ಯಾರೂ ಇಲ್ಲದ ಪರದೇಶಿಯಂತೆ ದೇಶಾಂತರ ಹೋಗಬಾರದು. ಬಂದದ್ದನ್ನು ಹಾಗೇ ಸ್ವೀಕರಿಸೋಣ. ನಾವಾಗಿಯೇ ಏನನ್ನು ಹೇಳುವುದೂ, ಕೇಳುವುದು ಬೇಡ. ಹೀಗೆ ಎಷ್ಟು ದಿನ ನಡೆಯುತ್ತೋ ನಡೆಯಲಿ. ನಡೀರಿ.... ನಿಮ್ಮ ತಮ್ಮ ನಿಮ್ಮನ್ನು ಹುಡುಕಿಕೊಂಡು ಇಲ್ಲಿಗೇ ಬಂದಾರು." ಮೂವರೂ ರೈಲ್ವೇ ನಿಲ್ದಾಣದಿಂದ ಆಚೆ ಬಂದರು.

ಆಟೋದಿಂದ ಇಳಿದ ತಾಯಿ ಮಗಳು ಮನೆಯೊಳಕ್ಕೆ ಬಂದರು. ಮೂರ್ತಿ ಮಹಡಿಯ ಮೇಲಿನ ರೂಮಿಗೆ ಹೋದ. ಮಂದಾರ ತಾಯಿಯ ಬಳಿಗೆ ಓಡಿ ಬಂದಳು. "ಎಲ್ಲಿ ಹೋಗಿದ್ಯಮ್ಮ.... ಅಜ್ಜಿ ಗೊತ್ತಿಲ್ಲ ಅಂತಂದ್ರು."

"ಮಯೂರ, ಮಧುರಳ ಬಳಿಗೆ ಬಂದು ಕೆಳದನಿಯಲ್ಲಿ ಕೇಳಿದಳು. ಮತ್ತೇನೇ ನಿನ್ನ ಪ್ರಾಬ್ಲಂ? ಡಾಕ್ಟರ ಹತ್ರ ಹೋಗಿದ್ಯಾ?"

"ಹೂಂ. ಎಂದಷ್ಟೇ ಹೇಳಿದ ಮಧುರ ತಾಯಿಯ ಕಡೆ ನೋಡಿದಳು. ರಾಧಾ ಎಲ್ಲರಿಗೂ ತಿಂಡಿ ಕಾಫಿಯನ್ನು ಕೊಟ್ಟಳು. ಮಂದಾರ ಆಟವಾಡಲು ಹೋದಳು. ಮಯೂರ ಡ್ಯಾನ್ಸ್ ಕ್ಲಾಸ್‌ಗೆ ನಡೆದಳು. ಗೌರಮ್ಮ ದೇವಸ್ಥಾನಕ್ಕೆಂದು ಹೊರಟಳು. ಮಧುರ ಕಾಫಿತಿಂಡಿಯ ಬಟ್ಟಲನ್ನೆತ್ತಿಕೊಂಡು ಮಹಡಿ ಹತ್ತಿದಳು.

ರಾತ್ರಿಯ ಊಟದ ಹೊತ್ತಿಗೆ ಕೇಶವ ಹಿಂತಿರುಗಿದ. ಅವನ ಜೊತೆಗೆ ನಂಜುಂಡಸ್ವಾಮಿಯೂ ಇದ್ದರು. ಅಪರಾಧಿಯಂತೆ ತಲೆತಗ್ಗಿಸಿದ್ದರು.

* * * *

"ನಾನೂ ನೋಡ್ತಿದೀನಿ. ನೆನ್ನೆಯಿಂದ ಗುಸುಗುಸು ಪಿಸುಪಿಸು ಕಣ್ಣು ಸಂಜ್ಞೆ ಅದೇನು ಅಂತ ನಂಗೂ ಹೇಳಿ." ಗೌರಮ್ಮ ಎಂದಳು.

"ನಾನು ಹೇಳ್ತೀನಿ. ಆದರೆ ನೀನು ಯಾರನ್ನೂ ಬೈಯಬಾರದು" ಕೇಶವನೆಂದಾಗ ಗೌರಮ್ಮ ಹುಬ್ಬು ಗಂಟಿಕ್ಕಿದಳು.

"ಅಂಥಾ ಕಾರ್ಯ ಮಾಡಿದ್ದರೆ ಬೈಯೋದೇ"

"ಅಜ್ಜಿಗೆ ನಾನು ಹೇಳ್ತೀನಿ" ಮಧುರ ಅವಳ ಬಳಿ ಬಂದು ಕುಳಿತು ಅವರನ್ನು ತಬ್ಬಿಕೊಂಡಳು.

"ಆಹಾ.... ಅದೇನು ಮುದ್ದು?.... ಏನಾಗಬೇಕು ನನ್ನಿಂದ...?"

"ಅಜ್ಜೀ ನೀವು ಯಾವ ಉಡುಗೊರೆಯನ್ನು ನನಗೆ ಕೊಡಲಿಲ್ಲ. ನಂಗೆ ನಿಮ್ಮ ಮೇಲೆ ಕೋಪ."

"ಕೊಟ್ನಲ್ಲೇ... ಒಬ್ಬ ಅಣ್ಣನ್ನ ಉಡುಗೊರೆಯನ್ನಾಗಿ ಕೊಟ್ನಲ್ಲ.... ನಿಮ್ಮಮ್ಮ ಮಾಡದೇ ಇದ್ದುದನ್ನು ನಾನು ಮಾಡಿದೀನಿ."

"ಇದರಲ್ಲಿ ಅಮ್ಮಂದೇನು ತಪ್ಪು? ಹೋಗಲಿ ಬಿಡಿ. ನಾನೇ ನಿಮಗೆ ಒಂದು ಉಡುಗೊರೆಯನ್ನು ಕೊಡ್ತೀನಿ. ನೀವು ಬೇಡ ಅನ್ಬಾರ್ದು... ನಂಗೆ ಬೇಸರ ಆಗುತ್ತೆ."

"ಸರಿ... ಯಾಕಿಷ್ಟು ಪೀಠಿಕೆ? ಅದೇನು ಅಂತ ಹೇಳು."

"ನಮ್ಮ ಅಮ್ಮಂಗೆ ನಾವು ನಾಲ್ಕು ಜನ ಮಕ್ಕಳು.... ನಿಮಗೆ ಮೂರೇ ಜನ.... ನೀವು ಅಮ್ಮಂಗಿಂತ ಕಮ್ಮಿ ಅಂತ ಅನ್ನಿಸ್ತಿದೆ."

"ಅದಕ್ಕೇನು ಮಾಡುಕ್ಕೆ ಆಗುತ್ತೆ?.... ನನಗೂ ನಾಲ್ಕು ಜನ ಮಕ್ಕಳೇ.... ಇದ್ದಕ್ಕಿದ್ದಂತೆ ಗೌರಮ್ಮ ಮಾತು ನಿಲ್ಲಿಸಿದಳು.

"ನಿಮಗೂ ನಾಲ್ಕು ಜನ ಮಕ್ಕಳಿರಲಿ ಅಂತ ಆಸೆ ಅಜ್ಜೀ.... ಅದಕ್ಕೆ ನಿಮಗೋಸ್ಕರ ನಿಮ್ಮ ಮಗನನ್ನು ನಿಮಗೆ ಉಡುಗೊರೆಯನ್ನಾಗಿ ತಂದಿದೀನಿ."

"ಏನಿದು ತಮಾಷೆ ನನ್ಹತ್ರ. ಹೋಗು ದೂರ.." ಗೌರಮ್ಮ ರೇಗಿದಾಗ ಮಧುರಳ ಮುಖ ಕೆಟ್ಟಿತು.

"ನಾನು ಮೈನೆರೆದ ಗಳಿಗೆ ಚೆನ್ನಾಗಿದೆ. ಮನೇಲಿ ಎಲ್ಲಾ ಒಳ್ಳೇದೇ ಆಗುತ್ತೆ ಅಂತ ಶಾಸ್ತ್ರಿಗಳು ಹೇಳಿದ್ರು ಅಂತ ನೀವೇ ಅಂದ್ರಿ. ನಿಮಗೆ ಒಳ್ಳೇದಾಗಲಿ ಅಂತ ನಿಮಗೊಬ್ಬ ಮಗನನ್ನು ಹುಡುಕಿತಂದ್ರೆ ಹೀಗೆ ರೇಗಾಡ್ತೀರಾ? ನಾನೂ ದೊಡ್ಡಪ್ಪನ ಜೊತೆ ದೇಶಾಂತರ ಹೊರಟುಹೋಗ್ತೀನಿ. ಮತ್ತೆ ವಾಪಸ್ಸು ಬರುಲ್ಲ."

"ಯಾರೇ ಅವನು ನಿನ್ನ ದೊಡ್ಡಪ್ಪ... ಧೈರ್ಯ ಇದ್ದರೆ ಎದುರಿಗೆ ಬರಲಿ. ಕರಿ ಅವನನ್ನ ಎಲ್ಲಿ ಅಡಗಿದಾನೆ...?"

"ಅಮ್ಮಾ ಎರಡ್ದಿನದಿಂದ ಮೂರ್ತಿ ಇಲ್ಲೇ ನಮ್ಮ ಮನೆಯಲ್ಲಿ ಇದಾನೆ. ನಮ್ಮಗಳ ಹಾಗೇ ಅವನೂ ನಿನಗೆ ಮಗನೇ. ಅವನನ್ನು ದೂರ ಮಾಡಬೇಡಮ್ಮ.."

"ನಂಗೆ ಗೊತ್ತಿತ್ತು. ಹೀಗೇ ಆಗುತ್ತೆ ಅಂತ. ಮಗನನ್ನು ಮುಂದೆ ಕಳಿಸಿ, ಹಿಂದಿನಿಂದ ತಾನೂ ಬಂದು ಸೇರಿಕೊಳ್ಳುವ ಉಪಾಯ. ಆಶ್ರಮದಲ್ಲಿ ಹೇಳಿದ್ದೇನು? ಮೊದಲ್ನಿಂದ ಹೀಗೇ. ಬುದ್ಧಿಯೇ ಸ್ಥಿಮಿತದಲ್ಲಿಲ್ಲದವನು."

"ಅಂಥೋನು ಹೇಗಮ್ಮ ಒಂಟಿಯಾಗಿರ್ತಾನೆ? ಅವನಿಗೂ ನಮ್ಮನ್ನು ಬಿಟ್ಟರೆ ಬೇರೆ ಯಾರಿಲ್ಲ. ನೀನೇ ಹೇಳು. ಅವನೆಲ್ಲಿಗೆ ಹೋಗ್ತಾನೆ.?"

"ಇವನಂಥೋನಿಗೆ ಜೈಲಿದೆ. ಆಶ್ರಮಗಳಿವೆ. ದೇಶಾಂತರ ಹೋಗ್ತೀನಿ ಅಂತ ಹೆದಸಿರಿದೆ. ಈಗ ಇವನು ಇಲ್ಲಿ ಬಂದು ಇರತೊಡಗಿದರೆ, ಅವನ ಚರಿತ್ರೆಯ ಪುನರಾವರ್ತನೆಯಾಗುತ್ತದೆ."

"ಹಾಗೇನು ಆಗುಲ್ಲ. ಅವನ ವಯಸ್ಸು ಅಂಥದ್ದಲ್ಲ. ಪ್ರಾಯಶ್ಚಿತ್ತವಾಗಿದೆ. ನೊಂದಿದಾನೆ. ರಾಜಂಗೆ ಈ ವಿಷಯ ಎಂದಾದ್ರೂ ತಿಳಿದ್ರೆ ಏನಂದುಕೊಳ್ತಾನೆ ಹೇಳು? ರಾಜ ಹೇಗೆ ನಮ್ಮವನೋ... ಮೂರ್ತಿಯೂ ನಮ್ಮವನೇ.... ಅವನು ಎಂದಿಗೂ ನಿನ್ನ ಮಗನೇ.... ಆ ಸಂಬಂಧ ಎಲ್ಲಿ ಹೋಗುತ್ತೆ.?"

"ಮತ್ತೆ ಈ ಸಂಬಂಧವನ್ನು ಎಲ್ರಿಗೂ ಹೇಳಿಕೊಂಡು ತಿರುಗಾಡ್ಲಾ?"

"ಹಾಗೇನೂ ಮಾಡಬೇಕಾಗಿಲ್ಲ. ಸುಮ್ಮನಿದ್ರೆ ಸಾಕು. ಅವನು ಇಲ್ಲಿ ನಿನ್ನ ಕಣ್ಣೆದುರಿಗೆ ತಿರುಗಾಡುವುದು ಬೇಡಾಂತ ಇದ್ರೆ, ಅವನು ಮಹಡಿಯ ಮೇಲಿನ ರೂಮಿನಲ್ಲಿರಲಿ.... ಅವನಿಂದೆ ನಿನಗೆ ಯಾವ ಹಿಂಸೆಯೂ ಆಗುವುದಿಲ್ಲ." ಗೌರಮ್ಮ ಮಾತನಾಡದೇ ಸುಮ್ಮನಿದ್ದಾಗ ಅದನ್ನು ಸಮ್ಮತಿಯೆಂದು ಭಾವಿಸಿದರು.

ರಾಜ ಮನೆಯೊಳಕ್ಕೆ ಬಂದಾಗ ಎಲ್ಲರೂ ಅವನನ್ನೇ ನೋಡಿದಾಗ ಅವನಿಗೆ ಮುಜುಗರವಾಗಿತ್ತು. ಕೆಲವೇ ಸಮಯಗಳ ಮೊದಲು ನಡೆದ ಚರ್ಚೆಯ ಅವಶೇಷ ಎಂಬಂತೆ, ಮುಖ ಲಕ್ಷಣದಲ್ಲಿ ವ್ಯತ್ಯಾಸವಾಗಿತ್ತು. ಅವನು ಹೆದರದಿದ್ದರೂ ಆತಂಕ ಉಂಟು ಮಾಡಿತು. ಎರಡು ಮೂರು ದಿನ ತಾನು ಇಲ್ಲದಿದ್ದಾಗ ಏನೋ ನಡೆದಿದೆ. ಅದನ್ನು ಕೇಳುವುದಾದರೂ ಹೇಗೆ? ತಾನಿನ್ನು ಹೊಸಬ ಈ ಮನೆಗೆ.... ಎಲ್ಲರನ್ನು ನೋಡಿದರೂ ಅರ್ಥವಾಗುವಂತಿರಲಿಲ್ಲ. ಮಂದಾರಳ ಕಡೆ ನೋಡಿದಾಗ ಮುಗುಳ್ನಗೆ ಬೀರಿದ.

"ರಾಜಾ.... ಇನ್ಮೇಲಿಂದ ನೀನು ಇಲ್ಲೇ ಕೆಳಗೇ ಇರಬೇಕು.... ನಮ್ಮ ಜೊತೆಗೆ. ನಿನ್ನ ಲಗೇಜನ್ನು ಇಲ್ಲಿಗೇ ತಂದು ಇಟ್ಟಿದ್ದಾಗಿದೆ."

"ಹೌದಾ?" ಆ ಬದಲಾವಣೆಯ ಉದ್ದೇಶ ಗೊತ್ತಾಗಲಿಲ್ಲ ಅವನಿಗೆ.

"ನಿನ್ನ ರೂಮಿನಲ್ಲಿ ಈಗ ನಮ್ಮ ದೊಡ್ಡಪ್ಪ ಇದಾರೆ..."

"ದೊಡ್ಡಪ್ಪನಾ? ಎಲ್ಲಿಂದ ಬಂದಿದಾರೆ?

"ರಾಜಾ.... ಮೊದಲು ಕೈಕಾಲು ಮುಖ ತೊಳ್ಕೋ.... ನಿಧಾನವಾಗಿ ಎಲ್ಲಾ ಮಾತಾಡೋಣ. ಊರ್ನಲ್ಲಿ ಎಲ್ಲಾ ಚೆನ್ನಾಗಿದಾರೆ ತನೇ..."

"ಹೂಂ.... ಅತ್ತೆ ಒಂದಿಷ್ಟು ತಿಂಡಿಗಳನ್ನು ಕಳಿಸಿದ್ದಾರೆ." ರಾಜ ಕೈಚೀಲವನ್ನು ರಾಧಳ ಕೈಗಿತ್ತ. ಮುಖ ತೊಳೆದು ಬಂದವನಿಗೆ ರಾಧಾ ಬಿಸಿಬಿಸಿ ಕಾಫಿಯನ್ನಿತ್ತಳು.

"ಅಜ್ಜಿ ಎಲ್ಲಿ ಕಾಣ್ತಿಲ್ಲ?"

"ಈಗ್ತಾನೇ ದೇವಸ್ಥಾನಕ್ಕೆ ಅಂತ ಹೋದ್ರು.... ಮಾವಂದಿರು ನಿನ್ನನ್ನ ಏನಾದ್ರೂ ಕೇಳಿದ್ರಾ?"

"ಇಲ್ಲ. ಯಾರೂ ಏನನ್ನು ಕೇಳ್ಲಿಲ್ಲ. ತುಂಬಾ ಚೆನ್ನಾಗಿ ಮಾತನಾಡ್ಸಿದ್ರು... ಆಗಾಗ್ಗೆ ಬರ್ತಾ ಇರು ಅಂತಾದ್ರು.... ಮಯೂರ ಎಲ್ಲಿ? ಚುನ್ನಿ ಅವಳಿಗೆ ಅಂತ ಕೆಲವು ಪುಸ್ತಕಗಳನ್ನು ಕೊಟ್ಟಿದಾಳೆ."

"ಡ್ಯಾನ್ಸ್ ಕ್ಲಾಸಿಗೆ ಹೋಗಿದಾಳೆ. ಅವಳ ರೂಮ್ನಲ್ಲಿ ಇಟ್ಟುಬಿಡು" ರಾಜ ರೂಮಿಗೆ ಬಂದಾಗ ಮಧುರ ಏನನ್ನೋ ಓದುತ್ತಿದ್ದವಳು ಅವನ ಕಡೆ ನೋಡಿ ಕಿರುನಗೆ ಬೀರಿದಳು.

"ಊರ್ನಲ್ಲಿ ಎಲ್ಲಾ ಚೆನ್ನಾಗಿತ್ತಾ? ಬೇಜಾರಾಗ್ಲಿಲ್ವಾ?"

"ಸ್ವಲ್ಪ ಬೇಜಾರಾಗ್ತಿತ್ತು. ನಿಮ್ಮಗಳ ನೆನಪು ತುಂಬಾ ಬರ್ತಿತ್ತು. ಅದ್ಸರಿ. ಮನೇಲಿ ಎಲ್ರೂ ಒಂಥರಾ ಇದಾರಲ್ಲ. ಯಾಕೆ? ಏನಾದ್ರೂ ಮಾತುಕತೆ ಆಯ್ತಾ?..."

"ಏನೂ ಇಲ್ಲ. ಮನೆಗೆ ಒಬ್ಬರು ಹೊಸದಾಗಿ ಬಂದು ಸೇರಿಕೊಂಡಿದಾರೆ. ಅವರ ವಿಷಯಾನೇ ಚರ್ಚೆ ಮಾಡ್ತಾರೆ ಅಷ್ಟೇ."

"ಯಾರು ನಾನಾ... ಆ ಹೊಸಬ?"

"ಅಲ್ಲಪ್ಪಾ. ನೀನಾಗ್ಲೇ ಹಳಬನಾಗೀದಿಯ. ಇನ್ನು ಒಬ್ರು..."

"ಯಾರಪ್ಪಾ ಅವರು ಮೇಲಿನ ರೂಂನಲ್ಲಿದಾರಾ?

"ಹೂಂ... ಅವರು ನಮಗೆ ದೊಡ್ಡಪ್ಪನಾಗ್ಬೇಕು."

"ಹೂಂ.... ಮಂದಾರ ಹೇಳಿದ್ಲು. ನಾನು ತಮಾಷೆ ಅಂತ ಅಂದ್ಕೊಂ
ಎಲ್ಲಿಂದ ಬಂದಿದಾರೆ.?"

"ಅವರಿಗೆ ಯಾರೂ ಇಲ್ಲ. ಒಬ್ಬರೇ ಇದಾರೆ. ಅಪ್ಪಂಗೆ ತುಂಬ
ಬೇಕಾದವರು. ಅಜ್ಜಿಗೆ ಇಷ್ಟ ಇರಲಿಲ್ಲ. ನಾವೆಲ್ಲಾ ಒಪ್ಪಿಸಿದೆವು. ಏನಂತ ಹೇ
ಒಪ್ಪಿಸಿದೆವು ಗೊತ್ತಾ? ನಿಮಗೆ ಒಬ್ಬ ಮಗನನ್ನು ಉಡುಗೊರೆಯನ್ನಾ
ಕೊಡ್ತಿದೀವಿ ಅಂತ..."

"ಅಜ್ಜಿ ಒಪ್ಕೊಂಡ್ರಾ?"

"ಇಲ್ಲ. ಇನ್ನು ಗುಂ ಅಂತ್ಲೇ ಇದಾರೆ. ಕ್ರಮೇಣ ಸರಿ ಹೋಗಬಹುದು
ಸರಿ ಹೋಗದಿದ್ದರೂ ಪರವಾಗಿಲ್ಲ. ಉಡುಗೊರೆಯ ವ್ಯಕ್ತಿ ಮನೇಲೆ
ಇರ್ತಾರಲ್ಲ." ಮಧುರ ಮಂದಹಾಸ ಬೀರಿದಳು. ರಾಜ ಗಂಭೀರನಾದ.

"ಏನು ಯೋಚಿಸ್ತಿದೀಯ ರಾಜ..."

"ಏನಿಲ್ಲ.... ನೀವೆಲ್ಲ ಎಷ್ಟು ಒಳ್ಳೆಯವರು ಅಂತ ಯೋಚಿಸ್ತಿದ್ದೆ."

"ಹೆಚ್ಚು ಯೋಚಿಸ್ಬೇಡ. ಉಡುಗೊರೆಗೆ ಮತ್ತೊಂದು ಉಡುಗೊರೆ
ಅಜ್ಜಿಗೊಂದು ನಮಗೆಲ್ಲಾ ಇನ್ನೊಂದು... ನಮಗೇ ಲಾಭ." ಮತ್ತೊವ
ಮುಗುಳ್ನಕ್ಕಳು.

  

ಮಧುರ, ಮಯೂರ, ಮಂದಾರ ಸೋದರಿಯರು.
ಮಗ ಕೇಶವನಿಗೆ ಗಂಡು ಮಕ್ಕಳಿಲ್ಲ ಎನ್ನುವ
ಕೊರತೆ. ಈ ಸೋದರಿಯರ ಅಜ್ಜಿಗೆ ಹಿರಿಮಗಳು
ಮಧುರ ಋತುಮತಿಯಾದ 'ಶುಭ ಫಳಿಗೆ'ಯಲ್ಲಿ
ಮೊಮ್ಮಗನ ಆಗಮನವಾಗುತ್ತದೆ.
ರಾಧಾ, ಕೇಶವ ದಂಪತಿಗಳಿಗೆ ಹಿರಿಮಗನಾಗಿ
ಬರುವ ಮನೋಹರನನ್ನು ಅಜ್ಜಿ ಗೌರಮ್ಮ
ಸ್ವೀಕರಿಸಿದಳೆ? ಎಷ್ಟೋ ವರ್ಷಗಳ ಹಿಂದೆ ಮನೆ
ಬಿಟ್ಟು ಹೋದ ಮೂರ್ತಿ ಮತ್ತೆ ಪ್ರತ್ಯಕ್ಷನಾದಾಗ
ಗೌರಮ್ಮ ಅವನನನ್ನು ಕ್ಷಮಿಸುವುದಿಲ್ಲ. ಆದರೂ
ಶುಭ ಫಳಿಗೆಯು ತನ್ನ ಪ್ರಭಾವವನ್ನು ಬೀರುತ್ತದೆ....
ರಾಧಾ, ಕೇಶವರ ಅಂತರಂಗದಲ್ಲಿರುವುದೇನು!
ಗೌರಮ್ಮನ ಅಳಲು ಏನು.....! ಮನೋಹರನ
ಸ್ಥಿತಿ... ಮೂವರು ಸೋದರಿಯರ
ಭಿನ್ನಾಭಿಪ್ರಾಯಗಳು. ಇದೆಲ್ಲದರ ನಡುವೆಯೂ ಕತೆ
ಒಂದು ಹಂತಕ್ಕೆ ಬಂದು ತಲುಪುತ್ತದೆ. ಅಂತ್ಯದಲ್ಲಿ
ಏನಾಯಿತು ಎಂದು ಓದಿ ತಿಳಿಯುವಿರಲ್ಲವೆ?
ಇದೋ ನಿಮಗಾಗಿ ಈ ಕಾದಂಬರಿ.....
'ಶುಭ ಫಳಿಗೆ'.

**ಸೌಮ್ಯ. ಎಂ**
ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು
ಬಸವನಗುಡಿ, ಬೆಂಗಳೂರು-4